ಜಯತು ಭಗವಾನ್

ಬಾಲಸರಸ್ವತೀ ಗ್ರಂಥಮಾಲಾ

---

# ಪ್ರಭಾವಳಿ

# ೨

# ಮಹಾರಾಜಸಿಂಹ

(ಅಂತರಂಗದ ಇತಿಹಾಸ)



ವಿದ್ವಾನ್

ವಿದ್ಯಾಭೂಷಣ ಬಾಲಸರಸ್ವತಿಯವರಿಂದ

ವಿರಚಿತವಾದುದು

---

ಬೆಂಗಳೂರು

ವಿ. ಸ್ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

ice 1-0-0.] 1931 [ಬೆಲೆ ೧-೦-೦.



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

# ಪ್ರಸ್ತಾವನೆ

ಪ್ರಭಾವಳಿಯಲ್ಲಿ ಎರಡನೆಯದಾದ "ಮಹಾರಾಜಸಿಂಹ" ನೆಂಬ ಈ ಕ್ಷುದ್ರ ಗ್ರಂಥವು ಅದೊಂದು ಐತಿಹಾಸಿಕ ನವನ್ಯಾಸವು. ಅದ್ಭುತರಸದಿಂದೊಪ್ಪುವ ಕಾಲ್ಪನಿಕ ನವನ್ಯಾಸಗಳು ನಮ್ಮ ಕರ್ಣಾಟ ದೇಶಬಾಂಧವರ ಮನಸ್ಸಿಗೆ ರುಚಿಸುವ ಹಾಗೆ ಐತಿಹಾಸಿಕ ನವನ್ಯಾಸಗಳು ಅಷ್ಟಾಗಿ ರುಚಿಸಲಾರವೆಂದು ಅನುಭವದಿಂದ ತಿಳಿಸಬೇಕಾಗಿರುವುದು.

ದೇಶದ ಸತ್ಪ್ರಜೆಯಾಗಿ ದಿನದಿನಕ್ಕೆ ಏಳಿಗೆಯನ್ನು ಪಡೆಯಬೇಕೆಂಬ ಆಶೋತ್ತರರಾದ ಮಾನವ ಮಹಾಶಯರಿಗೆ ಐತಿಹಾಸಿಕ ನವನ್ಯಾಸಗಳಿಂದುಂಟಾಗ ಬಹುದಾದ ಪ್ರಯೋಜನಗಳು ಕಾಲ್ಪನಿಕನವನ್ಯಾಸಗಳಿಂದೆಂದಿಗೂ ಉಂಟಾಗ ಲಾರವೆಂದು ನಾವು ಮುಕ್ತಕಂಠರಾಗಿ ಲೋಕಕ್ಕೆಲ್ಲಾ ಸಾರುವವರಾಗಿರುವೆವು. ಆಯಾ ದೇಶಗಳಲ್ಲಿನ ಮಹಾಪುರುಷರ ಇತಿಹಾಸ (ಚರಿತ್ರ)ಗಳು ಎಲ್ಲಾ ಬಗೆ ಗಳಿಂದಲೂ ಸರ್ವಜನ ಚಿತ್ತರಂಜಕವಾಗಿರುವುವೆಂದು ಸಿದ್ಧಾಂತವಾಗಿ ಹೇಳುವು ದಕ್ಕಾಗಲಾರದು. ಹೀಗಿರುವುದಾದರೂ ಸಿದ್ಧಹಸ್ತರಾದ ಐತಿಹಾಸಿಕ ನವನ್ಯಾಸ ಲೇಖಕರು ನೀರಸವಾಗಿರತಕ್ಕ ಮಹಾಪುರುಷರ ಚರಿತ್ರೆಗಳನ್ನು ತಮ್ಮ ತಮ್ಮ ಘಟನಾ ಚಮತ್ಕಾರಗಳಿಂದ ಪ್ರಿಯಪಾಠಕ ಮಹಾಶಯರಿಗೆ ಹೃದಯಂಗಮವಾಗುವ ರೀತಿಯಲ್ಲಿ ರಚಿಸಿ ಭಾಷಾಪ್ರಪಂಚದಲ್ಲಿ ದೇದೀಪ್ಯಮಾನರಾಗಿರುವರು. ಇಂತಹ ಮಹನೀಯರ ಮೇಲ್ಪಂತಿಯನ್ನು ಅನುಸರಿಸಿಯೇ ನಾವೂ ಈ ಮಹಾರಾಜಸಿಂಹ ನೆಂಬ ಐತಿಹಾಸಿಕ ನವನ್ಯಾಸವನ್ನು ರಚಿಸಲು ಸಿದ್ಧರಾದೆವು. ಈ ಉದ್ದೇಶಕ್ಕನು ಸಾರವಾಗಿಯೇ ರಾಜಾಸ್ಥಾನದ ವೀರ ಮಹಾಪುರುಷರ ಚರಿತಾವಳಿಯಲ್ಲಿ ಮಾರ ವಾಡ ಸಂಸ್ಥಾನದ ಐನೂರು ವರ್ಷಗಳ ಹಿಂದಣ ಅದೊಂದು ಅಂತರಂಗದಲ್ಲಿ ನಡೆದ ಇತಿಹಾಸದ ಘಟನಾಚಕ್ರವನ್ನು ಅವಲಂಬಿಸಿಕೊಂಡು ನಾವು ಈ ಗ್ರಂಥ ವನ್ನು ರಚಿಸಿ ಕನ್ನಡ ನಾಡಿನ ಸ್ತ್ರೀಪುರುಷ ಪಾಠಕ ಮಹಾಶಯರ ಅವಗಾಹನೆಗಾಗಿ ಅತ್ಯಂತಾದರದೊಡನೆ ಸಮರ್ಪಿಸಿಕೊಳ್ಳುವವರಾಗಿರುವೆವು.

ಎಲ್ಲಾ ಗ್ರಂಥಗಳಲ್ಲಿಯೂ ಎಲ್ಲಾ ರಸಗಳೂ ತುಂಬಿ ತುಳುಕಾಡುತ್ತಿರುವು ವೆಂದು ಮಟ್ಟಿಗೆ ಆರೂ ಭಾವಿಸಲಾಗದು. ಒಂದೊಂದು ಗ್ರಂಥದಲ್ಲಿ ಒಂದೊಂದು ರಸವು ಪ್ರಧಾನವಾಗಿದ್ದು, ಉಳಿದ ರಸಗಳು ಪ್ರಧಾನ ರಸಕ್ಕೆ ಉಪಷ್ಟಂಭಕವಾಗಿ ವರ್ತಿಸುತ್ತಿರುವುವು. ಇಂತಹ ಪ್ರಧಾನಾಧೀನರಸಗಳ ತಾರತಮ್ಯವನ್ನರಿತು ಗ್ರಂಥವನ್ನು ಆಮೂಲಾಗ್ರವಾಗಿ ಓದುವವರು ಗ್ರಂಥವಾಚನದಿಂದುಂಟಾಗಬಹು

ದಾದ ಲಾಭ ಪ್ರಯೋಜನಗಳಿಗೆ ಭಾಗಿಗಳಾಗುವರು. ಇಂಥವರನ್ನೇ ನಾವು ಪ್ರಿಯ ಪಾಠಕ ಮಹಾಶಯರೆಂದು ಕರೆಯುವವರಾಗಿರುವೆವು. ಆದುದರಿಂದ ನಮ್ಮ ಪ್ರಿಯ ಪಾಠಕ ಮಹಾಶಯರು ಈ ಗ್ರಂಥವನ್ನು ಮೊದಲಿನಿಂದ ಕೊನೆಯ ವರೆಗೂ ಏಕಾಗ್ರಚಿತ್ತತೆಯಿಂದೋದಿ ರಸವಿಡಿದು ಆನಂದಿಸುವುದಾದರೆ, ನಾವು ಈ ಗ್ರಂಥ ರಚನೆಗಾಗಿ ಪಟ್ಟ ಶ್ರಮವು ಸಾರ್ಥಕವೆನಿಸುವುದು.

ದೃಷ್ಟಂ ಕಿಮಪಿ ಲೋಕೇಸ್ಮಿನ್ । ನನಿರ್ದೋಷಂ ನನಿರ್ಗುಣಂ ॥
ಆವೃಣುಧ್ವಮತೋದೋಷಾನ್ । ವಿವೃಣುಧ್ವಂಗುಣಾನ್ ಬುಧಾಃ ॥

ತಾತ್ಪರ್ಯವೇನೆಂದರೆ—ಲೋಕದಲ್ಲಿ ದೋಷವಿಲ್ಲದ ವಸ್ತುವಾಗಲಿ, ಗುಣ ವಿಲ್ಲದ ವಸ್ತುವೇ ಆಗಲಿ ಕಂಡುಬರುತ್ತಿಲ್ಲವಾದ ಕಾರಣ, ದೋಷಗಳನ್ನು ಒತ್ತಟ್ಟಿಗಿಟ್ಟು, ವಿವೇಕಿಗಳು ಗಣಗಳನ್ನೇ ಸ್ವೀಕರಿಸಿ ಆನಂದಿಸತಕ್ಕುದು.

ನಾವೂ ಈ ಶ್ಲೋಕದ ಅಭಿಪ್ರಾಯವನ್ನೇ ನಮ್ಮ ಪ್ರಿಯಪಾಠಕ ಮಹಾ ಶಯರ ಮುಂದಿಟ್ಟು, ಇಷ್ಟು ಉಚ್ಛೃಂಖಲತೆಯಿಂದ ವರ್ತಿಸಿದುದಕ್ಕಾಗಿ ಅವ ರೆಲ್ಲರ ಕ್ಷಮೆಯನ್ನು ಪ್ರಾರ್ಥಿಸುವವರಾಗಿರುವೆವು.

೨೪ ಸೆಪ್ಟಂಬರ್ ೧೯೩೧,
ಮೈಸೂರು.

ದೇಶಭಾಷಾಭಿಮಾನಿವಶಂವದ,
"ಬಾಲಸರಸ್ವತಿ."



ಜಯತು ಭಗವಾ೯

**ಬಾಲಸರಸ್ವತೀ ಗ್ರಂಥಮಾಲಾ**

---

# ಪ್ರಭಾವಳಿ

# ೨

# ಮಹಾರಾಜಸಿಂಹ

(ಅಂತರಂಗದ ಇತಿಹಾಸ)

## ಒಂದನೆಯ ವಿಲಾಸ

ಭರತಖಂಡದ ದಕ್ಷಿಣಾಪಥದಲ್ಲಿ ಅಹಮ್ಮದಾಬಾದ್ ಎಂದು ಪ್ರಸಿದ್ಧವಾದ ಅದೊಂದು ನಗರವು ಈಗೇಣ ಕಾಲದ ಆಬಾಲವೃದ್ಧರೆಲ್ಲರಿಗೂ ಕರ್ಣತಾಡಿತವಾಗಿರುವುದು. ಆ ನಗರದ ಬಳಿಯಲ್ಲಿಯೇ ನಿರ್ಜನವಾದದೊಂದು ಕಾಡಿರುವುದು. ಅದರ ಮಧ್ಯಭಾಗದಲ್ಲಿ ಒಂದು ಸಣ್ಣದಾದ ದೇವಮಂದಿರವಿರುವುದನ್ನು ಆ ನಗರವಾಸಿಗಳು ಈಗಲೂ ಪಥಿಕರಿಗೆ ತೋರುತ್ತಿರುವರು. ನಾವು ಆವ ಕಾಲದ ಘಟನಾವಿಶೇಷವನ್ನು ಕುರಿತು ಉಲ್ಲೇಖಿಸಲು ಯತ್ನಿಸಿರುವೆವೋ, ಆ ಕಾಲದಲ್ಲಿಯೂ ಈ ದೇವಮಂದಿರವು ಈಗಿನಂತೆಯೇ ಇದ್ದಿತೆಂಬುದು ವೃದ್ಧಪರಂಪರೆಯಿಂದ ತಿಳಿದುಬರುತ್ತಿರುವುದು. ಇಂದಿಗೆ ಪ್ರಾಯಿಕವಾಗಿ ಐನೂರು ವರ್ಷಗಳ ಕಾಲವು ಕಳೆದು ಹೋಗಿರಬಹುದು, ಆದರೂ ದೇವಮಂದಿರವು ಮುಟ್ಟಿಗೆ ಕಾಲಪಾಶದ ಹಾವಳಿಗೆ ಸಿಲುಕದೆ ಒಂದೇ ಬಗೆಯಾಗಿರುವುದನ್ನು ನೋಡಿದರೆ, ಕಾಲಪುರುಷನ ಅತ್ಯಾಚಾರವು ಎಲ್ಲೆಡೆಗಳಲ್ಲಿಯೂ ಸಮವಲ್ಲವೆಂದೂ, ಪಕ್ಷಪಾತವು ಆರಿಗೂ ತಪ್ಪಿದುದಲ್ಲವೆಂದೂ ತೋರಿಬರುತ್ತಿರುವುದು.

---

**ವಿದ್ವಾ೯ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.**

ಇಂದಿಗೆ ಐನೂರು ವರ್ಷಗಳ ಹಿಂದೆ ವೈಶಾಖಮಾಸದ ಒಂದಾನೊಂದು ದಿನ ಮಧ್ಯಾಹ್ನದ ಎರಡು ಗಂಟೆಯ ಸಮಯದಲ್ಲಿ ಒಬ್ಬ ಅಶ್ವಾರೋಹಿಯಾದ ಯೋಧನು ಬಿಸಿಲಿನ ಬೇಗೆಯಿಂದ ಸೊಕ್ಕಿ ಸೊರಗಿದವನಾಗಿ, ಮೇಲೆ ಹೇಳಿದ ದೇವಮಂದಿರದ ಬಳಿಗೈತಂದು ಸುತ್ತಲೂ ನೋಡಿದನು. ಆಗ ಮಂದಿರದಲ್ಲಿ ಒಬ್ಬ ಸನ್ಯಾಸಿಯು ಕುಳಿತುಕೊಂಡು ದೇವರ ಪೂಜೆಯನ್ನು ಮಾಡುತ್ತಿದ್ದನು. ಬಳಲಿದ ಯೋಧನು ಆ ಸನ್ಯಾಸಿಯನ್ನು ಕುರಿತು—ಪೂಜ್ಯಪಾದ! ಬಾಯಾರಿಕೆಯಿಂದ ನನ್ನ ಅಂಗಾಂಗಗಳೆಲ್ಲವೂ ತತ್ತರಗುಟ್ಟುತ್ತಿರುವುವು. ಪಾಮರನಲ್ಲಿ ಕನಿಕರವಿಟ್ಟು ಕುಡಿಯುವುದಕ್ಕೆ ಒಂದು ತೊಟ್ಟು ನೀರನ್ನು ಕೊಡುವುದಾದರೆ ತಮ್ಮ ಮಹೋಪಕಾರವು ಚಿರಸ್ಮರಣೀಯವಾಗುವುದು, ಎನಲಾಗಿ ಆ ಸನ್ಯಾಸಿಯು ಯೋಧನನ್ನು ನೋಡಿಯೂ ನೋಡದವನಂತೆಯೂ ಆತನ ಕಾತರೋಕ್ತಿಗಳನ್ನು ಕೇಳಿಯೂ ಕೇಳವವನಂತೆಯೂ ತನ್ನ ಕೆಲಸದಲ್ಲಿಯೇ ಮಗ್ನನಾಗಿದ್ದು ಬಿಟ್ಟನು.

ಬಳಿಕ ಯೋಧನು ಕುದುರೆಯಿಂದಿಳಿದು ಅದನ್ನು ಒಂದು ಗಿಡಕ್ಕೆ ಕಟ್ಟಿಹಾಕಿ ದೇವಮಂದಿರದ ಪಾವಟಿಗೆಗಳನ್ನೇರಿ ಸನ್ಯಾಸಿಯಿದ್ದಲ್ಲಿಗೆ ಬಂದು ಭಯಭಕ್ತಿಗಳಿಂದ ಆತನಿಗೆರಗಿ ಮತ್ತೆ ಕುಡಿಯುವುದಕ್ಕೆ ನೀರನ್ನು ಬೇಡಿದನು. ಸನ್ಯಾಸಿಯು ಇದಕ್ಕೂ ಗಮನಕೊಡಲಿಲ್ಲ. ಬಲು ಬಳಲಿ ತೊಳಲುತ್ತಿರುವ ಯೋಧನು ಸನ್ಯಾಸಿಯ ಉದಾಸೀನತೆಯನ್ನು ನೋಡಿ ಕೋಪಗೊಂಡು 'ಆಪತ್ಕಾಲೇ ನಾಸ್ತಿ ಮರ್ಯಾದಾ' ಎಂಬ ನುಡಿಗನುಸಾರವಾಗಿ ದೇವಸನ್ನಿಧಿಯಲ್ಲಿದ್ದ ನೀರಿನ ಪಾತ್ರೆಯನ್ನು ಕಯ್ಯಲ್ಲಿ ತೆಗೆದುಕೊಂಡು ನೀರನ್ನು ಬಸಿದುಕೊಳ್ಳಲಾರಂಭಿಸಿದನು.

ಅಷ್ಟು ಹೊತ್ತಿಗೆ ಸರಿಯಾಗಿ ಮಂದಿರದ ಒಳಗಡೆಯಿಂದ ಪರಮಸುಂದರಿಯಾದ ಬಾಲಿಕೆಯೊಬ್ಬಳು ಯೋಧನ ಇದಿರಿನಲ್ಲಿ ಬಂದು ನಿಂತು, ಆತನ ಕಯ್ಯನ್ನು ಹಿಡಿದುಕೊಂಡು—'ದೇವತಾ ಸನ್ನಿಧಿಯಲ್ಲಿ ಇಂತಹ ಅತ್ಯಾಚಾರವು ಆರಿಗೂ ಮಂಗಳಕರವಲ್ಲವು,' ಎಂದು ನಿಷೇಧಿಸಿದಳು. ಯುವಕನಾದ ಯೋಧನಿಗೆ ಇದರಿಂದ ಭಯವೇನೂ ಉಂಟಾಗಲಿಲ್ಲ. ಕಾರಣವೇನೆಂದರೆ—ಆವ ಮನೋಭಾವಕ್ಕೆ ಭಯವೆನ್ನುವರೆಂಬುದನ್ನು ನಮ್ಮ ಯುವಕನು ಬಾಲ್ಯದಿಂದಲೂ ಅರಿತವನಾಗಿಯೇ ಇರಲಿಲ್ಲ. ಯುವ

ಯೋಧನು ದೇವತಾಮೂರ್ತಿಯಂತಿರುವ ಪರಮಸುಂದರಿಯಾದ ಬಾಲಿಕೆಯು ತನ್ನ ಇದಿರಿನಲ್ಲಿ ತಟ್ಟನೆ ಬಂದು ನಿಂತುದನ್ನು ನೋಡಿ ಅಚ್ಚರಿಗೊಂಡವನಾದರೂ, ನೀರನ್ನು ಕುಡಿವುದರಲ್ಲಿ ಮಟ್ಟಿಗೆ ಆತನ ವ್ಯಾಪಾರವು ಶಾಂತವಾಗಲಿಲ್ಲ. ಇದನ್ನು ತಪ್ಪಿಸಬೇಕೆಂದು ಬಾಲೆಯು ಬಹುತರವಾಗಿ ಯತ್ನಮಾಡಿನೋಡಿದಳು. ಪರಾಕ್ರಮಶಾಲಿಯದ ಯೋಧನ ಮುಂದೆ ಅಬಲೆಯ ಸಾಹಸವು ಫಲಿಸುವುದೆಂದರೇನು? ಆದರೂ ದೇವ ಪಾತ್ರೆಯು ಅಪವಿತ್ರವಾದುದೆಂಬ ವ್ಯಸನದಿಂದ ಬಾಲಿಕೆಯು ಯುವಕನನ್ನು ದೂರ ತೊಲಗುವಂತೆ ನಿರ್ಬಂಧಪಡಿಸಲಾರಂಭಿಸಿದಳು. ಆಗ ಸನ್ಯಾಸಿಯು ಬಹಿರ್ಮುಖನಾಗಿ ಹುಡುಗಿಗೆ ಕಣ್ಮರೆಯಾಗುವಂತೆ ಇಂಗಿತದಿಂದ ಸೂಚಿಸಿದೊಡನೆಯೇ, ಆ ಬಾಲೆಯು ಮತ್ತಾವ ಮಾತನ್ನೂ ಆಡದೆ ಮಾಯವಾಗಿಬಿಟ್ಟಳು.

ಯುವಕನು ತೃಪ್ತಿಯಾಗುವ ವರೆಗೂ ನೀರನ್ನು ಕುಡಿದು ಶ್ರಮವನ್ನು ಪರಿಹರಿಸಿಕೊಳ್ಳುವ ನೆಪದಿಂದ ದೇವಮಂದಿರದ ಸನ್ನಿವೇಶವನ್ನು ಪರೀಕ್ಷಿಸಲಾರಂಭಿಸಿದನು. ಆವ ಕಾರಣದಿಂದಲೂ ಹಿಂದಣ ದೃಶ್ಯದ ಮರ್ಮವಾವುದೂ ಗೊತ್ತಾಗದಿರಲು, ಬಲುಹೊತ್ತು ಮಂದಿರದಲ್ಲಿರುವುದು ಸರಿಯಲ್ಲವೆಂದು ಯುವಕನು ಮುಂದಣ ಪಯಣಕ್ಕೆ ಸಿದ್ಧನಾದನು. ಇದನ್ನು ಕಂಡ ಸನ್ಯಾಸಿಯು ಯುವಕನಿಗೆ ಅಲ್ಲಿಯೇ ಕುಳ್ಳಿರುವಂತೆ ಭಾವವನ್ನು ತೋರ್ಪಡಿಸಿದನು. ಯುವಕನು ಯತ್ನವಿಲ್ಲದೆ ಸನ್ಯಾಸಿಯ ಮೂರ್ತಿಯನ್ನೇ ಎವೆಯಿಕ್ಕದೆ ನೋಡುತ್ತಾ ಕುಳಿತುಬಿಟ್ಟನು. ಸನ್ಯಾಸಿಯು ಮತ್ತೆ ಅಂತರ್ಮುಖಿಯಾಗಲು, ಯುವಕನು ಮತ್ತೊಂದು ತಡವೆ ಬಾಲಿಕೆಯನ್ನು ನೋಡಿ ಅಲ್ಲಿನ ವಿದ್ಯಮಾನಗಳನ್ನು ತಿಳಿಯಬೇಕೆಂಬ ಕುತೂಹಲದಿಂದ ಕಾಲವನ್ನು ಕಳೆಯ ತೊಡಗಿದನು. ಕಾಲವಾವದೋ ವಿಲಂಬದಿಂದ ಕಳೆದು ಹೋಗುವ ಹಾಗೆ ತೋರುತ್ತಿದ್ದಿತು.

## ಎರಡನೆಯ ವಿಲಾಸ

ಯುವಕನು ಅತಿ ಪ್ರಯಾಸದಿಂದ ಪ್ರಾಯಿಕವಾಗಿ ಅರ್ಧಘಂಟೆಯ ವರೆಗೂ ಕಾದು ನೋಡಿದನು. ಆದರೂ ಸನ್ಯಾಸಿಯು ಬಹಿರ್ಮುಖ ನಾಗಲೇ ಇಲ್ಲ. ಬೇರೊಂದು ಕಾರ್ಯದಲ್ಲಿ ನಿಯುಕ್ತನಾಗಿದ್ದ ಯುವಕನು ಎಷ್ಟು ಹೊತ್ತು ತಾನೇ ಕಾದಿರಲಾದೀತು? ಒಂದು ವೇಳೆ ಕಾದಿರುವು ದಾವರೂ ಉಂಟಾಗಬಹುದಾದ ಲಾಭ ತಾನೇ ಏನು? ಮಧ್ಯಮಾರ್ಗದಲ್ಲಿ ಸಂಜೆಯಾಗುವುದಾದರೆ, ಅಪರಿಚಿತವಾದ ಸ್ಥಲಗಳಲ್ಲಿ ರಾತ್ರಿಯನ್ನು ಕಳೆ ವುದು ಎಂತಹ ಧೀರನಿಗಾದರೂ ಭಯವನ್ನುಂಟುಮಾಡದಿರದು. ಅದಂ ತಿರಲಿ, ಪ್ರಕೃತದಲ್ಲಿ ವಿಜನವಾದ ಅರಣ್ಯದ ಮಧ್ಯದಲ್ಲಿ ಯುವಕನು ಕುಲ ಗೋತ್ರವನ್ನರಿಯದ ಸನ್ಯಾಸಿಯ ಇಚ್ಛಾನುಸಾರವಾಗಿ ಕಾದುಕೊಂ ಡಿರುತ್ತಾ ಮುಂದಣ ಆಲೋಚನೆಯೇ ಇಲ್ಲದೆ ಒಂದೆರಡು ಗಂಟೆಗಳ ಕಾಲ ವನ್ನು ಕಳೆದನು. ಎಷ್ಟು ಹೊತ್ತಾದರೂ ಸನ್ಯಾಸಿಯು ಮೌನದಿಂದಲೇ ಇದ್ದುದನ್ನು ನೋಡಿ ಯುವಕನು, ಸನ್ಯಾಸಿಯ ದೇವತಾರಾಧನೆಯು ಸಾಂಗವಾಗಿ ನೆರವೇರುವ ವರೆಗೂ ಮಂದಿರದ ಸುತ್ತಲೂ ನೋಡಿಕೊಂಡು ಬರುವುದಕ್ಕಾಗಿ ಏಳಲುಜ್ಜುಗಿಸಿದನು. ಆದರೆ, ಅವನ ಅಂಗಾಂಗಗೆ ಳೆಲ್ಲವೂ ಅವನ ಅಪ್ಪಣೆಯನ್ನು ನೆರವೇರಿಸಲು ಅಸಮರ್ಥಗಳಾಗಿದ್ದುವು. ಆವ ಕಾಲವಲ್ಲಿ ಸನ್ಯಾಸಿಯು ತನ್ನನ್ನು ಮಾತನಾಡಿಸುವನೋ ಎಂದು ಯುವಕನು ಹೊರಗೆ ಹೋಗುವುದಕ್ಕೂ ಅಲ್ಲಿಯೇ ಇರುವುದಕ್ಕೂ ಅಸ ಮರ್ಥನಾಗಿ ದಿಕ್ಕು ತೋರದೆಯೇ ಕುಳಿತಿದ್ದು ಬಿಟ್ಟನು.

ಅಷ್ಟು ಹೊತ್ತಿಗೆ ಕುದುರೆಯು ಬಾಯಾರಿಕೆಯಿಂದ ದನಿಗೆಯ್ಯಲು, ಯುವಕನು ಇದೇ ಸಮಯವೆಂದು ಮಂದಿರದ ಹೊರಗೆ ಬಂದು ಕುದು ರೆಯ ದುರವಸ್ಥೆಯನ್ನು ನೋಡಿ, 'ಪುಣ್ಯಾತ್ಮರಾರಾದರೂ ಹತ್ತಿರದ ಲ್ಲಿರುವುದಾದರೆ ಪ್ರಾಣಿವರ್ಗದಲ್ಲಿ ದಯೆಯಿಟ್ಟು ನನ್ನ ಕುದುರೆಗೆ ನೀರನ್ನು ಕುಡಿಸಿರಿ,' ಎಂದು ಗಟ್ಟಿಯಾಗಿ ಕೂಗಿಕೊಂಡನು.

ಯುವಕನ ಗಂಭೀರವಾದ ಧ್ವನಿಯು ಎಲ್ಲೆಲ್ಲಿಯೂ ಪ್ರತಿಧ್ವನಿತ ವಾಗಲು, ಸನ್ಯಾಸಿಗೆ ಧ್ಯಾನಭಂಗವಾಯಿತು. ಇದನ್ನು ನೋಡಿ ಯುವ

ಕನು ಸನ್ಯಾಸಿಯೊಡನೆ ಮಾತನಾಡಲಾರಂಭಿಸಿದನು ; ಆದರೆ ಸನ್ಯಾಸಿಯು ಯುವಕನಿಗೆ ಸಮ್ಮನಿರುವಂತೆ ಅಪ್ಪಣೆಮಾಡಿ—ಮಗು! ಈ ದಿವಸ ನೀನು ಮಾಡಿದ ಧರ್ಮವಿರುದ್ಧವಾದ ಸಾಹಸಕ್ಕೆ ಘೋರತರವಾದ ವಿಪತ್ತೇ ಪ್ರತಿಫಲವಾಗಿ ಪರಿಣಮಿಸುವುದು. ಏನಾದರೂ ಆಗಲಿ, ನೀನು ಎಂದಾದರೊಂದು ದಿನ ಈ ವಿಸ್ತಾರವಾದ ಭೂಭಾಗಕ್ಕೆ ಏಕಾಧಿಪತಿಯಾಗುವೆ, ಆದರೆ ನಿನ್ನ ಪ್ರಾಣರಕ್ಷಣೆಯು ಅತ್ಯಾವಶ್ಯಕವು. ಇನ್ನು ಮನೆಗೆ ತೆರಳುವನಾಗು. ಈ ಭೂಖಂಡವೆಲ್ಲವೂ ನಿನ್ನ ರಾಜ್ಯಕ್ಕೆ ಒಳಪಡಬೇಕಾದುದು ದೈವ ಮಾಯೆ, ದೈವೇಚ್ಛೆ, ದೈವಲೀಲೆ, ಎಂದು ನುಡಿದನು.

ಸನ್ಯಾಸಿಯು ಈರೀತಿಯಾಗಿ ಹೇಳಿದ ಕೂಡಲೆ ಯುವಕನಿಗೆ ಮಂದಿರವನ್ನು ತ್ಯಾಗಮಾಡಿ ಹೊರಟುಹೋಗುವಂತೆ ಅಪ್ಪಣೆಮಾಡಿದನು. ಯುವಕನಿಗೆ ಸನ್ಯಾಸಿಯೊಡನೆ ವಿಶೇಷವಾಗಿ ಮಾತನಾಡಬೇಕೆಂಬ ಆಸೆಯಿದ್ದರೂ, ಆತನ ಬಾಯಿಂದ ಒಂದು ಮಾತೂ ಹೊರಡಲಿಲ್ಲ. ಸನ್ಯಾಸಿಯ ಅಪ್ಪಣೆಗೆ ವಿರೋಧವಾಗಿ ಅಲ್ಲಿ ಕ್ಷಣಕಾಲವಾದರೂ ನಿಲ್ಲುವುದಕ್ಕೆ ಮನವೊಡಂಬಡದೆ, ಯುವಕನು ಯತ್ನವಿಲ್ಲದೆಯೇ ಹೊರಗೆ ಬಂದುಬಿಟ್ಟನು. ಅವನ ಹೃದಯದಲ್ಲಿ 'ದೈವ ಮಾಯೆ, ದೈವೇಚ್ಛೆ, ದೈವ ಲೀಲೆ' ಎಂಬ ಮೂರು ಶಬ್ದಗಳು ಮಟ್ಟಿಗೆ ಪ್ರತಿಧ್ವನಿತವಾಗುತಿದ್ದುವು.

ಯುವಕನು ದಿಕ್ಕು ತೋರದವನಾಗಿ ಒಂದು ಕ್ಷಣಕಾಲದ ವರೆಗೂ ಮಂದಿರದ ಸೋಪಾನಗಳ ಮೇಲೆ ನಿಂತಿದ್ದು ಬಳಿಕ ಬಲವತ್ತರವಾದ ನಿಟ್ಟುಸಿರನ್ನು ಬಿಟ್ಟು ಕುದುರೆಯ ಬಳಿಗೆ ಬಂದು ಸೇರಿದನು. ಅಲ್ಲಿ ಆಜಾನುಲಂಬಿತವಾದ ಕೃಷ್ಣಕೇಶರಾಶಿಯಿಂದಲಂಕೃತೆಯಾಗಿಯೂ, ಆಯತಲೋಚನೆಯಾಗಿಯೂ, ನಾತಿಸ್ಥೂಲೆಯಾಗಿಯೂ, ನಾತಿಕೃಶೆಯಾಗಿಯೂ, ರಕ್ತಾಂಬರಧಾರಿಣಿಯಾಗಿದ್ದರೂ ನವನವೋನ್ಮಿಷತ್ತಾರುಣ್ಯದಿಂದ ಆಬಾಲವೃದ್ಧ ಮನೋಮೋಹನೆಯಾಗಿಯೂ, ಚಕಚ್ಚಕಿತವಾದ ಮಿಂಚಿನ ಬಳ್ಳಿಯಂತೆ ದೇದೀಪ್ಯಮಾನೆಯಾಗಿಯೂ ಇದ್ದ ನಮ್ಮ ಪೂರ್ವ ಪರಿಚಿತೆಯಾದ ಆ ಬಾಲೆಯು ಆದರದಿಂದ ಕುದುರೆಗೆ ನೀರನ್ನು ಕುಡಿಸುತ್ತಿದ್ದಳು. ಯುವಕನು ಆಕೆಯನ್ನು ನೋಡಿ ಆನಂದ ಪರವಶನಾಗಿ,

ಈಕೆಯನ್ನಾದರೂ ಕೇಳಿ ಪ್ರಕೃತದ ವಿದ್ಯಮಾನವೆಲ್ಲವನ್ನೂ ತಿಳಿಯಬೇಕೆಂದು ತನ್ನೊಳಗೆ ತಾನೇ ಆಲೋಚಿಸಿದನು.

ಯುವಕನು ಹೀಗೆ ಪರ್ಯಾಲೋಚಿಸಿ ಬಾಲಿಕೆಯ ಬಳಿಗೈತಂದು—ತಂಗೆ! ನೀನಾರು? ಸನ್ಯಾಸಿಯಾರು? ನೀವುಗಳು ವಾಸವಾಗಿರುವುದೆಲ್ಲಿ? ಈ ಮಂದಿರದಲ್ಲಿ ನೀವುಗಳು ಎಷ್ಟು ದಿನಗಳಿಂದಿರುವಿರಿ? ನಿಮ್ಮೊಡನೆ ಮತ್ತಾರಾರು ವಾಸವಾಗಿರುವರು? ಸನ್ಯಾಸಿಯೊಡನೆ ಸಾವಧಾನವಾಗಿ ಮಾತನಾಡುವುದಕ್ಕೆ ಕಾಲವಾವುದು? ಎಂದು ಅನೇಕ ಪ್ರಶ್ನೆಗಳನ್ನು ಮಾಡಿದನು. ಆದರೆ ಬಾಲಿಕೆಯು ಯುವಕನ ಆವ ಪ್ರಶ್ನೆಗೂ ಉತ್ತರ ಕೊಡದೆ, ಕುದುರೆಗೆ ನೀರ ಕುಡಿಸುವುದರಲ್ಲಿ ವ್ಯಗ್ರೆಯಾಗಿದ್ದು ಬಿಟ್ಟಳು. ಕುದುರೆಯು ನೀರನ್ನು ಕುಡಿದ ಬಳಿಕ, ಬಾಲಿಕೆಯು ಜಲಪಾತ್ರವನ್ನು ತೆಗೆದುಕೊಂಡು ಗೃಹಾಭಿಮುಖವಾಗಿ ತೆರಳಿದಳು. ಆಗ ಆಕೆಯನ್ನು ಅಡ್ಡಗಿಸಿ ಮಾತನಾಡಿಸುವಷ್ಟು ಸಾಹಸವು ಯುವಕನಿಗೆ ಉಂಟಾಗಲಿಲ್ಲ.

ಬಾಲಿಕೆಯು ಮನೆಯನ್ನು ಸೇರಿದೊಡನೆಯೇ ಯುವಕನನ್ನು ಕುರಿತು—ಯುವ ಮಹಾಶಯ! ಸಾವಧಾನವಾಗಿರು. ಎಂದಾದರೊಂದು ದಿನ ನನ್ನ ಕೈಯಿಂದಲೇ ನಿನಗೆ ಮರಣವುಂಟಾಗುವುದು. ಇದೂ ದೈವ ಮಾಯೆ, ದೈವೇಚ್ಛೆ, ದೈವ ಲೀಲೆ, ಎಂದುಸುರಿದಳು.

ಯುವಕನು ಈ ಮಾತನ್ನು ಕೇಳಿ ಉನ್ಮತ್ತನಂತಾಗಿ ಬಾಲಿಕೆಯಿದ್ದಲ್ಲಿಗೆ ಓಡಿದನು. ಯುವಕನು ಮನೆಯ ಬಳಿಗೆ ಬಂದ ಕೂಡಲೆ, ಅವನ ತಲೆಯು ಪೌಳಿಯ ಗೋಡೆಗೆ ತಗುಲಿ ರಕ್ತವು ದರದರನೆ ಸುರಿಯಲಾರಂಭಿಸಿತು. ಇಷ್ಟಾಗುವುದರೊಳಗಾಗಿ ಬಾಲಿಕೆಯು ಮನೆಯನ್ನು ಹೊಕ್ಕು ಬಾಗಿಲನ್ನು ಮುಚ್ಚಿಕೊಂಡುಬಿಟ್ಟದ್ದಳು.

ಯುವಕನು ಈ ದುರ್ಯೋಗವನ್ನು ಲೆಕ್ಕಿಸದೆ ಬಾಗಿಲ ಬಳಿಗೆ ಬಂದು ಬಾಗಿಲನ್ನು ತಟ್ಟಿದನು. ಒಳಗಣಿಂದ ಉತ್ತರವೇ ಬಾರದಿರಲು, ಯುವಕನು ಸೋಪಾನಗಳನ್ನೇರಿ ದೇವಮಂದಿರಕ್ಕೆ ಬಂದು ನೋಡಿದನು. ಅಲ್ಲಿಯೂ ಬಾಗಿಲುಗಳು ಮುಚ್ಚಲ್ಪಟ್ಟಿದ್ದುವು. ಬಾಲ್ಯದಿಂದಲೂ ಭಯವೆಂಬುದನ್ನೇ ಅರಿಯದ ಯುವಕನಿಗೆ ತಟ್ಟನೆ ಹೃದಯದಲ್ಲಿ ಭಯದ

ಪ್ರಥಮಾವತಾರವಾಯಿತು. ಯುವಕನು ಭಯದಿಂದ ಥರಥರನೆ ನಡು ಗುತ್ತಾ ನಿಂತಿರಲು, ಎಲ್ಲಿಂದಲೋ ವಿಕಟವಾದ ಅಟ್ಟಹಾಸ ಧ್ವನಿಗಳು ಕೇಳಿಬಂದು ಕಿವಿಗಳನ್ನು ತೂತುಮಾಡಿಬಿಟ್ಟುವು. ಇಂತಹ ವಿಜನವಾದ ಅರಣ್ಯದ ಮಧ್ಯದಲ್ಲಿ ಕ್ಷಣಕಾಲವಿರುವುದೂ ಪ್ರಾಣಾಪಾಯಕರವೆಂದು ತಿಳಿದು ಯುವಕನು ಕದುರೆಯನ್ನೇರಿ ಅಂಬಿನ ವೇಗದಿಂದ ದಾರಿವಿಡಿದು ಎಲ್ಲಿಯೋ ತೆರಳಿಬಿಟ್ಟನು.

---

## ಮೂರನೆಯ ವಿಲಾಸ

ಮಹಾರಾಜಸಿಂಹನು ಮಾರವಾಡ ಸಂಸ್ಥಾನದಲ್ಲಿ ಪ್ರಧಾನ ಸೇನಾ ಪತಿಯಾಗಿದ್ದನು. ಮಹಾರಾಜಸಿಂಹನಿಗೆ ಇನ್ನೂ ಇಪ್ಪತ್ತೈದು ವರ್ಷ ವಯಸ್ಸು ತುಂಬಿರಲಿಲ್ಲವಾಗಿದ್ದರೂ, ಅವನ ಅದ್ವಿತೀಯವಾದ ಪರಾಕ್ರ ಮವು ದೇಹಲಿಯಿಂದ ಅಹಮ್ಮದಾಬಾದಿನ ವರೆಗೂ ಪ್ರಸಿದ್ಧವಾಗಿದ್ದಿತು. ಈತನ ಬಾಹುಬಲದಿಂದ ಮಾರವಾಡದ ಖ್ಯಾತಿಯು ಎಲ್ಲೆಲ್ಲಿಯೂ ಹರಡಿ ಕೊಂಡಿದ್ದುದು ಮಾತ್ರವೇ ಅಲ್ಲದೆ, ಮಾರವಾಡದ ಹೆಸರನ್ನು ಕೇಳಿದ ಆರ ಹೃದಯದಲ್ಲಿಯೋ ಆಗಲಿ ವರ್ಣಿಸಲಸದಳವಾದ ಭಯವುಂಟಾಗು ತ್ತಿದ್ದಿತು. ಅನೇಕ ಕಾರಣಗಳಿಗೊಳಪಟ್ಟು ಅಳಿಸಿ ಹೋಗಲುಪಕ್ರಮಿ ಸಿದ್ದ ರಾಜಪುತ್ರರ ಗೌರವವು ಮಹಾರಾಜಸಿಂಹನ ಸಾಹಸದಿಂದ ಮತ್ತೆ ಭರತಖಂಡ ನಿವಾಸಿಗಳ ಹೃದಯಫಲಕಗಳಲ್ಲಿ ಸಮುಜ್ಜ್ವಲವಾದ ಬಂಗಾರದ ಅಕ್ಷರಗಳಿಂದ ಅಂಕಿತವಾಗಲಾರಂಭಿಸಿತು. ಈ ಕಾರಣದಿಂದ ಮಹಾರಾಜಸಿಂಹನ ಹೆಸರನ್ನು ಕೇಳಿದ ಆಗಣ ಜನರೆಲ್ಲರೂ ಆತನನ್ನು ನೋಡಿ ಧನ್ಯರಾಗಬೇಕೆಂದು ಬಯಸಿ ಗುಂಪುಗುಂಪಾಗಿ ಬರುತ್ತಿದ್ದರು.

ಉನ್ನತಿಯನ್ನು ಬಯಸಿ ಪರೋಪದೆಗಳ್ಳರಂತೆ ಪರಸ್ವಾಪಹರಣದಲ್ಲಿ ಆಸಕ್ತರಾಗಿ ದೇಶದ ಶಾಂತಿಗೆ ಭಂಗವನ್ನುಂಟುಮಾಡುತಲಿದ್ದ ಮಹಾ ರಾಷ್ಟ್ರದವರ ಅಹಂಕಾರವನ್ನು ಅಡಗಿಸುವ ಕಾರ್ಯಭಾರವು ದೇಹಲೀ ಚಕ್ರವರ್ತಿಯಿಂದ ಮಾರವಾಡದ ಅಧಿಪತಿಯಾದ ಅಮರಸಿಂಹನಲ್ಲಿರಿಸ ಲ್ಪಟ್ಟಿತು. ಅಮರಸಿಂಹನಾದರೋ ಕೇವಲ ವೃದ್ಧನು. ಆತನು ನಾನಾ

ಕಾರಣಗಳಿಂದ ರೋಗಶೋಕಗ್ರಸ್ತನಾಗಿದ್ದುದು ಮಾತ್ರವಲ್ಲದೆ ಮುಪ್ಪಿನಿಂದಲೂ ಬಲಹೀನನಾಗಿದ್ದನು. ಆದುದರಿಂದ ಮಾರವಾಡದ ಕುಲಗೌರವವನ್ನೂ, ರಾಜಪುತ್ರ ಸಂಸ್ಥಾನದ ನಿರ್ವಾಣೋನ್ಮುಖವಾದ ಕೀರ್ತಿಪ್ರದೀಪವನ್ನೂ ಪ್ರಜ್ವಲಿಸುವಂತೆ ಮಾಡುವುದಕ್ಕೆ ಆತನಿಗೆ ಶಕ್ತಿಯು ಕುಂದಿಹೋಗಿದ್ದಿತು. ಆದರೂ ಮಾರವಾಡದ ಗೌರವವು ಇನ್ನೂ ಸಂಪೂರ್ಣವಾಗಿ ಲುಪ್ತವಾಗಿರಲಿಲ್ಲ. ಕಾರಣವೇನೆಂದರೆ :—ರಾಜಕುಮಾರ ಮಹಾರಾಜಸಿಂಹನು ಮಾರವಾಡದ ಪ್ರಧಾನಸೇನಾಧಿಪತಿಯಾಗಿದ್ದನು.

ಮಹಾರಾಜಸಿಂಹನು ಮಾರವಾಡದ ಸೇನಾಪತಿಯಾಗಿದ್ದನೇ ಹೊರತು ಯುವರಾಜನಾಗಿರಲಿಲ್ಲ. ಮಹಾರಾಜಸಿಂಹನು ಅಮರಸಿಂಹನಿಗೆ ಜ್ಯೇಷ್ಠ ಸಂತಾನವಲ್ಲದುದರಿಂದ, ಯುವರಾಜ ಪದವಿಯು ಅವನಿಗೆ ಸಲ್ಲಲು ಅವಕಾಶವಾಗಲಿಲ್ಲ. ಅಮರಸಿಂಹನಿಗೆ ಅಜಯಸಿಂಹನೆಂಬ ಮೊದಲನೆಯ ಮಗನೊಬ್ಬನಿದ್ದನು. ಆತನು ಲಲಿತಸಿಂಹನೆಂಬ ಪುತ್ರನನ್ನು ಪಡೆದ ಕೂಡಲೆ, ಅಕಾಲ ಮೃತ್ಯುವಿಗೆ ತುತ್ತಾಗಿ ಬಿಟ್ಟನು. ಆದುದರಿಂದ, ಅಜಯಸಿಂಹನ ಮರಣಾನಂತರದಲ್ಲಿ ಲಲಿತಸಿಂಹನೇ ಮಾರವಾಡದ ಸಂಸ್ಥಾನಕ್ಕೆ ಉತ್ತರಾಧಿಕಾರಿಯಾಗಿ ನಿಂತನು. ನಾವು ಆವ ಕಾಲದ ಚರಿತ್ರೆಯನ್ನು ನಮ್ಮ ನವನ್ಯಾಸದಲ್ಲಿ ಉಲ್ಲೇಖಿಸಲು ಯತ್ನಮಾಡಿರುವೆವೋ, ಆ ಕಾಲದಲ್ಲಿ ಲಲಿತನು ಹದಿನೆಂಟು ವರ್ಷದ ವಯಸ್ಸುಳ್ಳವನಾಗಿದ್ದನು. ಲಲಿತನು ಶಸ್ತ್ರವಿದ್ಯಾಭ್ಯಾಸವನ್ನು ಮಾಡಿದ್ದರೂ, ವೀರನಾಗಿರಲಿಲ್ಲ. ರಾಜಪುತ್ರರ ಸ್ವಭಾವ ಜನ್ಯವಾದ ಗುಣಗಳು ಅವನ ರಕ್ತದಲ್ಲಿ ದರದರನೆ ಪ್ರವಹಿಸುತ್ತಿದ್ದರೂ, ಯುದ್ಧವೆಂಬುದು ಮಟ್ಟಿಗೆ ಅವನಿಗೆ ಪ್ರಿಯವಾದ ಸಾಮಗ್ರಿಯಾಗಿರಲಿಲ್ಲ.

ಲಲಿತಸಿಂಹನು ಆವಾಗಲೂ ಏಕಾಂತವಾಸವನ್ನು ಬಯಸುತ್ತಿದ್ದನು. ಅವನಿಗೆ ವಿದ್ಯೆಯಲ್ಲಿ ಕೇವಲವಾದ ಅಭಿರುಚಿಯುದ್ದುದರಿಂದ, ಆತನು ಆವುದಾದರೊಂದು ಪುಸ್ತಕವನ್ನು ಓದುವುದಕ್ಕೆ ಕುಳಿತನೆಂದರೆ, ತನ್ನನ್ನು ತಾನೇ ಮರೆತು ಅನ್ನಪಾನಾದಿಗಳಲ್ಲಿಯೂ ಇಚ್ಛೆಯಿಲ್ಲದೆ ದಿನಗಳನ್ನೇ ಕಳೆದುಬಿಡುತ್ತಿದ್ದನು. ಆತನು ಆವಾಗಲೂ ಚಿಂತಾಶೀಲನಾಗಿದ್ದರೂ ಉದಾರಿಯಾಗಿದ್ದನು. ಪರದುಃಖದುಃಖಿತನಾದ ಲಲಿತನು ದರಿದ್ರರ

ದುಃಖವನ್ನು ಹೋಗಲಾಡಿಸುವುದರಲ್ಲಿಯೇ ಕಾಲವನ್ನು ಕಳೆವನು. ಲಲಿತ ಸಿಂಹನು ರಾಜಕುಮಾರನೇ ಅಹುದು; ಆದರೂ ರಾಜಮಂದಿರದಲ್ಲಿ ನಿತ್ಯವೂ ನಡೆಯುತಲಿದ್ದ ಉತ್ಸವಾದಿಗಳು ಅವನಿಗೆ ಅಷ್ಟಾಗಿ ಸಂತೋಷ ವನ್ನುಂಟುಮಾಡುತ್ತಿರಲಿಲ್ಲ.

ಯುವರಾಜನಿಗೆ ಕುದುರೆ ಗಾಡಿಗೆಳಿಗೇನೂ ಅಭಾವವಿರಲಿಲ್ಲ, ಅನ್ನ ಪಾನಾದಿಗಳಿಗೇನೂ ತೊಂದರೆಯಿರಲಿಲ್ಲ, ವೇಷಭೂಷೆಗಳಿಗೇನೂ ಕಡಮೆ ಯಿರಲಿಲ್ಲ, ದಾಸದಾಸಿಯರ ಸೇವೆಯಂತೂ ಹೇಳಬೇಕಾದುದೇ ಇರಲಿಲ್ಲ. ಆವ ರಾಜೋಪಚಾರಗಳಿಗೂ ಕೊರತೆಯಿಲ್ಲದಿದ್ದರೂ, ಲಲಿತನು ಇವಾ ವುದನ್ನೂ ಪ್ರೀತಿಸದೆ ಏಕಾಂಗಿಯಾಗಿ ರಾಜಮಾರ್ಗಗಳಲ್ಲಿ ಸಂಚರಿಸುತ್ತಾ ದೀನಾನಾಥರ ಬಗೆಬಗೆಯ ದುಃಖಗಳನ್ನು ವಿಚಾರಿಸಿ ತನ್ನ ಕಯ್ಯಲ್ಲಾದ ಮಟ್ಟಿಗೂ ಉಪಕಾರವನ್ನೇ ಮಾಡುವುದರಲ್ಲಿ ಹಗಲಿರುಳೂ ಸಿದ್ಧನಾಗಿರು ತಿದ್ದನು.

ಇಂತಹ ಲಲಿತಸಿಂಹನು ತನ್ನ ಚಿಕ್ಕ ತಂದೆಯಾದ ಮಹಾರಾಜ ಸಿಂಹನಲ್ಲಿ ಪಿತೃಭಾವವನ್ನಿಟ್ಟು ಕೇವಲ ಪ್ರೀತಿ ಗೌರವಗಳಿಂದ ವರ್ತಿಸು ತ್ತಿದ್ದನು. ಮಹಾರಾಜಸಿಂಹನೂ ಲಲಿತಸಿಂಹನಲ್ಲಿ ಪುತ್ರವಾತ್ಸಲ್ಯ ವನ್ನಿಟ್ಟು ಅಸಾಧಾರಣವಾದ ಅನ್ಯೋನ್ಯ ಭಾವದಿಂದಿರುತಿದ್ದನು.

ಮಹಾರಾಜಸಿಂಹನಂತಹ ಸದಾಶಯ ವ್ಯಕ್ತಿಯು ಮಾರವಾಡ ದಲ್ಲಿ ಮತ್ತಾರೂ ಇರಲಿಲ್ಲ. ದುರಹಂಕಾರವೆಂಬುದನ್ನು ಅವನು ಅರಿ ತವನೇ ಅಲ್ಲ. ಮಹಾರಾಜನು ಸಮಸ್ತ ಸದ್ಗುಣಗಳಿಗೂ ತವರುಮನೆ ಯಾಗಿದ್ದರೂ, ಯುದ್ಧಾಭಿಲಾಷೆ ಮಟ್ಟಿಗೆ ಅವನ ಜೀವನ ಸಂಸ್ಕಾರ ವಾಗಿದ್ದಿತು. ಆತನು ಬಾಲ್ಯದಿಂದಲೂ ಶೌರ್ಯವೇ ರಾಜಲಕ್ಷಣವೆಂದೂ, ಯುದ್ಧವೇ ರಾಜಕಾರ್ಯವೆಂದೂ, ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಪಡೆವುದೇ ಹುಟ್ಟಿದುದಕ್ಕೆ ಸಾರ್ಥಕವೆಂದೂ, ರಣರಂಗದಲ್ಲಿ ದೇಹವನ್ನು ಬಿಡುವುದೇ ಮೋಕ್ಷಸಾಧನೆಯೆಂದೂ ತಿಳಿದಿದ್ದನು. ಈ ಬಗೆಯ ಅಭಿ ಪ್ರಾಯವು ಆತನಿಗಿದ್ದರೂ, ಆತನು ಎಲ್ಲರನ್ನೂ ಪ್ರೀತಿಸುತ್ತಾ ಎಲ್ಲರ

ಪ್ರೀತಿಗೂ ಪಾತ್ರನಾಗಿ ಲೋಕದಲ್ಲಿ ಚಿರಸ್ಥಾಯಿಯಾದ ಯಶಸ್ಸನ್ನು ಹೊದ್ದಿ ಧನ್ಯನೆನಿಸಿದ್ದನು.

ಮಹಾರಾಷ್ಟ್ರದ ಜನರು ಕೊಬ್ಬಿ ಇತರ ದೇಶದವರನ್ನು ಪರಿಪರಿಯಾಗಿ ಹಿಂಸಿಸುತ್ತಿರಲು, ದೇಹಲೀಶ್ವರನು ಅವರ ಹಾವಳಿಯನ್ನು ಅಡಗಿಸುವುದಕ್ಕೆ ತಕ್ಕ ಪ್ರಯತ್ನಮಾಡಬೇಕೆಂದು ಮಹಾರಾಣ ಅಮರಸಿಂಹನಿಗೆ ಅಪ್ಪಣೆಮಾಡಿದನು. ಅಮರನು ಈ ಗುರುಕಾರ್ಯವನ್ನು ತನ್ನ ಮಗನಾದ ಮಹಾರಾಜಸಿಂಹನಿಗೆ ಒಪ್ಪಿಸಿದನು. ಯುದ್ಧಾಭಿಲಾಷಿಯಾದ ಮಹಾರಾಜನಿಗೆ ಇದೇ ಬೇಕಾಗಿದ್ದಿತು. ಆದುದರಿಂದ ಆತನು ಹತ್ತುಸಾವಿರ ಕೆಚ್ಚೆದೆಯ ಕಟ್ಟಾಳುಗಳ ಸೈನ್ಯವನ್ನು ತೆಗೆದುಕೊಂಡು ದಕ್ಷಿಣದ ಕಡೆಗೆ ತೆರಳಿದನು.

ಇತ್ತ ಕಡೆ ದಕ್ಷಿಣದಲ್ಲಿ ಮಹಾರಾಷ್ಟ್ರ ಸೈನ್ಯದವರು ಮಹಾರಾಜಸಿಂಹನ ಬರುವಿಕೆಯನ್ನು ಕೇಳಿ ಎದೆಗೆಟ್ಟು ದುರ್ಗಮವಾದ ದುರ್ಗಗಳಲ್ಲಿ ಅಡಗಿಕೊಂಡರು. ರಣಧೀರನಾದ ಮಹಾರಾಜಸಿಂಹನು ಶತ್ರುಗಳನ್ನು ಎಲ್ಲಿದ್ದರೂ ಬಿಡದೆ ಧ್ವಂಸಮಾಡಲುಪಕ್ರಮಿಸಿದನು. ಮಹಾರಾಜಸಿಂಹನ ಸುಶಿಕ್ಷಿತರಾದ ಯೋಧರ ಮುಂದೆ ಕಳ್ಳರಂತಿದ್ದ ಮಹಾರಾಷ್ಟ್ರ ಸೈನಿಕರು ಒಂದು ನಿಮಿಷವೂ ನಿಲ್ಲಲಾರದೆ ದಿಕ್ಕೆಟ್ಟು ಪಲಾಯನವಾಗಿಬಿಟ್ಟರು. ಶತ್ರುಪಕ್ಷದವರು ಪರಾಜಿತರಾದರೆಂಬ ಸುದ್ದಿಯು ಎಲ್ಲೆಲ್ಲಿಯೂ ಹರಡಲು, ಕಳ್ಳರ ಭಯದಿಂದ ಪರಿಪರಿಯಾಗಿ ತತ್ತರ ಗುಟ್ಟುತ್ತಿದ್ದ ನಗರವಾಸಿಗಳು ಸಂತಸಗೊಂಡು ಮಹಾರಾಜಸಿಂಹನ ಕೀರ್ತಿಯನ್ನು ಗಾನಮಾಡತೊಡಗಿದರು. ಕೊಂಚ ಕಾಲವೆನ್ನುವುದರೊಳಗಾಗಿಯೇ ಶತ್ರುಗಳ ಬಾಧೆಯು ನಿಶ್ಶೇಷವಾಗಿ ದೂರ ತೊಲಗಿತು. ಬಳಿಕ ಮಹಾರಾಜಸಿಂಹನು ದಕ್ಷಿಣಾಪಥದಲ್ಲಿ ಪ್ರಧಾನ ನಗರವೆನಿಸಿದ ಅಹಮ್ಮದಾಬಾದಿನಲ್ಲಿ ರಾಜ್ಯವನ್ನಿರಿಸಿದನು.

ಋಣ ರೋಗ ಶತ್ರುಶೇಷಗಳು ಎಂದಿಗಿದ್ದರೂ ವಿಪತ್ಕರವೆಂದು ಮಹಾರಾಜನು ಬೆಟ್ಟಗುಡ್ಡಗಳಲ್ಲಿಯೂ, ಕಾಡುಮೇಡುಗಳಲ್ಲಿಯೂ ಅಡಗಿಕೊಂಡಿದ್ದ ಶತ್ರುಗಳನ್ನು ಹೆಸರಿಲ್ಲದಂತೆ ಮಾಡಬೇಕೆಂದು ಎಣಿಸಿ

ಆಗಿಂದಾಗ ವೇಷವನ್ನು ಮಾರ್ಪಡಿಸಿಕೊಂಡು ಏಕಾಕಿಯಾಗಿ ಸುತ್ತುವುದಕ್ಕೆ ಮೊದಲುಮಾಡಿದನು.

ಒಂದಾನೊಂದು ದಿನ ಮಹಾರಾಜಸಿಂಹನು ಶತ್ರುಗಳ ಅನುಸಂಧಾನದಲ್ಲಿ ತೊಡಗಿ ಮೊದಲನೆಯ ವಿಲಾಸದಲ್ಲಿ ಕಂಡ ದೇವಮಂದಿರದ ಇದಿರಿನಲ್ಲಿ ಬಂದು ನಿಂತನು. ಬಳಿಕ ನಡೆದ ಸಂಗತಿಗಳೆಲ್ಲವೂ ನಮ್ಮ ಪ್ರಿಯವಾಠಕ ಮಹಾಶಯರಿಗೆ ವೇದ್ಯವಾಗಿಯೇ ಇರುವುವು.

## ನಾಲ್ಕನೆಯ ವಿಲಾಸ

ಮಹಾರಾಜಸಿಂಹನು 'ದೈವ ಮಾಯೆ, ದೈವೇಚ್ಛೆ, ದೈವ ಲೀಲೆ' ಎಂಬ ಶಬ್ದಗಳನ್ನು ಕೇಳಿದ ಕೂಡಲೆ ತನ್ನ ಕುದುರೆಯನ್ನೇರಿ ನಿಮಿಷಮಾತ್ರದಲ್ಲಿ ಮಾಯವಾಗಿಬಿಟ್ಟನು. ದಾರಿಯುದ್ದಕ್ಕೂ ಆ ಶಬ್ದಗಳು ಮೂರ್ತೀಭವಿಸಿ ಇದಿರಿನಲ್ಲಿ ನಿಂತಂತೆ ಕಾಣಿಸಿಕೊಂಡುದು ಮಾತ್ರವೇ ಅಲ್ಲದೆ, ಆ ಬಾಲಕಿಯೂ ಬೆನ್ನಟ್ಟಿ ಬರುತ್ತಿದ್ದಂತೆ ತೋರಿಬಂದು, ಮಹಾರಾಜಸಿಂಹನಿಗೆ ತಾನು ಮಾಡುವುದೇನು, ಹೋಗುವುದೆಲ್ಲಿಗೆ ಎಂಬುದೇ ಗೋಚರಕ್ಕೆ ಬರಲಿಲ್ಲ. ಹಣೆಯಲ್ಲಿ ಬರೆದುದನ್ನು ತಪ್ಪಿಸಬಲ್ಲವರಾರೆಂದು ಮಹಾರಾಜನು ಅಡಿಗಡಿಗೆ ಧೈರ್ಯವನ್ನು ತಂದುಕೊಂಡರೂ, ಅವನ ಮನವು ಶಾಂತವಾಗಲಿಲ್ಲ. ಸಂಧ್ಯಾಕಾಲವು ಸಮೀಪಿಸಿ ಅಂಧಕಾರವು ಸುತ್ತಲೂ ಕವಿದುಕೊಂಡ ಹಾಗೆಲ್ಲಾ, ಎಲ್ಲಿಯೂ ಇಲ್ಲದ ಭಯವು ಮಹಾರಾಜಸಿಂಹನ ಹೃದಯಾಕಾಶವನ್ನಡರಿತು. ಇಂದಿಗೆ ತನ್ನ ಆಯುರ್ದಾಯವು ಕಡೆಗಂಡಿತೆಂದು ಕೇವಲ ಚಿಂತಾಕ್ರಾಂತನಾಗಿ, ಮಹಾರಾಜನು ತನ್ನ ಕುದುರೆಯನ್ನು ಅಹಮ್ಮದಾಬಾದಿನ ಕಡೆಗೆ ತಿರುಗಿಸಿದನು.

ಸೂರ್ಯದೇವನು ಅಸ್ತನಾಗುವುದಕ್ಕೆ ಮೊದಲೇ ಮಹಾರಾಜನು ತನ್ನ ಶಿಬಿರಕ್ಕೆ ಬಂದು ಸೇರಿದನು. ಆಗ ಅವನ ಮುಖದಲ್ಲಿ ಕಾಂತಿಯಿರಲಿಲ್ಲ, ದೇಹದಲ್ಲಿ ಲವಲವಿಕೆಯಿರಲಿಲ್ಲ. ಇತರ ಸೇನಾನಾಯಕ

ರೆಲ್ಲರೂ ಆತನ ಭಯಂಕರವಾದ ಆಕೃತಿಯನ್ನು ನೋಡಿ ಬೆರಗಾದರೇ ಹೊರತು, ಇದರ ಕಾರಣವನ್ನು ಕೇಳುವುದಕ್ಕೆ ಆರಿಗೂ ಸಾಹಸವೆಂಬುದೇ ಉಂಟಾಗಲಿಲ್ಲ ; ಮಹಾರಾಜಸಿಂಹನೂ ಈ ಸಂಗತಿಯನ್ನು ತನ್ನ ಇಷ್ಟ ಮಿತ್ರರಿಗೆ ಕೂಡ ತಿಳಿಸಲಿಲ್ಲ. ಈತನಲ್ಲಿ ಆಕಸ್ಮಿಕವಾದ ಈ ಪರಿವರ್ತನೆಯನ್ನು ನೋಡಿದವರೆಲ್ಲರೂ ಅಲ್ಲಲ್ಲ ಗುಂಪು ಕಟ್ಟಿಕೊಂಡು ಗುಸಗುಸನೆ ಪಿಸಪಿಸನೆ ಮಾತನಾಡ ತೊಡಗಿದರು. ಇಷ್ಟನ್ನುವುದರೊಳಗಾಗಿ ರಾತ್ರಿಯಾಯಿತು. ಮಹಾರಾಜನು ಎಂದಿನಂತೆ ಭೋಜನವನ್ನು ಮಾಡದೆಯೇ ರೋಗಪೀಡಿತನಂತೆ ಹಾಸುಗೆಯ ಮೇಲೆ ಮಲಗಿ ಹೊರಳಾಡುತ್ತಾ ಬಗೆ ಬಗೆಯಾಗಿ ಈ ರೀತಿಯಲ್ಲಿ ಚಿಂತಿಸ ತೊಡಗಿದನು :—

" ನಾನು ಏಕಾಧಿಪತ್ಯಮಾಡುವೆನು. ಇದು ಸಾಧ್ಯವೇ ? ಲಲಿತಸಿಂಹನೇನಾದರೂ ಅಕಾಲ ಮರಣವನ್ನು ಹೊದ್ದುವನೇ ? ಇಲ್ಲವೆ, ಹೊದ್ದಿರುವನೇ ? ಆರಿಗೆ ಆವ ಕಾಲದಲ್ಲ ಏನು ಸಂಭವಿಸುವುದೋ ಅದನ್ನು ಆರು ತಾನೇ ಬಲ್ಲವರಾಗಿರುವರು ? ಒಂದು ವೇಳೆ ಲಲಿತನಿಗೆ ಮರಣವುಂಟಾಗಿದ್ದರೆ, ಆ ಸುದ್ದಿಯು ನನಗೆ ಕೂಡಲೆ ಗೊತ್ತಾಗುತ್ತಿದ್ದಿತು. ಶಿವಶಿವಾ ! ಲಲಿತನಿಗೆ ಎಂದಿಗೂ ಅನಿಷ್ಟವೆಂಬುದೇ ಉಂಟಾಗದಿರಲಿ.

ನಾನು ವಿಸ್ತಾರವಾದ ಈ ಭೂಭಾಗಕ್ಕೆ ಏಕಾಧಿಪತಿಯಾಗುವೆನು. ಇದು ಸಿದ್ಧಯುವಿರಬಹುದೇ ? ರಾಜನಾಗುವೆನೆಂದು ಕೇಳಿ ನನ್ನ ಮನದಲ್ಲಿ ಸಂತೋಷವು ಅಂಕುರಿಸುವುದು. ರಾಜನಾಗುವುದಾದರೆ ಸುಖವೇನು ? ಹಾಗಾದರೆ ಲೋಕದಲ್ಲಿ ಜನರು ರಾಜರಾಗುವುದಕ್ಕೆ ಬಯಸಲು ಕಾರಣವೇನಿರುವುದು ? ಐಶ್ವರ್ಯವನ್ನು ನೋಡಿ ಎಲ್ಲರೂ ರಾಜಪದವಿಯನ್ನು ಬಯಸುವರಲ್ಲವೇ ? ಇದು ತಪ್ಪಾದ ಭಾವನೆಯೆಂದು ನನ್ನ ನಂಬುಗೆ. ರಾಜನ ಜೀವನವಾದರೋ ಆವಾಗಲೂ ಬಗೆಬಗೆಯಾದ ದುಃಖಗಳಿಂದ ತುಂಬಿ ತುಳುಕಾಡುತ್ತಿರುವುದನ್ನು ನಾನು ನಿತ್ಯವೂ ಕಣ್ಣಾರೆ ನೋಡುತ್ತಿರುವೆನು. ಆದರೂ ನಾನು ರಾಜನಾಗುವ ಸಂಭವವುಂಟೆಂಬುವನ್ನು ಕೇಳಿ ನನಗೆ ಸಂತೋಷವಾಗುತ್ತಿರುವುದು. ರಾಜ್ಯಲೋಭದ ಮಹಿಮೆಯನ್ನು ಕಂಡವರಾರು ?

ನನ್ನ ಹೃದಯದಲ್ಲಾದರೋ ರಾಜನಾಗುವೆನೆಂಬ ಸಂತೋಷವೂ ಬಾಲಿಕೆಯಿಂದ ಮರಣವುಂಟಾಗುವುದೆಂಬ ವ್ಯಸನವೂ ಪರಸ್ಪರ ಜಯಾಪೇಕ್ಷೆಯಿಂದ ಕಾದಾಡುತ್ತಿರುವುವು. ರಾಜನಾದ ಕೂಡಲೆ ನನಗೆ ಮರಣವುಂಟಾಗುವುದಾದರೆ, ರಾಜ್ಯದಿಂದ ಪ್ರಯೋಜನವೇನು? ಲಲಿತನು ಸತ್ತಲ್ಲದೆ ನನಗೆ ರಾಜ್ಯವು ಬರುವ ಹಾಗಿಲ್ಲ. ರಾಜ್ಯವನ್ನು ಪಡೆದು ನಾನೂ ಸಾಯುವುದಾದರೆ, ನಮ್ಮ ವಂಶವೇ ನಾಶವಾಗಿಹೋದಂತಾಗುವುದು. ನಾನು ರಾಜನಾಗುವುದರಿಂದ ಇಷ್ಟೆಲ್ಲಾ ಅನರ್ಥವುಂಟಾಗುವ ಹಾಗಿದ್ದರೂ, ರಾಜನಾಗುವುದಕ್ಕೆ ನನ್ನ ಮನವು ಮುಂದೋಡುತ್ತಿರುವುದನ್ನು ನೋಡಿದರೆ, ನನಗೇ ಆಶ್ಚರ್ಯವಾಗುವುದು. ಇದಂತಿರಲಿ.

ಆ ಸುಂದರೀಮಣಿಯಾದ ಬಾಲಿಕೆ—ನಾನು ಆರನ್ನು ನೋಡಿದಂದಿನಿಂದಲೂ ಮತ್ತೆ ಮತ್ತೆ ನೋಡಬೇಕೆಂಬುದಾಗಿ ನನ್ನ ಮನವು ಕಾತರವಾಗಿರುವುದೋ, ಅಂತಹ ದೇವತಾಸ್ವರೂಪಿಣಿಯಾದ ಸನ್ಯಾಸಿ ವೇಷದ ಬಾಲಿಕೆ, ನನ್ನನ್ನು ಕೊಲ್ಲುವಳೇ? ಇದಿರಲಾರದು. ಇದೆಲ್ಲವೂ ನನ್ನ ಹೃದಯದ ದೌರ್ಬಲ್ಯವೇ ಹೊರತು ಬೇರೆಯಲ್ಲ. ನಾನು ಬೇಗನೆಯೇ ದೂರವಾಗಿ ಹೊರಟುಹೋಗಲೆಂದು ಆ ಕಪಟ ಸನ್ಯಾಸಿಯು ನನಗೆ ಈ ಭಯವನ್ನು ತೋರಿರುವನು. ಏನನ್ನೂ ಅರಿಯದ ಬಾಲಕಿಯು ಹೇಳುವ ಮಾತುಗಳೆಲ್ಲವೂ ಫಲಿಸುವುದೆಂದರೇನು? ಮನುಷ್ಯ ಮಾತ್ರದವನು ಮುಂದಾಗುವುದನ್ನರಿಯುವುದಾದರೆ, ಅವನನ್ನು ಹಿಡಿವರಾರು? ಅಜ್ಞರನ್ನು ಮೋಹಗೊಳಿಸುವುದಕ್ಕಾಗಿ ಜನರು ಮುಂದಾಗುವುದನ್ನು ಹೇಳುವುದಕ್ಕೆ ತೊಡಗುವರು. ಇವರಲ್ಲಿ ಧೀರನು ನಂಬುಗೆಯನ್ನಿಟ್ಟು ಕೊರಗುವುದಾದರೆ, ಅವನಿಗಿಂತಲೂ ಮೂರ್ಖನು ಈ ವಿಶ್ವವಿಧಾತನ ಸೃಷ್ಟಿಯಲ್ಲಿ ಬೇರೊಬ್ಬ ನಿಲ್ಲವು.

ಇದೇನಾಶ್ಚರ್ಯವಿರಬಹುದು? ಆರ ಹೃದಯವು, ರಕ್ತಪ್ರವಾಹದಿಂದ ಭಯಂಕರವಾದ ಯುದ್ಧರಂಗದಲ್ಲಿ ಒಂದು ಕ್ಷಣಮಾತ್ರವೂ ಕಂಪಿತವಾಗುವುದಿಲ್ಲವೋ, ಆರ ನಾಮ ಮಾತ್ರವನ್ನು ಕೇಳಿದ ಕೂಡಲೆ ಭರತ ಖಂಡವೆಲ್ಲವೂ ಗಡಗಡನೆ ನಡುಗುವುದಕ್ಕೆ ಮೊದಲು ಮಾಡುವುದೋ, ಅಂತಹ ಮಹಾರಾಜಸಿಂಹನು ಕಪಟಸನ್ಯಾಸಿಯ ಮಾತಿಗೆ

ಬೆರಗಾಗುವುದೆಂದರೇನು? ಮಹಾರಾಜಸಿಂಹ! ನಿನಗೆ ಇದೆಂದಿಗೂ ತಕ್ಕುದಲ್ಲ. ಅಧೈರ್ಯದಿಂದ ಅಧಃಪತನವೇ ಉಂಟಾಗುವುದು. ಧೈರ್ಯವು ಮಾನವನ ಪುರೋಭಿವೃದ್ಧಿಗೆ ಮೂಲಕಾರಣವು. ಎಂದೆಂದಿಗೂ ಆರಿಗೂ ಹೆದರದ ಮಹಾರಾಜಸಿಂಹ! ಇಂದು ಚಿಂತೆಗೆ ಈಡಾಗಿ ಕೊರಗಬೇಡ, ಕಂಡೆಯಾ?''

ಮಹಾರಾಜಸಿಂಹನು ಈ ರೀತಿಯಾಗಿ ಚಿಂತಿಸುತ್ತಿರುವಷ್ಟರಲ್ಲಿಯೇ ಬೆಳಕು ಹರಿಯಿತು.

---

## ಐದನೆಯ ವಿಲಾಸ

ಮರುದಿನ ಬೆಳಗ್ಗೆ ಮಹಾರಾಜಸಿಂಹನು ಮಾರವಾಡಕ್ಕೆ ತೆರಳುವುದಾಗಿ ನಿಶ್ಚಯಮಾಡಿಕೊಂಡು, ಅಧೀನ ಸೇನಾಪತಿಯಾದ ಆನಂದಸಿಂಹನನ್ನು ಕರೆದು ತನ್ನ ಕಾರ್ಯಭಾರವೆಲ್ಲವನ್ನೂ ಆತನಲ್ಲಿಟ್ಟು ಜನ್ಮಭೂಮಿಗಭಿಮುಖವಾಗಿ ತೆರಳಿದನು. ಆ ಸಮಯದಲ್ಲಿ ಮಹಾರಾಜಸಿಂಹನು ತನ್ನ ಸೈನಿಕರೆಲ್ಲರನ್ನೂ ಕರೆಯಿಸಿಕೊಂಡು ಈ ರೀತಿಯಾಗಿ ಸದುಪದೇಶ ಮಾಡಿದನು:—

'' ಆವುದೋ ಕಾರಣದಿಂದ ನಾನು ನನ್ನ ದೇಶಕ್ಕೆ ತೆರಳಿರುವೆನು. ನಮ್ಮ ಪ್ರಿಯ ಬಂಧುವಾದ ಆನಂದಸಿಂಹನು ಪ್ರಧಾನ ಸೇನಾಧಿಪತಿಯಾಗಿ ನಮ್ಮ ಕಾರ್ಯವೆಲ್ಲವನ್ನೂ ಮಾನವಧರ್ಮಕ್ಕೂ ಲೋಕತಂತ್ರಕ್ಕೂ ರಾಜನೀತಿಗೂ ಅವಿರೋಧವಾಗಿ ನಿರ್ವಹಿಸಿಕೊಂಡು ಬರುವನು. ನಾನು ಹಿಂದಿರುಗಿ ಬರುವ ವರೆಗೂ ನೀವುಗಳೆಲ್ಲರೂ ಆತನ ಆಜ್ಞೆಯನ್ನು ತಲೆಯಲ್ಲಿ ಧಾರಣಮಾಡಿ ರಾಜಕಾರ್ಯಕ್ಕೆ ಕೊಂಚವೂ ಲೋಪ ಬರದಂತೆ ನೋಡಿಕೊಳ್ಳುವಿರೆಂದು ನಾನು ದೃಢವಾಗಿಯೂ ನಂಬಿ ಹೊರಟಿರುವೆನು. ರಾಜ್ಯದ ಗೌರವಾದಿಗಳು ನಿಮ್ಮಿಂದಲೇ ಉಳಿಯಬೇಕಾಗಿರುವುದರಿಂದ, ನೀವುಗಳೆಲ್ಲರೂ ಅಪ್ರಮತ್ತರಾಗಿರಬೇಕು. ನೀವುಗಳೆಲ್ಲರೂ ಧರ್ಮಚ್ಯುತರಾಗಿ ಮನಬಂದಂತೆ ವರ್ತಿಸುವಿರಾದರೆ, ನಮ್ಮ ರಾಜ್ಯವು ಹಾಳಾಗಿ, ಲೋಕದಲ್ಲ ಅಪಕೀರ್ತಿಯು ನೆಲೆಯಾಗಿ ನಿಲ್ಲುವುದು

ಮಾತ್ರವೇ ಅಲ್ಲದೆ, ಪರಲೋಕದಲ್ಲಿಯೂ ಶ್ರೇಯಸ್ಸುಂಟಾಗಲಾರದು. ಆತ್ಮಸುಖಕ್ಕಿಂತಲೂ ದೇಶಸೇವೆಯು ಉತ್ತಮೋತ್ತಮವಾದುದೆಂಬುದನ್ನು ನೀವುಗಳು ಆವಾಗಲೂ ಜ್ಞಾಪಕದಲ್ಲಿಟ್ಟಿರತಕ್ಕದು.''

ಈ ಬಗೆಯಾದ ಸದುಪದೇಶವನ್ನು ಸೈನಿಕರೆಲ್ಲರೂ ಕೇಳಿ ಪರಮಾನಂದ ಭರಿತರಾಗಿ ಜಯಧ್ವನಿ ಮಾಡುತ್ತೆ, ಮಹಾರಾಜಸಿಂಹನನ್ನು ಬಹಳವಾಗಿ ಕೊಂಡಾಡಿ ಕಳಿಹಿಸಿ ಕೊಟ್ಟರು. ಮಹಾರಾಜಸಿಂಹನು ಕೆಲವು ಮಂದಿ ಅಂಗರಕ್ಷಕರನ್ನು ಮಟ್ಟಿಗೆ ಜತೆಯಲ್ಲಿ ಕರೆದುಕೊಂಡು ಸ್ವದೇಶಾಭಿಮುಖವಾಗಿ ತೆರಳಿದನು.

ಮಹಾರಾಜಸಿಂಹನು ಇದ್ದಕ್ಕಿದ್ದ ಹಾಗೆಯೇ ಹೊರಡಲು ಕಾರಣವೇನಿರಬಹುದು? ರಾಜನಾಗುವೆನೆಂಬ ಸಂತೋಷದಿಂದ ಮೆಯ್ಯುಬ್ಬಿ ರಾಜ್ಯಾಭಿಷೇಕ ಸುಖವನ್ನು ಅನುಭವಿಸಲೋಸುಗ ತನ್ನ ದೇಶಕ್ಕೆ ತೆರಳಿರುವನೇ? ರಾಮರಾಮ! ಮಹಾರಾಜನು ರಾಜ್ಯವನ್ನೆಂದಿಗೂ ಬಯಸತಕ್ಕವನಾಗಿರಲಿಲ್ಲ. ಲಲಿತಸಿಂಹನ ಯೋಗಕ್ಷೇಮವನ್ನು ತಿಳಿದುಕೊಳ್ಳುವುದಕ್ಕೇನಾದರೂ ಹೊರಟಿರಬಹುದೇ? ಅದೂ ಅಷ್ಟಾಗಿ ಪ್ರಬಲವಾದ ಕಾರಣವಲ್ಲ. ಹಾಗಾದರೆ ಕಾರಣವೇನಿರಬಹುದು? ಪರಿಶೀಲಿಸಿ ನೋಡಿದುದರಲ್ಲಿ, ಕಾರಣವೊಂದು ಕಂಡುಬರುತ್ತಿರುವುದು. ಅದೇನೆಂದರೆ:—

ಆವ ದಿನ ಮಹಾರಾಜಸಿಂಹನು ಬಾಲಿಕೆಯ ಪ್ರತಿಜ್ಞೆಯನ್ನು ಕೇಳಿ ಸಂಧ್ಯಾಕಾಲದಲ್ಲಿ ಮನೆಗೆ ಹಿಂದಿರುಗಿ ಬಂದು ವ್ಯಾಕುಲಭಾವದಿಂದ ಕಂಗೆಟ್ಟವನಾಗಿ ಹಾಸುಗೆಯ ಮೇಲೆ ಮಲಗಿದನೋ, ಆಗ ಅವನ ಕಣ್ಣುಗಳಿಗೆ ನಿದ್ದೆ ಹತ್ತಲಿಲ್ಲ. ಬಲು ಹೊತ್ತು ಹೊರಳಾಡಿದ ಮೇಲೆ, ನಿದ್ರಾದೇವಿಯು ಆವರಿಸುತ್ತಾ ಬರಲು, ಮಹಾರಾಜನು ಅದೊಂದು ಭಯಂಕರವಾದ ಸ್ವಪ್ನವನ್ನು ಕಂಡನು. ಆ ಸ್ವಪ್ನದಲ್ಲಿ ಆ ಬಾಲಿಕೆಯು ಅವನ ಎದೆಯ ಮೇಲೆ ಕುಳಿತು ಹರಿತವಾದ ಚೂರಿಯೊಂದನ್ನು ಹೃದಯದಲ್ಲಿ ನಾಟಿದ ಹಾಗೂ, ಕೂಡಲೆಯೇ ರಕ್ತವು ದರದರನೆ ಹರಿದು ಹೋಗುವ ಹಾಗೂ, ದೇವಿಯಂತಿದ್ದ ಆ ಬಾಲಿಕೆಯು ಕರಾಳಮೂರ್ತಿಯನ್ನು ತಾಳಿ ರಕ್ಕಸಿಯಂತೆ ರಕ್ತವನ್ನು ಪಾನಮಾಡುವ ಹಾಗೂ ಕಂಡು, ಮಹಾರಾಜ

ಸಿಂಹನು ಚೀತ್ಕಾರ ಮಾಡುತ್ತಾ ಹಾಸುಗೆಯಿಂದೆದ್ದು ಕುಳಿತನು. ಬಳಿಕ ಅವನಿಗೆ ನಿದ್ರೆಯೆಂಬುದೇ ಲುಪ್ತವಾಗಿ ಹೋಯಿತು. ಮಹಾರಾಜನು ಎಚ್ಚರದಿಂದಿದ್ದರೂ ಅವನ ಕಣ್ಣುಗಳಿಗೆ ಎಲ್ಲೆಲ್ಲಿಯೂ ರಕ್ತದಿಂದ ನನೆಸಲ್ಪಟ್ಟ ಶರೀರವುಳ್ಳ ಕರಾಳರೂಪದಿಂದ ಭಯಂಕರಿಯಾದ ಆ ಬಾಲಿಕೆಯು ಕಾಣಿಸಲಾರಂಭಿಸಿದಳು. ಪ್ರಿಯ ಪಾಠಕ ಮಹಾಶಯ! ಈ ದೃಶ್ಯವನ್ನೊಂದು ಸಲ ಹೃದಯ ಫಲಕದಲ್ಲಿ ಉಜ್ಜ್ವಲವಾದ ವರ್ಣಗಳಿಂದ ಚಿತ್ರಿಸಿ ನೋಡಿಕೊಳ್ಳೋಣವಾಗಲಿ.

ಮಹಾರಾಜಸಿಂಹನು ಇಂತಹ ಸ್ಥಲದಲ್ಲಿ ಒಂದು ಕ್ಷಣಕಾಲವಿರುವುದಾದರೂ ಬಾಲಿಕೆಯ ಕಯ್ಯಿಂದ ಮರಣವುಂಟಾಗುವುದೆಂದು ನಿಶ್ಚಯಿಸಿ ಬೆಚ್ಚಿ ಬೆದರಿದವನಾಗಿ ತನ್ನ ಜನ್ಮಭೂಮಿಯನ್ನು ಕುರಿತು ತೆರಳಲುಜ್ಜುಗಿಸಿದನು. ಹೇಡಿಯು ಮರಣಕ್ಕಂಜುವುದು ಲೋಕದೃಷ್ಟವಾಗಿರುವುದು. ಹೀಗಿರುವಲ್ಲಿ ವೀರಾಗ್ರೇಸರನಾದ ಮಹಾರಾಜಸಿಂಹನೂ ಮರಣಕ್ಕಂಜುವುದೆಂದರೇನು? ಆವಾಗಲೂ ಯುದ್ಧವನ್ನು ಬಯಸುತ್ತಿರುವ ವೀರನು ಯುದ್ಧದಲ್ಲಿ ಮೃತ್ಯುವಿಗೆ ಎದೆಗೊಟ್ಟು ನಿಲ್ಲುವನಾದರೂ ಹೆಂಗುಸಿನ ಕಯ್ಯಿಂದ ಮರಣವನ್ನು ಹೊಂದುವುದಕ್ಕೆ ಮುಟ್ಟಗ ಓಮ್ಮೊಟ್ಟವನು. ಮಹಾರಾಜಸಿಂಹನು ಪ್ರತಾಪಶಾಲಿಯಾದ ಯುವಕನೇ ಅಹುದು. ಆದುದರಿಂದಲೇ ಲೋಕೋತ್ತರವಾದ ಕೀರ್ತಿಯನ್ನು ಸಂಪಾದಿಸಬೇಕೆಂದು ಸಾಹಸಪಡುತ್ತಿರುವ ಯುವಕ ಸೇನಾಪತಿಯು ಹೆಂಗುಸಿನಿಂದ ಅಪಮೃತ್ಯುವನ್ನು ಹೊಂದಿ ಅಕಾಲದಲ್ಲಿ ಸಾಯಲು ಎಂದಿಗೂ ಇಷ್ಟವುಳ್ಳವನಾಗಿರಲಿಲ್ಲ. ಅಹನ್ಮದಾಬಾದಿನಲ್ಲಿಯೇ ಇರುವುದಾದರೆ, ಮಾಯಾವಿನಿಯಾದ ಆ ಸನ್ಯಾಸಿನಿಯು ಆವ ಕಾಲದಲ್ಲಿ ಬಂದು ತನ್ನನ್ನು ಮಾರಿ ಮಸಣಗಳಿಗೆ ಬಲಿಕೊಟ್ಟು ಬಿಡುವಳೋ ಎಂಬ ಶಂಕೆಯಿಂದ ಮಹಾರಾಜನು ತತ್ಕಾಲದಲ್ಲಿಯಾದರೂ ತನ್ನ ದೇಶಕ್ಕೆ ಹೋಗಿ ಬರುವುದು ಯುಕ್ತವಾದುದೆಂದು ಆಲೋಚಿಸಿ ಸ್ವದೇಶಾಭಿಮುಖನಾಗಿ ತೆರಳಿದನು. ಮಹಾರಾಜಸಿಂಹನು ಒಂದು ಸಲವಾದರೂ ತನ್ನ ಮುಖವನ್ನು ಒಂದಕ್ಕೆ ತಿರುಗಿಸದೆಯೇ ಹೊರಟು ಹೋದನೆಂದು ಸಾವು ಬರೆವುದಾದರೂ ಆ ಮಹಾವೀರನಿಗೆ ಅದೊಂದು ಕೊರತೆಯೇನೂ ಆಗಲಾರದು. ಲೋಕದಲ್ಲಿ

ವಿಧಿಯ ವಿಲಾಸವು ಭೀರುವಿನಲ್ಲಿ ಹೇಗೋ ಹಾಗೆಯೇ ಶೂರನಲ್ಲಿಯೂ ಏಕರೀತಿಯಾಗಿ ವರ್ತಿಸುವುದು. ಬಲುಮಾತಿನಿಂದೇನು? ಮಹಾರಾಜಸಿಂಹನು ಮೊದಲಲ್ಲಿ ಅರಣ್ಯ ಮಧ್ಯದ ದೇವ ಮಂದಿರದಿಂದ ಆವ ರೀತಿಯಾಗಿ ಭಯಪಟ್ಟುಕೊಂಡು ಓಡಿಹೋದನೋ, ಅದೇ ರೀತಿಯಾಗಿ ಈಗಳೂ ತನ್ನ ದೇಶವನ್ನು ಕುರಿತು ಪಲಾಯನಮಾಡಿದನು.

---

## ಆರನೆಯ ವಿಲಾಸ

ಮಹಾರಾಜಸಿಂಹನು ಮಾರವಾಡದ ಬಳಿಗೈತಂದು, ಹಠಾತ್ತಾಗಿ ತಾನು ಹೊರಟು ಬಂದುದಕ್ಕೆ ತಂದೆಯಾದ ಅಮರಸಿಂಹನಿಗೆ ಆವ ಕಾರಣವನ್ನು ತಿಳಿಸಬೇಕೆಂದು ಬಹಳವಾಗಿ ಚಿಂತಿಸಿದನು. ಒಬ್ಬ ಹೆಣ್ಣು ಹುಡುಗಿಗೆ ಹೆದರಿ ಹೊರಟುಬಂದ ಸಂಗತಿಯನ್ನು ಮಹಾರಾಣನಿಗೆ ತಿಳಿಸುವುದಕ್ಕಿಂತಲೂ ಲಜ್ಜಾಸ್ಪದವಾದುದಾವುದು? ರಾಜನಿಗೆ ಇದು ಗೊತ್ತಾಗುವುದಾದರೆ ಆತನೇನೆಂದಾನು? ಭಯವೆಂಬುದನ್ನೇ ಅರಿಯದ ಮಹಾರಾಜಸಿಂಹನು ಹುಡುಗಿಯ ಗುಡ್ಡು ಬೆದರಿಕೆಗೆ ಹೆದರಿ ಓಡಿ ಬಂದನೆಂಬುದು ಲೋಕದಲ್ಲಿ ಹರಡುವುದಕ್ಕೆ ಮೊದಲೇ ಆತನಿಗೆ ಅಕಾಲ ಮರಣವುಂಟಾಗುವುದೂ ಶ್ರೇಯಸ್ಸಲ್ಲವೇ? ಆತ್ಮಹತ್ಯೆಯು ಶಾಸ್ತ್ರನಿಷಿದ್ಧವಾದುದರಿಂದ ಮಹಾರಾಜಸಿಂಹನು ಆ ನೀಚಕಾರ್ಯದಲ್ಲಿ ಮನವನ್ನಿಡಲಿಲ್ಲ. ಆವುದಾದರೂ ಹುಸಿ ಮಾತನ್ನು ಹೇಳಿ ದೊರೆಯನ್ನು ನಂಬುವ ಹಾಗೆ ಮಾಡುವ ಅಭಿಲಾಷೆಯೂ ಸತ್ಯಪರಾಯಣನಾದ ಮಹಾರಾಜಸಿಂಹನಲ್ಲಿ ಉದಯಿಸಲೇ ಇಲ್ಲ. ಹೀಗಿರುವಲ್ಲಿ ನಮ್ಮ ಸೇನಾಪತಿಯು ಮಾಡತಕ್ಕುದೇನು? ಮಹಾರಾಜನು ಬಲು ಹೊತ್ತು ಬಗೆಬಗೆಯಾಗಿ ಚಿಂತಿಸಿ ಬಗೆ ಹರಿಯದೆ ಮತ್ತೆ ಹಿಂದಿರುಗಿ ಹೊರಡುವುದೇ ಯುಕ್ತವಾದುದೆಂದು ಆಲೋಚಿಸಿ ತನ್ನ ಕುದುರೆಯನ್ನು ಹಿಂದಿರುಗಿಸಿದನು. ಆತನ ಅಂಗರಕ್ಷಕರೆಲ್ಲರೂ ಮಹಾರಾಜಸಿಂಹನಿಗೆ ಬುದ್ಧಿವಿಕಾರವುಂಟಾಗಿರುವುದೆಂದು ನಿರ್ಧರಮಾಡಿಕೊಂಡು ಯತ್ನವಿಲ್ಲದೆಯೇ ಸೇನಾಪತಿಯನ್ನು ಹಿಂಬಾಲಿಸಿದರು. ಮಹಾರಾಜನು ಕೊಂಚದೂರ ಹಿಂದಿರುಗಿದ್ದವನು ಮತ್ತೆ ಕುದುರೆಯನ್ನು ಮಾರವಾಡದ ಕಡೆಗೆ ತಿರುಗಿಸಿ ವೇಗವಾಗಿ ತೆರಳಿ

ದನು. ಆತನ ಸೇವಕರೆಲ್ಲರೂ ಸೂತ್ರದ ಬೊಂಬೆಗಳಂತೆ ಹಿಂದೆ ಹಿಂದೆಯೇ ಹೊರಟು ಹೋದರು.

ಮಹಾರಾಜಸಿಂಹನು ಯಥಾಸಮಯದಲ್ಲಿ ಅರಮನೆಯ ಮುಂದೆ ಬಂದು ಕುದುರೆಯ ವೇಗವನ್ನು ನಿಲ್ಲಿಸಿ ಕೆಳಗಿಳಿದು ದಡಬಡನೆ ಮಹಾರಾಣನ ದರ್ಶನಾರ್ಥವಾಗಿ ಹೊರಟನು. ಸೇನಾಪತಿಯು ಅಕಸ್ಮಾತ್ತಾಗಿ ಬಂದಿರುವುದನ್ನು ನೋಡಿ ರಾಜಪುರುಷರೆಲ್ಲರೂ ಅಚ್ಚರಿಗೊಂಡವರಾಗಿ ಆವುದೊ ವಿಪತ್ತು ಸಂಭವಿಸಿರಬೇಕೆಂದು ಊಹಿಸಿ ಮಹಾರಾಣನಿಗರುಹಿದರು. ವೃದ್ಧನಾದ ರಾಜನು ಇದನ್ನು ಕೇಳಿ ಎದೆಗೆಟ್ಟು ಮಹಾರಾಜಸಿಂಹನು ಸಮೀಪಕ್ಕೆ ಬರುವುದನ್ನೇ ಇದಿರುನೋಡುತ್ತಾ ಕುಳಿತಿದ್ದನು.

ಊಳಿಗದವರು ಸೇನಾಪತಿಯನ್ನು ಕಂಡಕೂಡಲೆ ಆತನನ್ನು ರಾಜನ ಬಳಿಗೆ ಕರೆತಂದು ಬಿಟ್ಟರು. ಮಹಾರಾಜನು ತಂದೆಯನ್ನು ನೋಡಿದ ಕೂಡಲೆ ಆತನ ಪಾದಧೂಳಿಯನ್ನು ತಲೆಯಲ್ಲಿ ಧಾರಣಮಾಡಿ—ಪೂಜ್ಯಪಾದರಲ್ಲಿ ಬಾಲಕನು ತಲೆವಾಗಿ ಅರಿಕೆಮಾಡಿಕೊಳ್ಳುವುದೇನೆಂದರೆ—ತಮ್ಮ ಆಶೀರ್ವಾದದ ಬಲದಿಂದ ಮಹಾರಾಷ್ಟ್ರದವರು ಪರಾಜಿತರಾಗಿ ದಿಕ್ಕೆಟ್ಟು ಪಲಾಯನವಾಗಿರುವರು. ಅವರು ಒಕ್ಕಟ್ಟಿನಿಂದ ಮತ್ತೆ ಯುದ್ಧಕ್ಕೆ ಬಾರದ ಹಾಗೆ ತಕ್ಕ ಏರ್ಪಾಟನ್ನು ಮಾಡಿ, ಮತ್ತಾವ ವಿಶೇಷವಾದ ಕಾರ್ಯಭಾರವೂ ಪ್ರಕೃತದಲ್ಲಿ ಇಲ್ಲದೇ ಇದ್ದುದರಿಂದ, ಈ ಶುಭಸಮಾಚಾರವನ್ನು ದೇವ ಪಾದಮೂಲದಲ್ಲಿ ಅರಿಕೆ ಮಾಡಿಕೊಳ್ಳುವುದಕ್ಕಾಗಿ ಇಲ್ಲಿಗೆ ನಾನೇ ಬಂದೆನು, ಎಂದು ನುಡಿಯಲಾಗಿ ಮಹಾರಾಣ ಅಮರಸಿಂಹನು ಆನಂದದಿಂದ ಮಗನನ್ನು ಅಪ್ಪಿಕೊಂಡು ಆತನ ತಲೆಯನ್ನು ಆಘ್ರಾಣಿಸಿದನು. ಬಳಿಕ ಈ ಸಂತೋಷದ ಸಮಾಚಾರವನ್ನು ನಗರದಲ್ಲಿ ಪ್ರಚಾರಪಡಿಸುವಂತೆ ಸೇವಕರಿಗೆ ಅಪ್ಪಣೆಮಾಡಿ ತನ್ನ ರಾಜಾಸ್ಥಾನದಲ್ಲಿ ಅದೊಂದು ದೊಡ್ಡ ಸಭೆಗೂಡಿಸಿ ದಕ್ಷಿಣಾಪಥದಲ್ಲಿ ತನ್ನ ಕುಮಾರನು ಶತ್ರುನಿಗ್ರಹದಲ್ಲಿ ತೋರಿದ ಅಸಮಸಾಹಸವನ್ನು ಕೇಳ ತೊಡಗಿದನು. ಒಂದೆರಡು ಗಂಟೆಗಳ ವರೆಗೂ ಸರ್ವರೂ ಸಂತೋಷಸಾಗರದಲ್ಲಿ ತೇಲಿ ಮುಳುಗುತ್ತಿರಲು, ಲಲಿತಸಿಂಹನು ಚಿಕ್ಕ ತಂದೆಯನ್ನು ಸಂಬೋಧಿಸಿ—ಪೂಜ್ಯಪಾದ! ನೀನು ಮಾರವಾಡದ ಗೌರವವನ್ನು ಇಂದು ಸಂರಕ್ಷಿಸಿರುವೆ.

ರಾಜಪುರುಷರೂ, ಸೈನಿಕರೂ, ಪುರನಿವಾಸಿಗಳೂ ಆದಿಯಾಗಿ ಎಲ್ಲರೂ ತಮ್ಮತಮ್ಮ ಕೃತಜ್ಞತೆಯನ್ನು ಜಯಧ್ವನಿಯಿಂದ ತೋರ್ಪಡಿಸುತ್ತಿರುವರು. ನನಗುಂಟಾಗಿರುವ ಸಂತೋಷವನ್ನು ಆವ ರೀತಿಯಲ್ಲಿ ತೋರಿಸಬೇಕೋ ಅದನ್ನು ನಾನು ಅರಿಯದವನಾಗಿರುವೆನು. ಆದರೂ ನನ್ನ ಸರ್ವಸ್ವವನ್ನೂ ನಿನ್ನ ಪಾದಮೂಲದಲ್ಲಿಟ್ಟು ನಾನು ಧನ್ಯನಾಗ ಬೇಕೆಂದೆಣಿಸಿ, ಈ ಯುವರಾಜ ಪದವಿಯನ್ನು ನಿನಗೆ ಈ ದಿನ ಸಮರ್ಪಿಸುವವನಾಗಿರುವೆನು. ಇನ್ನು ಮೇಲೆ ನನ್ನ ತಾತನ ಅನಂತರದಲ್ಲಿ ನೀನೇ ರಾಜನಾಗುವೆ. ರಾಜ್ಯಕ್ಕೆ ನಿನಗಿಂತಲೂ ಉತ್ತಮವಾದ ಪಾತ್ರವು ಮತ್ತಾವುದೂ ಕಂಡು ಬರುವುದಿಲ್ಲ. ಬಾಲಕನ ಈ ಅತ್ಯಲ್ಪವಾದ ಸೇವೆಯನ್ನು ನೀನು ಉದಾರ ಹೃದಯದಿಂದ ಸ್ವೀಕರಿಸಬೇಕಾಗಿ ಪ್ರಾರ್ಥಿಸುವೆನು, ಎಂದು ಹೇಳಿದ ಕೂಡಲೆ ಆ ಸಭೆಯಲ್ಲುಂಟಾದ ಆನಂದಾತಿಶಯವನ್ನು ವರ್ಣಿಸಲು ನಮ್ಮ ಲೇಖನಿಗೆ ಅಷ್ಟಾಗಿ ಶಕ್ತಿಸಾಲದು. ಮಹಾರಾಜಸಿಂಹನು ಲಲಿತಸಿಂಹನ ದಯಾರಸಪೂರಿತವಾದ ಔದಾರ್ಯವನ್ನು ನೋಡಿ ಆನಂದದಿಂದ ಕಂಬನಿಗರೆದು—ಮಗು ! ನಿನ್ನಂತಹ ಉದಾರ ಪುರುಷನೇ ರಾಜನಾಗಲು ಯೋಗ್ಯನೆನಿಸುವನು. ನಿನ್ನಂತಹ ನಿಷ್ಕಳಂಕವಾದ ಗುಣಗಳುಳ್ಳ ಮಹಾ ಪುರುಷನಲ್ಲಿ ದಾಸಾನುದಾಸನಾಗಿ ಜೀವನ ಮಾಡುವುದೇ ನನ್ನಂತಹ ಪಾಮರನಿಗೆ ಪರಮಮಂಗಳವು, ಎಂದು ತನ್ನ ಸಂತೋಷವನ್ನು ಅತಿವಿನಯೋಕ್ತಿಗಳಿಂದ ಸೂಚಿಸಲು, ಎಲ್ಲರೂ ಸಂತೋಷಪಟ್ಟುಕೊಂಡು ತಮ್ಮತಮ್ಮ ಮನೆಗಳಿಗೆ ತೆರಳಿದರು. ಮಹಾರಾಜಸಿಂಹ ಲಲಿತಸಿಂಹರಿಬ್ಬರೂ ಒಟ್ಟಾಗಿ ಸೇರಿಕೊಂಡು ನಗರದ ರಾಜವೀಥಿಗಳಲ್ಲಿ ಸಂಚಾರಮಾಡುತ್ತಾ ಜನರ ಸಂತೋಷದಲ್ಲಿ ಮಗ್ನರಾಗಿ ದಿನವನ್ನೆಲ್ಲಾ ಕಳೆದರು. ಈ ಸುಖಸಮಾರಂಭದಲ್ಲಿ ಮಹಾರಾಜಸಿಂಹನು ತನಗೆ ಬಾಲಿಕೆಯಿಂದ ಉಂಟಾಗಬಹುದಾದ ಭಯದ ಸಂಗತಿಯನ್ನೇ ಸಂಪೂರ್ಣವಾಗಿ ಮರೆತು ಆನಂದ ಸಾಗರದಲ್ಲಿ ಮುಳುಗಿ ಬಿಟ್ಟನು.

---

## ಏಳನೆಯ ವಿಲಾಸ

ಒಂದು ಕಡೆ ಪುರಜನರು ರಾಜಾಸ್ಥಾನದಲ್ಲಿ ಸಭೆಗೂಡಿ ಉಲ್ಲಾಸದಿಂದಿರಲು, ಮತ್ತೊಂದು ಕಡೆ ರಾಜೋದ್ಯಾನದ ಪ್ರಮೋದ ಮಂದಿರದಲ್ಲಿ ಇಬ್ಬರು ರಮಣಿಯರು ಕುಳಿತುಕೊಂಡು ಕ್ರೀಡಿಸುತ್ತಿದ್ದರು. ಅವರ ಸುತ್ತಲೂ ಕೆಲವು ಸಖಿಯರು ಕುಳಿತುಕೊಂಡೂ ಮತ್ತೆ ಕೆಲವರು ಮಲಗಿಕೊಂಡೂ ವಿನೋದದಲ್ಲಿ ಕಾಲವನ್ನು ಕಳೆಯುತ್ತಿದ್ದರು.

ಮೇಲೆ ಹೇಳಿದ ಇಬ್ಬರು ರಮಣಿಯರಲ್ಲಿ ಒಬ್ಬಾಕೆಯ ವಯಸ್ಸು ಹದಿನೆಂಟು; ಮತ್ತೊಬ್ಬಳ ವಯಸ್ಸು ಹದಿನಾಲ್ಕು. ಇವರಿಬ್ಬರೂ ಅಪೂರ್ವಸುಂದರಿಯರಾಗಿದ್ದರು. ಅಪೂರ್ವಸುಂದರಿಯರೆನಿಸುವುದಕ್ಕೆ ಆವಾವ ಅಂಗಗಳು ಆವಾವ ತೆರನಾಗಿರಬೇಕೋ ಅದೇ ರೀತಿಯಲ್ಲಿ ಇವರಿಬ್ಬರಲ್ಲಿದ್ದರೂ, ಇವರ ರೂಪರೇಖಾಲಾವಣ್ಯಗಳು ಪರಸ್ಪರವಾಗಿ ಭಿನ್ನಗಳಾಗಿದ್ದುವು.

ದೊಡ್ಡವಳ ಹೆಸರು ಕಮಲಿನಿ. ಕಮಲಿನಿಯು ಸೇನಾಪತಿಯಾದ ಮಹಾರಾಜಸಿಂಹನ ವಿವಾಹಿತೆಯಾದ ಹೆಂಡತಿಯು. ಚಿಕ್ಕವಳ ಹೆಸರು ಕುಮುದಿನಿ. ಕುಮುದಿನಿಯು ಲಲಿತಸಿಂಹನ ಹೆಂಡತಿ—ಮಾರವಾಡದ ಭವಿಷ್ಯತ್ತಿನ ಮಹಾರಾಣಿ. ಕಮಲಿನೀ ಕುಮುದಿನಿಯರಿಬ್ಬರೂ ಪ್ರಧಾನ ಮಂತ್ರಿಯ ಕುವರಿಯರು. ಮಂತ್ರಿಯನ್ನು ಉನ್ನತಪದವಿಗೆ ತರಬೇಕೆಂಬ ಅಭಿಲಾಷಯಿಂದ ಅಮರಸಿಂಹನು ಮಂತ್ರಿಯ ದೊಡ್ಡಮಗಳನ್ನು ತನ್ನ ಮಗನಿಗೂ, ಚಿಕ್ಕ ಮಗಳನ್ನು ತನ್ನ ಮೊಮ್ಮಗನಿಗೂ ತಂದುಕೊಂಡಿದ್ದನು.

ಕಮಲಿನಿಯು ರೂಪವತಿಯರಲ್ಲಿ ಅಗ್ರಗಣ್ಯೆಯಾಗಿದ್ದಳು. ಅವಳನ್ನು ನೋಡಿದ ಕಣ್ಣುಗಳು ಬಿರಿದುಹೋಗುವಂತಿದ್ದುವು; ಆಕೆಯನ್ನು ಸ್ಮರಿಸಿದ ಹೃದಯವು ಕಂಪಿತವಾಗುತ್ತಿದ್ದಿತು; ಅವಳನ್ನು ಬಯಸಿದ ಪ್ರಾಣವು ತಲ್ಲಣಿಸಿ ಹೋಗುತ್ತಿದ್ದಿತು. ಆಕೆಯ ಗತಿಯಲ್ಲಿ ಅಧೀರತೆಯೂ, ನಯನಗಳಲ್ಲಿ ಚಾಂಚಲ್ಯವೂ, ಮಾತಿನಲ್ಲಿ ಪ್ರಖರವಾದ ಗಾಂಭೀರ್ಯವೂ ತುಂಬಿ ತುಳುಕಾಡುತ್ತಿದ್ದುವು. ಆಕೆಯನ್ನು ನೋಡಿದವರೆಲ್ಲರೂ ಮತ್ತೆ ಮತ್ತೆ ನೋಡಬೇಕೆಂಬ ಕುತೂಹಲವುಳ್ಳವರಾಗಿರುತ್ತಿದ್ದರೂ, ಅನಿರ್ವಚ

ನೀಯವಾದ ಭಯದಿಂದ ತಲೆಯನ್ನು ತಗ್ಗಿಸಿ ದೂರವಾಗಿ ಸರಿದು ಹೋಗುತ್ತಿದ್ದರು.

ಕುಮುದಿನಿಯೂ ಕಮಲಿನಿಯಂತೆ ರೂಪವತಿಯಾಗಿಯೇ ಇದ್ದಳು. ಇವಳ ಅಂಗಾಂಗಗಳಲ್ಲಿ ಕೋಮಲತೆಯು ಪೂರ್ಣತೆಯನ್ನು ಪಡೆದಿದ್ದಿತು. ಈಕೆಯನ್ನು ನೋಡಿದ ಕೂಡಲೆ, ಜನರ ಹೃದಯದಲ್ಲಿ ಪವಿತ್ರವಾದ ಭಾವವು ಅಂಕುರಿಸುತ್ತಿದ್ದಿತು. ಎಲ್ಲರೂ ಈಕೆಯನ್ನು ದೇವಲೋಕದಿಂದ ಕರೆತಂದ ಅಪ್ಸರಸ್ಸೆಂದು ತಿಳಿದಿದ್ದರೂ, ಭಯಭಕ್ತಿಭಾವದಿಂದ ಪೂಜಿಸುವವರಾಗಿದ್ದರು. ಕುಮುದಿನಿಯ ಕಣ್ಣುಗಳಲ್ಲಿ ದಯಾರಸಪೂರಿತವಾದ ಸರಳತೆಯೂ, ಮುಖದಲ್ಲಿ ಅಲಂಕಾರವೆನಿಸಿದ ಲಜ್ಜಾವಿನಯ ಮಾಧುರ್ಯಾದಿಗಳು ಕಂಗೊಳಿಸುತ್ತಿದ್ದುವು.

ಸುಂದರವಾಗಿದ್ದರೂ ನೋಡುವುದಕ್ಕೆ ಭಯಂಕರಿಯಾದ ಕಾಳಿಯ ಪ್ರತಿಮೆಯ ಪಕ್ಕದಲ್ಲಿ, ಸದಾನಂದಮಯಿಯಾಗಿಯೂ ಸರ್ವಜನ ಮನೋಹಾರಿಣಿಯಾಗಿಯೂ ಇರುವ ಅನ್ನಪೂರ್ಣೆಯ ಮೂರ್ತಿಯನ್ನಿಟ್ಟು ನೋಡಿದರೆ, ಏಕಕಾಲದಲ್ಲಿ ಅದೆಂತಹ ಭಾವವು ಆವಿರ್ಭವಿಸುವುದೋ, ಅದೇ ಭಾವವು ಕಮಲಿನೀ ಕುಮುದಿನಿಯರನ್ನು ನೋಡಿದ ಕೂಡಲೆ ಉಂಟಾಗುತ್ತಿದ್ದಿತೆಂದು ನಾವು ಇಲ್ಲಿ ವರ್ಣಿಸುವುದಾದರೂ ಅತ್ಯುಕ್ತಿಯಾಗಲಾರದು. ಕಾಳಿಯ ಹಾಗೂ ಅನ್ನಪೂರ್ಣೆಯ ಪ್ರತಿಮೆಗಳೆರಡೂ ಸುಂದರವಾದುವು ಎಂಬುದರಲ್ಲಿ ಆರಿಗೂ ಸಂಶಯವಿಲ್ಲ. ಕಾಳಿಯಲ್ಲಿ ಭಯಂಕರವಾದ ಸೌಂದರ್ಯವಿರುವುದಾದರೆ, ಅನ್ನಪೂರ್ಣೆಯಲ್ಲಿ ಪ್ರಶಾಂತವಾದ ಸೌಂದರ್ಯವಿರುವುದು. ಅದರಂತೆಯೇ ಕಮಲಿನಿಯು ಮಾರವಾಡದ ಕಾಳಿಕಾಂಬಿಕೆಯಾಗಿಯೂ, ಕುಮುದಿನಿಯು ಅನಪೂರ್ಣಾಂಬಿಕೆಯಾಗಿಯೂ ವಿರಾಜಿಸುತ್ತಿದ್ದರು. ಅಕ್ಕತಂಗೆಯರ ರೂಪವನ್ನು ಇದಕ್ಕಿಂತಲೂ ಹೆಚ್ಚಾಗಿ ವರ್ಣನೆಮಾಡುವುದು ನಮ್ಮಿಂದ ಸಾಧ್ಯವಲ್ಲವು. ಅದೂ ಅಲ್ಲದೆ ರೂಪವನ್ನೇ ವರ್ಣನೆಮಾಡುತ್ತಾ ಕುಳಿತುಕೊಳ್ಳುವುದಕ್ಕೆ ಈ ನವನ್ಯಾಸವು ಸಂಸ್ಕೃತ ಕಾವ್ಯವಲ್ಲ. ಒಂದು ವೇಳೆ ಸಮಯ ಸಂದರ್ಭಗಳಲ್ಲಿ ಯಾವರೂ ರೂಪವನ್ನು ಅಧಿಕರಿಸಿ ಕೆಲವು ವಾಕ್ಯಗಳನ್ನು ಬರೆಯೋಣವೆಂದರೆ, ಗುಣಲುಬ್ಧರಾದ ನಮ್ಮ ಪ್ರಿಯಪಾಠಕ ಮಹಾಶಯರು ನಮ್ಮ

ವರ್ಣನಾಭಾಗಗೆಳನ್ನೇ ಸಂಪೂರ್ಣವಾಗಿ ತ್ಯಾಗಮಾಡಿ ಮುಂದೆ ತೆರಳು ವರು. ಆದುದರಿಂದ ನಾವು ಅನೇಕ ಸಂಕಟಕ್ಕೀಡಾಗಿ ಅಲ್ಲಲ್ಲಿ ನಮ್ಮ ಚಾಪಲ್ಯವನ್ನು ಆಗಿಂದಾಗ ತೋರಿಸಿಕೊಳ್ಳುವೆವು. ಆದರೂ ಈ ವಿಷಯ ವಲ್ಲಿ ಆರೂ ನಮ್ಮಲ್ಲಿ ಅಪರಾಗವನ್ನು ತೋರಿ ನಿಂದಿಸಲಾರರೆಂದು ನಾವು ದೃಢವಾಗಿಯೂ ನಂಬಿ ಮುಂದುವರಿಯುವೆವು.

ಕಮಲಿನೀ ಕುಮುದಿನಿಯರು ಅಕ್ಕತಂಗೆಯರೆಂದು ಮೊದಲೇ ತಿಳಿಸಿರುವೆವು. ಇವರಿಬ್ಬರೂ ಸೋದರಿಯರಾಗಿದ್ದರೂ ಅವಾಗಲೂ ಸಖಿಯರಂತೆ ನಡೆನುಡಿಗಳಲ್ಲಿಯೂ, ವೇಷಭೂಷೆಗಳಲ್ಲಿಯೂ ಏಕೀಭಾವ ವನ್ನು ತಾಳಿ ಸುಖದಿಂದಿರುತ್ತಿದ್ದರು. ಅಕ್ಕ ತಂಗೆಯರ ಅನ್ಯೋನ್ಯ ಭಾವವು ಅಜಯಸಿಂಹನು ಬದುಕಿರುವ ವರೆಗೂ ಸಾಂಗವಾಗಿ ನೆರ ವೇರಿತು. ಆತನು ಮಡಿದ ಬಳಿಕ ಕಮಲಿನಿಯು ತನ್ನ ತಂಗೆಯಾದ ಕುಮುದಿನಿಯನ್ನು ಮೊದಲಿನಂತೆ ಪ್ರೀತಿಸುವುದನ್ನು ಕಡಮೆಮಾಡ ಲಾರಂಭಿಸಿದಳು. ಈ ಯ ಪ ರಾ ಗ ಕ್ಕೆ ಏನೂ ಅರಿಯದ ಸರಳ ಬಾಲೆಯಾದ ಕುಮುದಿನಿಯು ಕಾರಣವಲ್ಲ. ಕುಮುದಿನಿಯು ಅಕ್ಕನ ವಿಷಯದಲ್ಲಿ ಬಹು ಪ್ರೀತಿಯನ್ನಿಟ್ಟು ಆಕೆಯನ್ನು ಒಂದು ಕ್ಷಣಕಾಲವೂ ಎಡೆಬಿಡದೆ ಅನುವರ್ತಿಸಿಕೊಂಡಿರುವಳು. ಕುಮುದಿನಿಯು ಅವ ಕೆಲಸ ಮಾಡಬೇಕಾದರೂ ಅಕ್ಕನ ಅನುಮತಿಯಿಲ್ಲದೆಯೇ ಮಾಡುತ್ತಿರಲಿಲ್ಲ. ತಂಗೆಯ ನೆಡತೆಯು ಹೀಗಿರುತ್ತಿದ್ದರೂ, ಅಕ್ಕನಾದ ಕಮಲನಿ ಮಟ್ಟಿಗೆ ಬಹಿರಂಗದಲ್ಲಿ ಪ್ರೀತಿಯನ್ನು ನಟಿಸುತ್ತಾ ಅಂತರಂಗದಲ್ಲಿ ಅಸೂಯೆ ಯನ್ನು ಬಳೆಯಿಸುತ್ತಾ ಬಂದಳು.

ಕಮಲಿನಿಯು ತಂಗೆಯನ್ನು ದ್ವೇಷಿಸುವುದಕ್ಕೆ ಕುಮುದಿನಿಯ ಅಪರಾಧವೇನೆಂದರೆ—ಕುಮುದಿನಿಯು ಲಲಿತಸಿಂಹನನ್ನು ಮದುವೆ ಯಾಗಿ ಅಮರಸಿಂಹನನಂತರದಲ್ಲಿ ಮಾರವಾಡದ ಸಂಸ್ಥಾನಕ್ಕೆ ಮಹಾ ರಾಣಿಯಾಗುವಳೆಂಬುದೇ ಮಹಾಪರಾಧವಾಗಿದ್ದಿತು. ಈ ದುರಭಿಪ್ರಾಯ ದಿಂದ ಕಮಲಿನಿಯು ಒಂದೊಂದು ವೇಳೆ ಹುಚ್ಚಿಯಂತೆ ಅನ್ನಪಾನಾದಿ ಗಳಲ್ಲಿ ಅಭಿರುಚಿಯಿಲ್ಲದವಳಾಗಿ ಚಿಂತಿಸುತ್ತಿರುವಳೇನೆಂದರೆ :—

"ವಿಷವನ್ನಾದರೂ ಕುಡಿದು ಸಾಯುವುದು ಮೇಲು; ನನ್ನ ತಂಗೆಯು ಮಹಾರಾಣಿಯೆನಿಸಿಕೊಂಡು ಮಹಾ ವೈಭವದಿಂದಿರುವಲ್ಲಿ, ನಾನು ಅವಳ ಅಧೀನೆಯಾಗಿ ಬದುಕಿರಬಹುದೇ? ತಂಗೆಯು ಮಹಾ ರಾಣಿಯಂತೆ; ಅಕ್ಕನಾದ ನಾನು ಆವಾಗಲೂ ಸೇನಾಪತಿಯ **ಹೆಂಡತಿ** ಯಂತೆ! ಆರು ತಾನೇ ಈಯಪಮಾನವನ್ನು ಸಹಿಸಿಕೊಂಡು ಬದುಕಿರ ಲಾದೀತು? ಏನನ್ನೂ ಅರಿಯದ ಕುಮುದಿನಿಯು ರಾಣಿಯಾಗುವುದಕ್ಕೆ ಎಂದಿಗೂ ತಕ್ಕವಳಲ್ಲ. ಪ್ರಪಂಚದ ವ್ಯಾಪಾರವನ್ನೇ ಅರಿಯದ ಸುಟ್ಟ ಮೋರೆಯವಳು ರಾಣಿಯಾಗುವುದೆಂದರೇನು? ರಾಣಿಯಾಗುವುದಕ್ಕೆ ಬೇಕುಬೇಕಾದ ಗುಣಗಳೆಲ್ಲವೂ ನನ್ನಲ್ಲಿರುವಾಗ, ನಾನು ರಾಣಿಯಾಗ ಬೇಕೇ ಹೊರತು, ಕುಮುದಿನಿಯು ಹೇಗೆ ರಾಣಿಯಾದಾಳು? ನಾನೇ ಮಾರವಾಡದ ಭವಿಷ್ಯತ್ತಿನ ರಾಣಿ."

ಕಮಲಿನಿಯು ಈ ರೀತಿಯಾಗಿ ಚಿಂತಿಸಿಕೊಳ್ಳುತ್ತಾ ತಂಗೆಯೊಡನೆ ಯಾಗಲಿ, ಸಖಿಯರೊಡನೆಯಾಗಲಿ ಸರಿಯಾಗಿ ಮುಖವನ್ನು ಕೊಟ್ಟು ಮಾತನಾಡದೆಯೇ ಕುಳಿತಿದ್ದಳು.

---

## ಎಂಟನೆಯ ವಿಲಾಸ

ಅಕ್ಕ ತಂಗೆಯರು ರಾಜೋದ್ಯಾನದಲ್ಲಿ ಕುಳಿತುಕೊಂಡಿರುವಾಗ, ವಾದ್ಯಘೋಷಗಳಿಂದ ಅಸ್ಫುಟವಾಗಿ ಕೇಳಬರುತ್ತಿದ್ದ ಜಯಧ್ವನಿಯು ಮೊತ್ತಮೊದಲು ಕಮಲಿನಿಯ ಕಿವಿಗೆ ಬಿದ್ದು, ಆಕೆಯು ಚಕಿತೆಯಾಗಿ ತನ್ನ ಪಕ್ಕದಲ್ಲಿ ಕುಳಿತಿದ್ದ ಮಾಲತಿಯೆಂಬ ಸಖಿಯನ್ನು ಕುರಿತು— ನಗರದಲ್ಲಿ ಕೋಲಾಹಲಕ್ಕೆ ಕಾರಣವೇನು? ಎಂದು ಕೇಳಿದಳು. ಅದಕ್ಕೆ ಉತ್ತರವಾಗಿ ಕುಮುದಿನಿಯು— ಅಕ್ಕ! ಕಾರಣವಾವದೋ ಗೊತ್ತಿಲ್ಲ ಇರುವುದು. ನಮ್ಮ ಚಿಕ್ಕ ಮಾಮನವರು ಯುದ್ಧದಲ್ಲಿ ಜಯಶೀಲರಾಗಿ ವಿಜಯ ಪತಾಕೆಯನ್ನೆತ್ತಿರಬೇಕು. ಈ ಆನಂದದಿಂದ ನಮ್ಮ ಮಹಾ ರಾಣಾ ಸಾಹೇಬರು ಸಂತೋಷಸೂಚನೆಗಾಗಿ ನಗರದಲ್ಲಿ ವಾದ್ಯಘೋ ಷವು ನಡೆಯುವಂತೆ ಅಪ್ಪಣೆ ಮಾಡಿರಬೇಕು. ಆದುದರಿಂದಲೇ ಪ್ರಜೆ

ಗಳು ತಮ್ಮ ತಮ್ಮ ಆನಂದವನ್ನು ಜಯಧ್ವನಿಗಳಿಂದ ತೋರ್ಪಡಿಸುತ್ತಿರುವರು. ಅಕ್ಕ! ನಾವುಗಳೆಲ್ಲರೂ ಹೋಗಿ ನಮ್ಮ ನಮ್ಮ ಆನಂದವನ್ನೂ ಸೂಚಿಸುವ, ಬನ್ನಿರಿ, ಎಂದಳು.

ಕಮಲಿನಿಯು ಇದನ್ನು ಕೇಳಿ ತನಗುಂಟಾದ ಆನಂದವನ್ನು ಅಡಗಿಸಿಕೊಂಡು, ಗಂಭೀರಭಾವದಿಂದ—ಅವರು ಎಷ್ಟೋ ಯುದ್ಧಗಳನ್ನು ಮಾಡಿರುವರು. ಒಂದೊಂದು ಯುದ್ಧದಲ್ಲಿಯೂ ಅವರೇ ಜಯಶೀಲರಾಗಿ ಬಂದಿರುವರು. ಆವಾಗಲೂ ಇಂತಹ ಸಂತೋಷ ಸೂಚಕವಾದ ಕೋಲಾಹಲವು ಕೇಳಬಂದುದಿಲ್ಲ. ಈಗ ಮಟ್ಟಿಗೆ ಚಿಕ್ಕ ಮಾಮನವರು ಜಯಿಸಿದುದಕ್ಕಾಗಿ ಸಂತೋಷವೆಂಬುದನ್ನು ಕೇಳಿ ನನಗೆ ಸಂಶಯವೇ ತೋರ್ರಿಬರುತ್ತಿರುವುದು, ಎಂದು ಹೇಳಿದುದನ್ನು ಕೇಳಿ ಕುಮುದಿನಿಯು—ಅಕ್ಕ! ನಾನು ಊಹಿಸಿದುದೇ ನಿಜವಾದುದು. ನಾವೆಲ್ಲರೂ ಅಲ್ಲಿಗೆ ಹೋಗೋಣ, ಬನ್ನಿರಿ, ಎಂದಳು.

ಕಮಲಿನಿ—ಕುಮುದಿನಿಗೆ ಎಲ್ಲವೂ ಪರಿಹಾಸ್ಯವೇ ಆಗಿರುವುದು. ನನಗಾದರೋ ಇದರಲ್ಲಿ ಒಂದು ಬಗೆಯ ಸಂಶಯವೇ ತೋರುತ್ತಿರುವುದು. ಮಾಲತಿ! ನೀನು ಹೋಗಿ ರಾಜಾಸ್ಥಾನದಲ್ಲಿ ಪ್ರಕೃತ ಸ್ಥಿತಿಯೇನೆಂಬುದನ್ನು ಅರಿತುಕೊಂಡು ಬಾ.

ಕುಮುದಿನಿ—ಅಕ್ಕ! ಮಾಲತಿಯು ಹಿಂದಿರುಗಿ ಬರುವುದರೊಳಗಾಗಿ ನಾವುಗಳು ಹೂಗಳನ್ನು ಕೊಯ್ದು, ಒಂದು ಮನೋಹರವಾದ ಮಾಲಿಕೆಯನ್ನು ರಚಿಸೋಣ. ನಾವು ಚಿಕ್ಕ ಮಾಮನವರನ್ನು ಕಂಡಕೂಡಲೆ ಅವರಿಗೆ ಈ ಪುಷ್ಪಮಾಲಿಕೆಯನ್ನು ಭಕ್ತಿಯಿಂದ ಅರ್ಪಿಸುವ.

ಕಮಲಿನಿಯು ತನ್ನ ತಂಗಿಯ ಮಾತಿಗೆ ಕಿವಿಗೊಡದೆ, ಮಾಲತಿಯು ಹಿಂದಿರುಗಿ ಬರುವುದನ್ನೇ ಇದಿರು ನೋಡುತ್ತಿದ್ದಳು. ಕೊಂಚ ಹೊತ್ತಿನೊಳಗಾಗಿ ಮಾಲತಿಯು ಹಿಂದಿರುಗಿ ಬಂದು—ತಾಯಿ! ರಾಜಕುಮಾರ ಶ್ರೀಮಂತ ಮಹಾರಾಜಸಿಂಹರು ಹಿಂದಿರುಗಿ ಬಂದಿರುವರು. ಅವರ ಪರಾಕ್ರಮದಿಂದ ಮಹಾರಾಷ್ಟ್ರದವರು ಪರಾಜಿತರಾಗಿ ಪಲಾಯನ ಮಾಡಿದರಂತೆ. ನಮ್ಮ ಮಹಾರಾಣಾ ಸಾಹೇಬರು ತಮ್ಮ ಸಂತೋಷ

ವನ್ನು ಬೀರುವುದಕ್ಕಾಗಿ ಒಂದು ದೊಡ್ಡ ಸಭೆ ಸೇರಿಸಿ ಮಹಾರಾಜ ಸಿಂಹರಿಗೆ ಅಮಿತವಾಗಿ ಸನ್ಮಾನಮಾಡಿದರು. ಯುವರಾಜ ಶ್ರೀಮಂತ ಲಲಿತಸಿಂಹರು ತಮಗುಂಟಾದ ಸಂತೋಷಕ್ಕೆ ಪ್ರತಿಫಲವಾಗಿ ತಮ್ಮ ಯುವರಾಜಪದವಿಯನ್ನೇ ಮಹಾರಾಜಸಿಂಹರಿಗೆ ಅರ್ಪಿಸಿದರು. ಮಹಾ ರಾಜಸಿಂಹರು ಈಯುದಾರತೆಗೆ ಬಹಳವಾಗಿ ಸಂತೋಷಪಟ್ಟು ಯುವ ರಾಜಪದವಿಗೆ ಆಸೆಪಡದೆ ಲಲಿತಸಿಂಹರನ್ನು ಅಪ್ಪಿಕೊಂಡರು. ಬಳಿಕ ಸಭೆಯು ಮುಗಿಯಲು, ಮಹಾರಾಜಸಿಂಹ ಲಲಿತಸಿಂಹರಿಬ್ಬರೂ ನಗರ ದಲ್ಲಿ ಸಂಚರಿಸುವುದಕ್ಕೆ ತೆರಳಿರುವರು, ಎಂದು ನುಡಿಯಲಾಗಿ, ಕುಮು ದಿನಿಯು ಪರಮಾನಂದದಿಂದ—ಅಕ್ಕ! ಬೇಗ ಏಳು; ಮಾಮನವರು ಮನೆಗೆ ಬರುವುದರೊಳಗಾಗಿ ಹೂವಿನ ಸರವನ್ನು ಕಟ್ಟಿಕೊಂಡು ನಾವು ಕಾದಿರೋಣ, ಎಂದು ಹೇಳಿ ಸಖಿಯರನ್ನು ಕುರಿತು—ಸಖಿಯರಿರಾ! ಇನ್ನು ಮುಂದೆ ನಮ್ಮಕ್ಕನು ಮಾರವಾಡದ ಮಹಾರಾಣಿ. ನಾವುಗ ಳೆಲ್ಲರೂ ಆಕೆಯನ್ನು ಮಹಾರಾಣಿಯಂತೆ ಗೌರವಿಸಬೇಕು. ನನ್ನ ಸಂತೋ ಷವು ಇಂದಿಗೆ ಸಫಲವಾಯಿತು, ಎಂದು ನುಡಿದಳು.

ಕಮಲಿನಿಯು ಇದಾವುದಕ್ಕೂ ತನ್ನ ಸಂತೋಷವನ್ನು ಹೊರಪಡಿ ಸದೆಯೇ, ತನ್ನೊಳಗೆ ಆವುದೋ ವ್ಯಸನವನ್ನು ತಾಳಿ, ತಟ್ಟನೆ ಆ ತಾಣ ದಿಂದೆದ್ದು ಮನೆಯ ಕಡೆಗೆ ಹೊರಟು ಹೋದಳು. ಕಮಲಿನಿಯ ಈ ನಡೆವಳಿಯು ಸಂತೋಷದ ಮಧ್ಯದಲ್ಲಿ ಎಲ್ಲರಿಗೂ ನರಕದ ಯಾತನೆ ಯನ್ನುಂಟುಮಾಡಿತು. ಕಮಲಿನಿಯು ಇದಾವುದನ್ನೂ ಲೆಕ್ಕಿಸದೆ ಹಿಂದಿ ರುಗಿ ನೋಡದೆಯೇ ಹೊರಟು ಹೋದುದನ್ನು ಕುಮುದಿನಿಯು ನೋಡಿ ಬಹಳವಾಗಿ ವಿಷಾದಗೊಂಡು, ತಾನೂ ಸಖಿಯರೊಡನೆ ಇದರ ಕಾರಣ ವನ್ನು ತಿಳಿಯಲೋಸುಗ ಕಮಲಿನಿಯನ್ನು ಅನುಸರಿಸಿ ತೆರಳಿದಳು.

---

## ಒಂಬತ್ತನೆಯ ವಿಲಾಸ

ಅರಮನೆಯ ಸುಸಜ್ಜಿತವಾದ ಕೋಣೆಯೊಂದರಲ್ಲಿ ಹಂಸತೂಲಿಕಾ ತಲ್ಪದ ಮೇಲೆ ಕಮಲಿನಿಯು ಪವಡಿಸಿ ಬಗೆಬಗೆಯಾಗಿ ಚಿಂತಿಸುತ್ತಿರು

ವಳು. ಇಂದು ಆಕೆಯ ಹೃದಯದಲ್ಲಿ ಕಿಂಚಿತ್ತಾದರೂ ಶಾಂತಿಯೆಂಬು ದಿಲ್ಲ. ಆಕೆಯ ಸ್ವಾಮಿಯು ದಿಗ್ವಿಜಯ ಮಾಡಿ ಬಂದಿರುವುದನ್ನು ಪ್ರಜೆಗಳೆಲ್ಲರೂ ಕೇಳಿ ಆತನ ನಾಮವನ್ನು ಕೊಂಡಾಡುತ್ತಾ ಆನಂದದಲ್ಲಿ ಮುಳುಗಿರುವಾಗ ಆರಿಗೆ ತಾನೇ ವ್ಯಸನವುಂಟಾಗುವ ಸಂಭವವಿರು ವುದು? ಕಮಲಿನಿಯೊಬ್ಬಳು ಮಟ್ಟಿಗೆ ಸ್ವರ್ಗಸುಖದಲ್ಲಿ ನರಕಯಾತನೆ ಯನ್ನನ್ನುಭವಿಸುತ್ತಾ ಕೊರಗುವುದಕ್ಕೆ ತೊಡಗಿರುವಳು. ಸಲ್ಲದ ವ್ಯಸನ ವನ್ನು ಕಟ್ಟಿಕೊಂಡು ಸಂಕಟಪಡುವವರ ಬಾಳೆಲ್ಲವೂ ಹೀಗೆಯೇ ಸರಿ. ದರಿದ್ರನಾಗಲಿ, ಧನಿಕನಾಗಲಿ, ಗಂಡಸಾಗಲಿ, ಹೆಂಗುಸಾಗಲಿ, ಆರೇ ಆಗಲಿ ಸುಖಪಡುವುದಕ್ಕೂ ಲಭ್ಯವಿರಬೇಕು. ಸುಖದುಃಖಗಳೆರಡೂ ಪ್ರಾಣಿ ವರ್ಗದ ಮನೋಭಾವವನ್ನು ಅನುಸರಿಸಿರುವುವು. ವಿಶೇಷವಾಗಿ ಅಭಿ ಮಾನವನ್ನು ಹಚ್ಚಿಕೊಳ್ಳದಿರುವನೊಬ್ಬನೇ ಸುಖದುಃಖಗಳ ಆಧಿಪತ್ಯಕ್ಕೆ ಒಳಗಾಗದಿರುವನು. ಹೆಚ್ಚಿನ ಸುಖವನ್ನು ಬಯಸುವವನು ದುಃಖದ ಪೆಟ್ಟಿಗೆ ಸಿದ್ಧನಾಗಿರಬೇಕು. ಹಿಂದುಮುಂದರಿಯದ ಹೆಂಗುಸಾದರೋ ಕೇವಲವಾಗಿ ಆತ್ಮಸುಖದ ಪರಿಣಾಮದಲ್ಲಿಯೇ ಮನವಿಟ್ಟು ಕೆಲಸ ಮಾಡುವಳು. ಇದರಿಂದ ಅನರ್ಥವೇ ಉಂಟಾಗುವುದು. ಸುಖವನ್ನು ಬಯಸುವವರು ದುಃಖವನ್ನು ದೂರಮಾಡುವ ಉಪಾಯವನ್ನು ಕಂಡು ಹಿಡಿದರಲ್ಲವೇ ನಿಜವಾದ ಸುಖವನ್ನು ಹೊಂದಿಯಾರು. ಕಾರ್ಯಕಾರಣ ಪ್ರಪಂಚದಲ್ಲಿ ಕಾರ್ಯಕಾರಣವನ್ನು ಪರಿಶೀಲಿಸಿ ಯತ್ನಮಾಡುವವ ರಿಗೆ ಮಟ್ಟಿಗೆ ಇಷ್ಟಾರ್ಥವು ಈಡೇರುವುದು. ಲೋಕಾನುಭವದಿಂದ ಇದನ್ನರಿಯದೆಯೇ ದುಡುಕಿ ಕೆಲಸಮಾಡುವವರೆಲ್ಲರಿಗೂ ನಮ್ಮ ಕಮಲ ನಿಯ ದುರವಸ್ಥೆಯುಂಟಾಗದೇ ಇರದು.

ಕಮಲಿನಿಯು ಹಾಸುಗೆಯ ಮೇಲೆ ಮಲಗಿ ಅಸಂಭಾವ್ಯವಾದ ದುಃಖದಲ್ಲಿ ತೇಲಿ ಮುಳುಗುತ್ತಿರುವಳು. ಈ ಸಮಯದಲ್ಲಿ ತಾನಿದ್ದ ಲ್ಲಿಗೆ ಆರೋ ಬರುತ್ತಿದ್ದಂತೆ ತಿಳಿದು ಬರಲು, ಕಮಲಿನಿಯು ತನ್ನ ಸ್ವಾಮಿ ಯೇ ಬರುತ್ತಿರುವನೆಂದು ತಿಳಿದು ಹಾಸುಗೆಯಿಂದೆದ್ದು ನಿಂತಳು. ಸಂತೋಷದಿಂದ ಹೆಂಡತಿಯನ್ನು ಅಪ್ಪಿಕೊಂಡು ಮುದ್ದಾಡುವುದಕ್ಕೆ ಬರುತ್ತಿರುವ ಗಂಡನಿಗೆ ತನ್ನ ವಿಷಾದವನ್ನು ತೋರ್ಪಡಿಸುವುದು ಲಜ್ಜಾ

ಕರವೆಂದು ಆಕೆಯು ತಿಳಿದು ತನ್ನ ಮನದ ಆವೇಗವನ್ನು ಸಾಧ್ಯವಾದ ಮಟ್ಟಿಗೆ ಅಡಗಿಸಿಕೊಂಡು ಸಂತೋಷವನ್ನು ನಟಿಸುತ್ತಾ ಗಂಡನ ಆಗಮನ ವನ್ನೇ ಇದಿರುನೋಡುತ್ತಿದ್ದಳು. ಬಹುಕಾಲದಿಂದಲೂ ಸಾಕಿ ಸಲಹಿದ ಹೃದಯದ ಭಾವಗಳನ್ನು ಕ್ಷಣಮಾತ್ರದಲ್ಲಿ ಅಡಗಿಸಲು ಎಂತಹ ಧೀರ ನಿಗೂ ಸಾಧ್ಯವಾಗದಿರುವಲ್ಲಿ ಅಬಲೆಯರ ಪಾಡೇನು? ಹೃದಯದಲ್ಲಿ ದುಃಖವನ್ನು ತುಂಬಿಕೊಂಡು ಮೇಲೆ ತೋರಿಸುವ ಸಂತೋಷಕ್ಕೂ, ಒಳಗೂ ಹೊರಗೂ ತುಂಬಿ ತುಳುಕಾಡುವ ಸಹಜವಾದ ಸಂತೋಷಕ್ಕೂ ತಾರತಮ್ಯವಿರುವುದಿಲ್ಲವೇ? ಇದರ ಮರ್ಮವನ್ನು ಬಲ್ಲವನೇ ಬಲ್ಲನು.

ಮಹಾರಾಜಸಿಂಹನು ತನ್ನ ಹೆಂಡತಿಯಿದ್ದಲ್ಲಿಗೆ ಬಂದು ನೋಡಿ ದನು. ಹೆಂಡತಿಯು ಅತಿ ಪ್ರಯಾಸದಿಂದ ಆಗ ಸಂತೋಷದ ತರಂಗಗ ಳನ್ನು ಬೀರುತ್ತಿದ್ದಳು. ಮಹಾರಾಜನು ಇದನ್ನು ನೋಡಿ ಇಮ್ಮಡಿಯಾಗಿ ಸಂತೋಷಪಡುವುದಕ್ಕೆ ಪ್ರತಿಯಾಗಿ ಚಕಿತನಾಗಿ ಕಂಗೆಟ್ಟು ಕಂಬದಂತೆ ನಿಂತುಬಿಟ್ಟನು. ಕಮಲಿನಿಯು ಇದನ್ನು ಕಂಡುಕೊಂಡು ತನ್ನ ನಡೆ ವಳಿಯು ಸರಿಯಾದುದಲ್ಲವೆಂದು ಭಾವಿಸಿ ಗಂಡನನ್ನು ಕೈಹಿಡಿದು ತನ್ನ ಹಾಸುಗೆಯ ಮೇಲೆ ಕುಳ್ಳಿರಿಸಿ ತಾನು ನಮ್ರಭಾವದಿಂದ ಪಕ್ಕದಲ್ಲಿ ನಿಂತುಕೊಂಡಳು. ಕಮಲಿನಿಗೆ ತನ್ನ ಸ್ವಾಮಿಯಲ್ಲಿ ಕೊಂಚವಾದರೂ ಅದರಾಗದಿರಲಿಲ್ಲ. ಪತಿಯನ್ನು ಕಂಡರೆ ಆಕೆಯು ಆತನನ್ನು ದೇವರಿಗಿಂ ತಲೂ ಅಧಿಕವಾಗಿ ತಿಳಿದು ಭಕ್ತಿಗೂಡಿ ಸೇವೆಮಾಡುವುದರಲ್ಲಿ ಬೇಸರ ಪಡುತ್ತಿರಲಿಲ್ಲ. ಪ್ರಾಣಕ್ಕಿಂತಲೂ ಪತಿಯೇ ಅಧಿಕನೆಂದು ಆಕೆಯು ಸಹಜವಾಗಿಯೂ ತಿಳಿದುಕೊಂಡು ಆತನಿಗೆ ಆವಾವುದರಿಂದ ಸುಖ ವುಂಟಾಗಬಹುದೋ ಅದೆಲ್ಲವನ್ನೂ ಕೊಂಚವೂ ಬಿಡದೆ ನೆರವೇರಿಸ ಬಲ್ಲವ ಳಾಗಿದ್ದಳು.

ಮಹಾರಾಜಸಿಂಹನು ತನ್ನ ಸ್ತ್ರೀಯ ಅಂಗಸ್ಪರ್ಶದಿಂದ ಹರ್ಷ ಗೂಡಿ ತನ್ನ ದೇಹಾಯಾಸವೆಲ್ಲವನ್ನೂ ಒಂದೇ ತಡವೆಗೆ ಮರೆತು ದಕ್ಷಿಣ ದಿಕ್ಕಿನಲ್ಲಿ ತಾನು ಶತ್ರುನಿಗ್ರಹದಲ್ಲಿ ತೋರಿದ ಪರಾಕ್ರಮವನ್ನು ನಡೆದ ರೀತಿಯಲ್ಲಿಯೇ ಹೇಳತೊಡಗಿದನು. ನಾವು ಮೊದಲನೆಯ ವಿಲಾಸದಲ್ಲಿ ಸೂಚಿಸಿದ ದೇವಮಂದಿರದ ಸುದ್ದಿಯನ್ನು ಮಟ್ಟಿಗೆ ಮಹಾರಾಜನು ತನ್ನ

ಸತಿಗೆ ತಿಳಿಸಲು ಸಾಹಸವುಳ್ಳವನಾಗಲಿಲ್ಲ. ಆದರೂ ತನ್ನ ವರ್ಣನೆಯ ಮಧ್ಯದಲ್ಲಿ ಅದು ಆಗಿಂದಾಗ ಜ್ಞಾಪಕಕ್ಕೆ ಬರುತ್ತಿದ್ದರೂ ಯತ್ನದಿಂದ ಅದನ್ನು ಅಡಗಿಸಿಕೊಂಡು ಉಳಿದುವುಗಳನ್ನು ಆದ್ಯೋಪಾಂತವಾಗಿ ವಿವರಿಸಿದನು. ಸರ್ವೇಂದ್ರಿಯಗಳನ್ನೂ ಕಿವಿಯಾಗಿ ಮಾಡಿಕೊಂಡು ಕೇಳುತ್ತಾ ಕುಳಿತಿದ್ದ ಕಮಲನಿಗೆ ಈ ವರ್ಣನಾಭಾಗವಲ್ಲ ಅಷ್ಟಾಗಿ ತೃಪ್ತಿಯಾಗದೆ, ಇದರಲ್ಲಿ ಎಲ್ಲವನ್ನೂ ನಿರ್ವಂಚನೆಯಾಗಿ ತನ್ನ ಪ್ರಿಯನು ತನಗೆ ತಿಳಿಸಲಿಲ್ಲವೆಂದು ತಿಳಿದು—ಪ್ರಭೂ! ತಾವು ಅನೇಕ ಸಂಗತಿಗಳನ್ನು ವ್ಯಕ್ತಪಡಿಸಿರುವಂತೆ ತಮ್ಮ ಮಾತಿನ ರೀತಿಯಿಂದ ತಿಳಿದು ಬರುತ್ತಿಲ್ಲ. ನನ್ನಲ್ಲಿಯೂ ತಾವು ಮರ್ಮವಿಟ್ಟು ಮಾತನಾಡುವಂತಿದೆ. ತಾವು ಹೀಗೆ ಮಾಡಲು ಕಾರಣವೇನು? ನಾನು ಪರಸ್ತ್ರೀಯಲ್ಲವಷ್ಟೇ! ಎಂದು ಮಿದು ನುಡಿಗಳನ್ನಾಡಿದಳು.

ಮಹಾರಾಜ—(ಚಮತ್ಕೃತನಾಗಿ) ಪ್ರಿಯೆ! ಎಲ್ಲವನ್ನೂ ನಿನಗೆ ತಿಳಿಸಿರುವೆನಲ್ಲಾ!

ಕಮಲಿನಿ—ಇಲ್ಲ; ಎಲ್ಲಾ ವಿಷಯಗಳನ್ನೂ ತಿಳಿಸಲಿಲ್ಲ. ತಾವೇ ತಿಳಿಸದೇ ಹೋದರೆ, ನಮ್ಮಂತಹ ಹೆಣ್ಣು ಹೆಂಗುಸರು ಏನ ಮಾಡಲಾದೀತು? ನಾನಾದರೋ ತಮ್ಮ ಪಾದದಾಸಿ.

ಮಹಾರಾಜ—ಒಂದು ವಿಷಯವನ್ನು ಮಟ್ಟಿಗೆ ನಾನು ತಿಳಿಸದಿರುವುದೇನೋ ನಿಜ. ಆದರೆ ನೀನು ಆ ವಿಷಯವನ್ನು ಕೇಳಿದರೆ ನಗುವೆ.

ಕಮಲಿನಿ—ನಗುವುದೇಕೆ, ಪ್ರಭೂ? ಇಷ್ಟವಿಲ್ಲದಿದ್ದರೆ, ತಾವು ಅದನ್ನು ನನಗೆ ತಿಳಿಸದೆಯೇ ಇರಬಹುದು.

ಮಹಾರಾಜಸಿಂಹನು ಯತ್ನವಿಲ್ಲದೆಯೇ ಆ ದೇವಮಂದಿರದ ಸಂಬಂಧವಾದ ಎಲ್ಲಾ ವಿಷಯಗಳನ್ನೂ ಮೊದಲಿನಿಂದ ಕೊನೆಯ ವರೆಗೂ ಕಮಲಿನಿಗೆ ತಿಳಿಯಪಡಿಸಿದನು. ಕಮಲಿನಿಯು ಆವ ಮಾತನ್ನೂ ಆಡದೆ ಬಾಯಿ ಮುಚ್ಚಿಕೊಂಡು ಆ ವೃತ್ತಾಂತವೆಲ್ಲವನ್ನೂ ಕೇಳಿದಳು. ಮಹಾರಾಜಸಿಂಹನು ಎಲ್ಲವನ್ನೂ ಹೇಳಿ ಮುಗಿಸಿದ ಮೇಲೆಯೂ ಕಮಲಿನಿಯು

ಆವ ಮಾತನ್ನೂ ಆಡಲೇ ಇಲ್ಲ. ಗಂಡನು ಕೊಂಚ ಹೊತ್ತು ಹೆಂಡತಿಯ ಮುಖವನ್ನೇ ನೋಡಿದ ಬಳಿಕ—ನೀನೇತಕೆ ನಗಲಿಲ್ಲ, ಪ್ರಿಯೆ? ಎಂದು ಕೇಳಲು, ಕಮಲಿನಿಯು ಅದಕ್ಕೆ ಉತ್ತರವಾಗಿ—ಪ್ರಭೂ! ನಗುವುದಕ್ಕೆ ಕಾಲ ಬಂದರೆ ನಗುವೆನು, ಎಂದುಸುರಿದಳು.

---

## ಹತ್ತನೆಯ ವಿಲಾಸ

ಕುಮುದಿನಿಯು ಪತಿಯ ವಕ್ಷಃಸ್ಥಲದಲ್ಲಿ ತನ್ನ ತಲೆಯನ್ನಿಟ್ಟುಕೊಂಡು ತೆರೆದ ಕಣ್ಣುಗಳಿಂದ ಆತನನ್ನೇ ನೋಡುತ್ತಾ ರಾಜನೊಡ್ಡೋಲಗದಲ್ಲಿ ನಡೆದುದನ್ನು ಕೇಳುತ್ತಿದ್ದಳು. ಆಕೆಗೆ ಆ ವರ್ಣನೆಯಲ್ಲಿ ಕೊಂಚವಾದರೂ ಕುತೂಹಲವೆಂಬುದೇ ಇರಲಿಲ್ಲ. ಲಲಿತಸಿಂಹನು ಬೀದಿಯ ಬಿಕಾರಿಯಂತೆ ಸಂಚರಿಸುತ್ತಾ ಅದರಿಂದುಂಟಾಗಬಹುದಾದ ಬಗೆಬಗೆಯ ಕಷ್ಟಗಳ ವರ್ಣನೆಯನ್ನು ಮಾಡುತ್ತಿದ್ದರೆ, ಅದನ್ನು ಕಿವಿಯಾರೆ ಕೇಳುವುದಕ್ಕೆ ಕುಮುದಿನಿಗೆ ತುಂಬಾ ಇಷ್ಟವಿರುತ್ತಿದ್ದಿತು. ಆಕೆಯಾದರೋ ಒಡ್ಡೋಲಗದಲ್ಲಿ ನಡೆದುದನ್ನು ಕೇಳಲಿಲ್ಲವಾದರೂ, ತನ್ನ ಪತಿಯ ಮೃದುಮಧುರವಾದ ನುಡಿಗಳನ್ನು ಕೇಳಿ ತನ್ನೊಳಗೆ ತಾನೇ ಆನಂದಪಡುತ್ತಾ ಕುಳಿತಿದ್ದಳು. ಆಕೆಗೆ ಗಂಡನೆಂದರೆ ಎಷ್ಟೋ ಸಂತೋಷ; ಆವಾಗಲೂ ಗಂಡನ ಮುಖವನ್ನೇ ನೋಡಿಕೊಂಡಿರುವುದಕ್ಕೆ ಎಷ್ಟೋ ಇಷ್ಟ; ಗಂಡನೊಡನೆ ಮಾತನಾಡುವುದೆಂದರೆ, ಆಕೆಯ ಸಂತೋಷಕ್ಕೆ ತುದಿಮೊದಲೇ ಇರುತ್ತಿರಲಿಲ್ಲ. ಪ್ರೀತಿರಸಾಯನವನ್ನು ಸೇವಿಸಿ ಮೆಯ್ಯುಬ್ಬಿದ ಹೆಂಗುಸರ ರೀತಿಯೇ ಹೀಗಿರುವುದು.

ಲಲಿತಸಿಂಹನು ತನ್ನ ಮಾತನ್ನು ಒಂದು ರೀತಿಯಲ್ಲಿ ಮುಗಿಸಿದ ಬಳಿಕ—ಪ್ರಿಯೆ! ಸತ್ಯವಾಗಿಯೂ ಯುವರಾಜನಾಗಿರಲು ನನಗೆ ಇಷ್ಟವೇ ಇಲ್ಲ. ನನ್ನ ಚಿಕ್ಕ ತಂದೆಯು ಇದನ್ನು ಸ್ವೀಕರಿಸುವುದಾದರೆ, ನಾನು ಬದುಕಿಕೊಳ್ಳುವೆನು. ಹೀಗಾದ ಬಳಿಕ, ಪ್ರಿಯೆ ಕುಮುದಿನಿ! ನಾವಿಬ್ಬರೂ ಒಂದು ನಿರ್ಜನವಾದ ಪ್ರದೇಶದಲ್ಲಿದ್ದುಕೊಂಡು ಸುಖವಾಗಿರಬೇಕೆಂದು ಪರ್ಯಾಲೋಚಿಸಿರುವೆನು, ಎಂದನು.

ಕುಮುದಿನಿ—(ಸಂತೋಷದಿಂದ) ಪ್ರಭೂ! ಅದು ಒಳ್ಳೆಯ ಆಲೋಚನೆಯೇ ಸರಿ. ಕಾಲಹರಣಕ್ಕೆಡೆಗುಡದೆ, ನಾವು ಹಾಗೇಕೆ ಮಾಡಬಾರದು?

ಲಲಿತ—ಮನುಷ್ಯನು ಚಿಂತಿಸಿದುದೆಲ್ಲವೂ ಎಲ್ಲಾ ಕಾಲದಲ್ಲಿಯೂ ಫಲಿಸುವುದೆಂದರೇನು? ಕುಮುದಿನಿ! ನನಗೇನೋ ಇಷ್ಟವುಂಟು; ಆದರೆ ಅದು ನನ್ನ ಹಣೆಯಲ್ಲಿ ಬರೆದಿಲ್ಲ. ನಾನೇ ಈ ಮಾರವಾಡದ ಸಿಂಹಾಸನಕ್ಕೆ ಉತ್ತರಾಧಿಕಾರಿ.

ಕುಮುದಿನಿ—ಸಂತೋಷ, ತಾವು ಮಹಾರಾಣಾ ಸಾಹೇಬರಾಗುವಿರಲ್ಲವೇ? ಬಳಿಕ ನಿಮ್ಮ ಮನೋರಥವು ನೆರವೇರುವುದಿಲ್ಲವೆಂದರೇನು?

ಲಲಿತ—ನಾನು ಮಹಾರಾಣನಾಗುವುದಾದರೆ, ನೀನು ಮಹಾರಾಣಿಯಾಗುವುದಿಲ್ಲವೇ?

ಲಲಿತಸಿಂಹನು ಹೀಗೆ ಹೇಳಿ ಆದರದಿಂದಲೂ ಪ್ರೇಮದಿಂದಲೂ ಕುಮುದಿನಿಯ ಅನಿಂದಿತವಾದ ಬಿಂಬಾಧರವಲ್ಲಿ ಮುತ್ತಿಟ್ಟನು. ಕುಮುದಿನಿಯು ತಟ್ಟನೆ ಎದ್ದು ನಿಂತುಕೊಂಡು—ಪ್ರಭೂ! ನಾನೊಂದು ಮಾತ ನಾಡಬೇಕೆಂದಿರುವೆನು. ತಾವು ನಗುವಿರೇನೋ? ಎಂದು ನಗುತ್ತಾ ಮಾತನಾಡಿದಳು.

ಲಲಿತ—(ನಗುತ್ತಾ) ನಾನೇತಕ್ಕೆ ನಗಲಿ?

ಕುಮುದಿನಿ—ಹಾಗಾದರೆ ಕೇಳೋಣವಾಗಲಿ, ನಾನು ಮಹಾರಾಣಿಯಾಗಲು ಇಷ್ಟಪಡುವುದಿಲ್ಲ.

ಲಲಿತ—ಅದೇಕೆ, ಪ್ರಿಯೆ?

ಕುಮುದಿನಿ—ನಾನೊಂದು ಸ್ವಪ್ನವನ್ನು ಕಂಡೆನು. ನೋಡಿದಿರಾ, ನೀವು ನಗುವಿರಿ! ನಗಕೂಡದೆಂದು ನಾನು ಮೊದಲೆಯೇ ತಿಳಿಸಿಕೊಂಡಿರುವೆನು.

ಲಲಿತ—ಇಲ್ಲ, ಕುಮುದಿನಿ! ಇನ್ನು ನಾನು ನಗುವುದಿಲ್ಲ. ನೀನು ಕಂಡ ಸ್ವಪ್ನವೆಂಥದು, ಹೇಳು?

ಕುಮುದಿನಿ—ನಗುವುದಿಲ್ಲವೋ?

ಲಲಿತ—ನಗುವುದಿಲ್ಲ.

ಕುಮುದಿನಿ—ನನ್ನಾಣೆಗೂ?

ಲಲಿತ—ನಿನ್ನಂತಹ ಹುಡುಗಾಟದ ಹೆಣ್ಣನ್ನು ನಾನೆಲ್ಲಿಯೂ ನೋಡಿಲ್ಲ. ಈಗ ಹೇಳುವೆನು, ಕೇಳು. ನಾನು ನಿನ್ನಾಣೆಗೂ ನಗುವುದಿಲ್ಲ, ನಗುವುದಿಲ್ಲ, ನಗುವುದಿಲ್ಲ. ನಾನು ಮೂರು ಸಲ ಪ್ರಮಾಣಮಾಡಿ ಕೊಟ್ಟಿರುವೆನು. ಇನ್ನಾದರೂ ಧೈರ್ಯವಾಗಿ ಹೇಳಬಹುದಷ್ಟೇ?

ಕುಮುದಿನಿ—ಪ್ರಭೂ! ಹಾಗಾದರೆ ಹೇಳುವೆನು, ಕೇಳೋಣವಾಗಲಿ. ನಾನೊಂದು ಸ್ವಪ್ನವನ್ನು ಕಂಡೆನು. ಆ ಸ್ವಪ್ನದಲ್ಲಿ ನನ್ನ ಹಾಗಿದ್ದ ಒಬ್ಬ ಹೆಂಗುಸು ಬಂದು, ಎಷ್ಟೋ ಆದರದಿಂದ ನನ್ನ ಕೈ ಹಿಡಿದುಕೊಂಡು—ಕುಮುದಿನಿ! ನೀನು ಮಹಾರಾಣಿಯಾಗಲಾರೆ; ನಾನೇ ಮಹಾರಾಣಿಯಾಗುವೆನು, ಎಂದು ಹೇಳಿದಳು.

ಲಲಿತಸಿಂಹನು ಕೊಂಚ ಭಯದಿಂದಲೂ, ಕೊಂಚ ಅಚ್ಚರಿಯಿಂದಲೂ, ಕೊಂಚ ನಗೆಯಿಂದಲೂ ಕೂಡಿದವನಾಗಿ ಪ್ರಿಯೆಯನ್ನು ಕುರಿತು—ಆಕೆಯಾರಿರಬಹುದು? ಆವಾಗಲಾದರೂ ನೀನು ನಿನ್ನನ್ನೇ ಸ್ವಪ್ನದಲ್ಲಿ ಕಂಡಿರುವೆಯಾ? ಎಂದು ಕೇಳಿದನು.

ಕುಮುದಿನಿ—ಇಲ್ಲ; ಆಕೆಯು ಈ ದೇಶದವಳಲ್ಲ.

ಲಲಿತ—ನಿನಗೆ ಗೊತ್ತಾದ ಬಗೆ ಹೇಗೆ?

ಕುಮುದಿನಿ—ಆಕೆಯ ವೇಷವು ನಮ್ಮ ದೇಶದವರಿಗೆ ತಕ್ಕಹಾಗಿರಲಿಲ್ಲ.

ಇದನ್ನು ಕೇಳಿದ ಬಳಿಕ ಲಲಿತಸಿಂಹನು ಏನನ್ನೋ ಚಿಂತಿಸತೊಡಗಿದನು. ತಾನು ಚಿಂತಿಸುತ್ತಿರುವುದನ್ನು ಕುಮುದಿನಿಯು ಕಂಡು

ಕೊಂಡರೆ, ಆಕೆಯು ಮತ್ತಷ್ಟು ಹೆದರಿ ಹೋಗುವಳೆಂದು ತಿಳಿದು— ಪ್ರಿಯೆ! ಸ್ವಪ್ನವು ಸತ್ಯವೆಂಪರೇನು? ಬುದ್ಧಿಮಂತರಾರೂ ಸ್ವಪ್ನವನ್ನು ನಂಬುವುದೇ ಇಲ್ಲ. ನೀನು ನನ್ನ ಆದರಕ್ಕೆ ಪೂರ್ಣ ಪಾತ್ರವು; ನೀನು ನನ್ನ ಸರ್ವಸುಖಕ್ಕೂ ಸರ್ವಸ್ವ ಸ್ವರೂಪಿಣಿಯು; ನೀನು ನನ್ನ ಪ್ರೇಮಾಸ್ಪದೆಯಾದ ಕುಮುದಿನಿ. ಆದುದರಿಂದ ನೀನೇ ಮಾರವಾಡದ ಮಹಾರಾಣಿಯಾಗುವೆ, ಎಂದು ನುಡಿದನು.

ಈ ಮಾತನ್ನು ಕೇಳಿದ ಕೂಡಲೆ, ಕುಮುದಿನಿಯು ತನ್ನ ತಲೆಯನ್ನು ಅಲುಗಾಡಿಸಿದಳೇ ಹೊರತು, ಅವಳ ಬಾಯಿಂದ ಮತ್ತಾವ ಮಾತೂ ಹೊರಡಲಿಲ್ಲ. ಬಳಿಕ ಇಬ್ಬರೂ ಮಲಗಿ ನಿದ್ರಿಸಿದರು.

ಹೆಚ್ಚಿನ ಸಂತೋಷದಿಂದ ಮಹಾರಾಜಸಿಂಹನು ತನ್ನ ಹೆಂಡಿತಿಯೊಡನೆ ಮಾತನಾಡುವುದಕ್ಕೆ ಬಂದಿದ್ದನು; ಅದಕ್ಕಿಂತಲೂ ಹೆಚ್ಚಿನ ಸಂತೋಷದಿಂದ ಲಲಿತಸಿಂಹನೂ ತನ್ನ ಹೆಂಡಿತಿಯೊಡನೆ ಮಾತನಾಡುವುದಕ್ಕೆ ಸಿದ್ಧನಾಗಿ ಬಂದಿದ್ದನು. ಆದರೆ, ಅವರಿಬ್ಬರ ಸುಖಸಂತೋಷದ ಮಧ್ಯದಲ್ಲಿ ಒಂದು ವಿಷಾದ ರೇಖೆಯು ನೆಳಲು ಬಿದ್ದು ಮಾಲಿನ್ಯವೇರ್ಪಟ್ಟಿತು.

---

## ಹನ್ನೊಂದನೆಯ ವಿಲಾಸ

ನಮ್ಮ ಈ ಭರತಖಂಡದ ಪಶ್ಚಿಮಭಾಗದಲ್ಲಿ ರಾಜಪುತ್ರ ಸಂಸ್ಥಾನದ ಉತ್ತರದಿಂದ ಹಿಡಿದು ನೀಲಗಿರಿಯ ಪರ್ಯಂತವೂ ಇರತಕ್ಕ ಪ್ರದೇಶವು ಬೆಟ್ಟಗುಡ್ಡಗಳ ಶಾಖೋಪಶಾಖೆಗಳಿಂದ ತುಂಬಿ ಹೋಗಿರುವುದು; ಎಲ್ಲಿಲ್ಲಿ ನೋಡಿದರೂ ಬೆಟ್ಟದ ಮಾಲೆಯೇ ಕಾಣಬರುತ್ತಿರುವುದು. ಆ ಪರ್ವತ ಶ್ರೇಣಿಯಲ್ಲಿ ಮೇಲುಗಡೆ ಲಕ್ಷೋಪಲಕ್ಷ ಶಿಖರಗಳೂ, ಕೆಳಗಡೆ ತೆರತೆರನಾದ ಕೊರಕಲುಗಳೂ ಕಿಕ್ಕಿರಿದು ಹೋಗಿರುವುವು. ಭೂವಿವರಣ ಶಾಸ್ತ್ರವನ್ನು ಪರಿಶೀಲಿಸಿದವರೆಲ್ಲರಿಗೂ ಇದು ಗೋಚರಿಸದೇ ಇರದು.

ಈ ಪರ್ವತ ಶ್ರೇಣಿಯ ಎಲ್ಲೆಡೆಗಳಲ್ಲಿಯೂ ಒಂದು ಬಗೆಯ ಅಸಭ್ಯರಾದ ಕಾಡ ಜನರು ವಾಸಮಾಡಿಕೊಂಡಿರುವರು. ರಾಜಪುತ್ರರಿಗೂ ಮುಸಲಮಾನರಿಗೂ ಯುದ್ಧಗಳು ನಡೆಯುತ್ತಿದ್ದಾಗಲೆಲ್ಲಾ ಈ ಜನರು ರಾಜಪುತ್ರರೊಡನೆ ಸೇರಿಕೊಂಡು ಅವರ ಕುಲ ಗೌರವವನ್ನೂ ಭಾರತ ಭೂಮಿಯ ಸ್ವಾತಂತ್ರ್ಯವನ್ನೂ ಕಾಪಿಡುವುದರಲ್ಲಿ ಎಷ್ಟೋ ಯತ್ನಮಾಡಿರುವರು. ಆದುದರಿಂದಲೇ ಇವರ ಹೆಸರು ಇಂದಿನ ವರೆಗೂ ನಮ್ಮ ಭರತಖಂಡದಲ್ಲಿ ಇನ್ನೂ ಪ್ರಚಾರದಲ್ಲಿರುವುದು. ಇವರು ಚರಿತ್ರೆಯಲ್ಲಿ ಭಿಲ್ಲರೆಂದು ಪ್ರಸಿದ್ಧರಾಗಿರುವರು. ಭಿಲ್ಲರಂತಹ ಸತ್ಯಪ್ರಿಯರೂ, ಅತಿಥಿ ಸತ್ಕಾರ ನಿರತರೂ, ಸಾಹಸಿಗಳೂ, ವೀರ್ಯವಂತರೂ ಈ ಪ್ರಪಂಚದಲ್ಲಿ ಮತ್ತಾರೂ ಇಲ್ಲವೆಂದೇ ಹೇಳಬಹುದು.

ಈ ಭಿಲ್ಲರು ಪಶ್ಚಿಮ ಘಟ್ಟಗಳ ಎಲ್ಲೆಡಗಳಲ್ಲಿಯೂ ವಾಸವಾಗಿರುವರು. ಇವರಾದರೋ ಒಂದೆಡೆಯಲ್ಲಿ ಒಟ್ಟಾಗಿ ಸೇರಿಕೊಂಡು ವಾಸ ಮಾಡುವ ಸಂಪ್ರದಾಯದವರಲ್ಲ. ಇವರು ಒಂದೊಂದು ಕಡೆಯಲ್ಲಿ ಒಂದೊಂದು ಪಂಗಡವಾಗಿ ಕಲ್ಪಿಸಿಕೊಂಡು ವಾಸಮಾಡಿಕೊಂಡಿರುವ ಸಹಸ್ರಾಧಿಕ ಗ್ರಾಮಗಳನ್ನು ಈಗಳೂ ಆರು ಬೇಕಾದರೂ ನೋಡಬಹುದು. ಈ ಗ್ರಾಮಗಳಲ್ಲಿ ಕೆಲವು ದೊಡ್ಡವಾಗಿಯೂ ಕೆಲವು ಸಣ್ಣವಾಗಿಯೂ ಇರುವುದುಂಟು; ಕೆಲವು ಗ್ರಾಮಗಳಲ್ಲಿ ಸಂಪತ್ತಿನಿಂದ ಸಂತೋಷವು ಉಕ್ಕಿ ಹರಿಯುತ್ತಿರುವುದು; ಕೆಲವು ಗ್ರಾಮಗಳಲ್ಲಿ ಯಾದರೋ ದಾರಿದ್ರ್ಯದಿಂದ ಹಾಳು ಸುರಿಯುತ್ತಿರುವುದು.

ಒಂದೊಂದು ಗ್ರಾಮದಲ್ಲಿಯೂ ಒಬ್ಬೊಬ್ಬ ದಳಪತಿ (ಪಂಗಡದೊಡೆಯ) ಯಿರುವನು. ಹೀಗೆಯೇ ಹತ್ತು ಹದಿನೈದಕ್ಕೆ ಕಡಮೆಯಿಲ್ಲದೆಯೂ, ಮೂವತ್ತು ನಲವತ್ತಕ್ಕೆ ಮೀರದೆಯೂ ಇರತಕ್ಕ ಗ್ರಾಮಗಳಿಗೆ ಅಧಿಪತಿಯಾದವನು ರಾಜನೆಂದು ಕರೆಯಿಸಿಕೊಳ್ಳುವನು. ಇಂತಹ ರಾಜರಲ್ಲಿ ದೊಡ್ಡವನೆಂದೂ, ಚಿಕ್ಕವನೆಂದೂ ಭೇದವಿರುವುದು. ಇವರಲ್ಲಿ ಕೆಲವರು ಪರಾಕ್ರಮಶಾಲಿಗಳಾಗಿಯೂ, ಕೆಲವರು ದುರ್ಬಲರಾಗಿಯೂ ಇರುವರು. ಆವ ರಾಜನು ಆವ ಕಾಲದಲ್ಲಿ ಪ್ರಬಲನಾಗಿರುವನೋ ಆತನು ಆ ಕಾಲದಲ್ಲಿ ಅಕ್ಕಪಕ್ಕದ ರಾಜರನ್ನು ತನ್ನ ಕಯ್ಯಲ್ಲಿಟ್ಟುಕೊಳ್ಳುವುದಕ್ಕೆ

ಯತ್ನಮಾಡುತ್ತಲೇ ಇರುವನು. ನಾವು ಆವ ಕಾಲದ ಘಟನಾ ಚಕ್ರವನ್ನು ತಿರುಗಿಸುತ್ತಾ ಕುಳಿತಿರುವೆವೋ, ಆಗಣ ಕಾಲದಲ್ಲಿ ಭಿಲ್ಲರಾಜರು ಪರಸ್ಪರ ಜಯಾಪೇಕ್ಷೆಯಿಂದ ಹೋರಾಡುತ್ತಿದ್ದರು. ಇವರಿವರ ಹೋರಾಟದಲ್ಲಿ ಆವುದೂ ಇತ್ಯರ್ಥವಾಗದೆ, ಭಿಲ್ಲರಾಜರೆಲ್ಲರೂ ಮಾರವಾಡದ ಮಹಾರಾಣನನ್ನೇ ತಮ್ಮ ಚಕ್ರವರ್ತಿಯನ್ನಾಗಿ ಒಪ್ಪಿಕೊಳ್ಳುತ್ತಿದ್ದರು. ಭಿಲ್ಲರಾಜರಿಗೆ ಆಗಿಂದಾಗ ಸಂಭವಿಸುತ್ತಿದ್ದ ಭಿನ್ನಾಭಿಪ್ರಾಯಗಳಲ್ಲಿಯೂ ಸ್ವಪ್ನ್ಯಾಹ ಕಲಹಗಳಲ್ಲಿಯೂ ಮಾರವಾಡದ ಮಹಾರಾಣನೇ ಮಧ್ಯಸ್ಥನಾಗಿ ಬಂದು ನಿಂತು ಯುಕ್ತಾಯುಕ್ತವನ್ನು ಪರಿಶೀಲಿಸುತ್ತಿದ್ದನು; ಒಂದು ವೇಳೆ ಆರಾದರೂ ಈ ನಿರ್ಣಯಕ್ಕೆ ವಿರೋಧವಾಗಿ ನಡೆಯುವರೆಂದು ಗೊತ್ತಾದರೆ, ಅವರಿಗೆ ತಕ್ಕ ದಂಡವಿಧಾನವನ್ನೂ ಮಾಡುತ್ತಿದ್ದನು.

ಇವೇ ಆದಿಯಾದ ಕಾರಣಗಳಿಂದ ಬಿಲ್ಲರು ಆವಾಗಲೂ ಒಂದೆಡೆಯಲ್ಲಿ ಒಟ್ಟುಗೂಡತಕ್ಕವರಾಗಿಯೇ ಇರಲಿಲ್ಲ. ಇಂತಹ ವಿಲಕ್ಷಣ ಸ್ವಭಾವದವರಾದ ಭಿಲ್ಲರು ಇತರರಿಂದ ಜಯಿಸಲ್ಪಡುವುದಕ್ಕೆ ಅಸಾಧ್ಯರಾಗಿಯೂ, ಪರಾಧೀನತೆಯನ್ನು ತಳ್ಳಿ ಸ್ವತಂತ್ರರಾಗಿರುವುದಕ್ಕೆ ಅಶಕ್ತರಾಗಿಯೂ ಇದ್ದರು. ಇಂತಹ ಭಿಲ್ಲರನ್ನು ಒಟ್ಟುಗೂಡಿಸಿ ಒಂದೇ ಸಂಘದವರನ್ನಾಗಿ ಮಾಡುವಂತಹ ಭಿಲ್ಲ ಧೀರನು ಇಂದಿನ ವರೆಗೂ ಆರೂ ಹುಟ್ಟಲೇ ಇಲ್ಲ. ಆದುದರಿಂದ ಭಿಲ್ಲರೆಂಬುವರು ಒಂದೇ ಜಾತಿಯವರಾದರೂ ಒಂದು ಜಾತಿಯಲ್ಲ, ಒಂದೇ ಸಂಘದವರಾದರೂ ಒಂದು ಸಂಘವಲ್ಲ; ಇತರರಿಗೆ ಅಧೀನರಲ್ಲದಿದ್ದರೂ ತಾವು ಮುಟ್ಟಿಗ ಸ್ವತಂತ್ರರಲ್ಲ.

ನಾವು ಅಂತರಂಗದ ಈ ವ್ಯಾಖ್ಯಾನವನ್ನು ರಚಿಸುವ ಕಾಲದಲ್ಲಿ, ಅವುದೋ ಕಾರಣದಿಂದ ಭಿಲ್ಲರೆಲ್ಲರೂ ಕ್ರಮಕ್ರಮವಾಗಿ ಒಟ್ಟುಗೂಡುತ್ತಾ ಬರುತ್ತಿದ್ದರು. ಲೋಕದಲ್ಲಿ ಧರ್ಮವೊಂದೇ ಭಿಲ್ಲರನ್ನೂ ಒಟ್ಟುಗೂಡಿಸುವ ಶಕ್ತಿಯುಳ್ಳದೆಂದು ಬಲ್ಲವರು ನುಡಿಯುವರು. ಈ ಸನಾತನ ಧರ್ಮವೊಂದರಿಂದಲೇ ಭಿಲ್ಲರು ಕಾಲಕ್ರಮದಿಂದ ಪರಸ್ಪರ ವೈಷಮ್ಯಗಳನ್ನು ದೂರಮಾಡಿ ಒಂದೇ ಜಾತಿಯವರಾಗುತ್ತಾ ಬಂದಿದ್ದರು. ಇದಕ್ಕೆ ಮೊದಲು ಭಿಲ್ಲರೆಲ್ಲರೂ ಒಂದೇ ಧರ್ಮಕ್ಕೆ ಕಟ್ಟುಬಿದ್ದಿದ್ದರೆಂದು

ಹೇಳುವುದಕ್ಕಾಗುವುದಿಲ್ಲ. ಕಾರಣವೇನೆಂದರೆ—ಬೇರೆ ಬೇರೆಯ ಗ್ರಾಮದ ಭಿಲ್ಲರು ಬೇರೆಬೇರೆಯ ಗುರುಗಳನ್ನು ನಿಯಮಿಸಿಕೊಂಡು ಬೇರೆ ಬೇರೆಯ ದೇವತೆಗಳನ್ನು ಪೂಜಿಸುತ್ತಿದ್ದರು. ಆದರೆ ಪ್ರಕೃತ ಸಂದರ್ಭದಲ್ಲಿ ಪರಮಾನಂದ ಸ್ವಾಮಿಯೆಂಬ ಸನ್ಯಾಸಿಯೊಬ್ಬನು ಸನಾತನವಾದ ಆರ್ಯಧರ್ಮವೊಂದನ್ನೇ ಎಲ್ಲಾ ಭಿಲ್ಲರಲ್ಲಿಯೂ ಬಿತ್ತರಿಸಲು ಉಜ್ಜುಗಿಸಿದನು. ಈ ಸನ್ಯಾಸಿಯ ಪ್ರಯತ್ನಬಲದಿಂದ ಅವರೆಲ್ಲರೂ ಒಂದೇ ಮೂರ್ತಿಯ ಪೂಜೆಯನ್ನೂ, ಒಂದೇ ಶಕ್ತಿಯ ಉಪಾಸನೆಯನ್ನೂ ಮಾಡಲುಪಕ್ರಮಿಸಿದ್ದರು. ಪರಮಾನಂದ ಸ್ವಾಮಿಯು ಅತಿ ಪ್ರಯಾಸಪಟ್ಟಾದರೂ ಒಂದೊಂದು ಗ್ರಾಮಕ್ಕೂ ಹೋಗಿ ಒಬ್ಬೊಬ್ಬನಿಗೂ ಕಾಳೀಪೂಜೆಯ ವಿಧಿಯನ್ನು ಹೇಳಿಕೊಟ್ಟು ಒಬ್ಬೊಬ್ಬನನ್ನೂ ಕಾಳಿಕೋಪಾಸನೆಯಲ್ಲಿ ದೀಕ್ಷಿತನನ್ನಾಗಿ ಮಾಡುತ್ತಿದ್ದನು.

ಜನರ ಸ್ವಭಾವವನ್ನು ನೋಡಿದರೆ, ಒಕ್ಕಟ್ಟಿಗೆ ಧರ್ಮವೊಂದೇ ಕಾರಣವೆಂದು ಹೇಳುವುದಕ್ಕಾಗುವುದಿಲ್ಲ. ಈ ಧರ್ಮವನ್ನು ಕಾಪಿಡುವುದಕ್ಕೆ ಸಮರ್ಥನಾದ ಅಧಿಪತಿಯೊಬ್ಬನು ಇದ್ದೇ ಇರಬೇಕು. ವೈದಿಕ ವ್ಯವಹಾರವನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಸರ್ವಸಂಗಪರಿತ್ಯಾಗ ಮಾಡಿದ ಗುರುವೂ, ಲೌಕಿಕ ವ್ಯವಹಾರವನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಭೀಮಕಾಂತ ಸ್ವರೂಪನಾದ ರಾಜನೂ ಇದ್ದ ಹೊರತೂ ಜನರಲ್ಲಿ ಐಕಮತ್ಯವುಂಟಾಗಲಾರದು. ಪರಮಾನಂದ ಸ್ವಾಮಿಯು ಅಂತಹ ಒಬ್ಬ ಸಮರ್ಥನಾದ ನೇತಾರನೇ ಆಗಿದ್ದನು.

ಭಿಲ್ಲರಾಜ್ಯದ ಒಂದು ಕಡೆಯಿಂದ ಮತ್ತೊಂದು ಕಡೆಯ ವರೆಗೂ, ಭಿಲ್ಲರೆಲ್ಲರೂ ಈ ಸ್ವಾಮಿಯ ಮಾತನ್ನು ವೇದವಾಕ್ಯದಂತೆ ಗೌರವಿಸುತ್ತಿದ್ದರು, ಆತನನ್ನು ದೇವರೆಂದು ಭಾವಿಸಿ ಪೂಜಿಸುತ್ತಿದ್ದರು, ಎಲ್ಲರೂ ಆತನ ಆಜ್ಞೆಯನ್ನು ತಲೆಯಲ್ಲಿ ಧರಿಸಿ ಅದನ್ನು ನೆರವೇರಿಸುವುದರಲ್ಲಿ ಪ್ರಾಣವನ್ನಾದರೂ ಒಪ್ಪಿಸಿಬಿಡುವವರಾಗಿದ್ದರು. ಆದರೆ ಆತನು ಸನ್ಯಾಸಿ; ಸರ್ವಸಂಗಪರಿತ್ಯಾಗಿಯಾದ ವಿರಾಗಿ. ಆದುದರಿಂದ ಭಿಲ್ಲರ [illegible] ಸನಾತನಧರ್ಮ

ಧರ್ಮವನ್ನು ಬಿತ್ತರಿಸುವುದಕ್ಕೂ ಲೋಕತಂತ್ರವನ್ನು ಪಕ್ಷಪಾತವಿಲ್ಲ ದೆಯೇ ನೆರವೇರಿಸುವುದಕ್ಕೂ ಆತನಿಗೆ ಅವಕಾಶವಿರುತ್ತಿರಲಿಲ್ಲ.

ಅದು ಕಾರಣ ಆ ಸನ್ಯಾಸಿಯು ಲೋಕ ವ್ಯವಹಾರವನ್ನು ನೋಡಿ ಕೊಳ್ಳುವುದಕ್ಕಾಗಿ ಒಬ್ಬ ನೇತಾರನನ್ನು ಕಲ್ಪಿಸಬೇಕೆಂದು ಆವಾಗಲೂ ಚಿಂತಿಸುತ್ತಲೇ ಇರುತ್ತಿದ್ದನು. ಆತನ ಇಷ್ಟಕ್ಕೆ ಅನುಸಾರವಾಗಿಯೇ ಭಿಲ್ಲರ ಜಾತಿಯಲ್ಲಿ ಒಬ್ಬ ನಾಯಕನು ಆಗಲೇ ಜನ್ಮಗ್ರಹಣಮಾಡಿದ್ದನು.

## ಹನ್ನೆರಡನೆಯ ವಿಲಾಸ

ಭಿಲ್ಲ ಜಾತಿಯಲ್ಲಿ ಹಿಂದೆ ಹೇಳಿದ ನಾಯಕನು ಒಬ್ಬ ಬಾಲಕನಾ ಗಿದ್ದನು. ಈ ಬಾಲಕನ ವಯಸ್ಸು ಇನ್ನೂ ಹದಿಮೂರು ವರ್ಷಗಳು. ಈತನು ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಭಿಲ್ಲರಿಗೆಲ್ಲಾ ನಾಯಕ ನೆನಿಸಿ ಕೊಂಡಿದ್ದನು. ಭಿಲ್ಲರಲ್ಲಿ ಹುಡುಗನೂ ಮುದುಕನೂ, ಪ್ರಬಲನೂ ದುರ್ಬಲನೂ, ಬಡವನೂ ಬಲ್ಲಿದನೂ, ಗಂಡಸೂ ಹೆಂಗುಸೂ ಎಲ್ಲರೂ ಈ ಹುಡುಗನಿಗೆ ಅಧೀನರಾಗಿರುವುದಕ್ಕೆ ಒಪ್ಪಿಕೊಂಡಿದ್ದರು. ಭಿಲ್ಲರಾಜ್ಯದ ಒಂದೊಂದು ಗ್ರಾಮದಲ್ಲಿಯೂ ಜುವೇಲಿಯಾ ಎಂಬ ಹೆಸರಿನಿಂದ ಈ ವೀರಬಾಲನು ಹೊಗಳಿಸಿಕೊಳ್ಳಲ್ಪಡುತ್ತಿದ್ದನು. ಮೈಸೂರು ಪ್ರಾಂತ ದಿಂದ ಹಿಡಿದು ದೂರದಲ್ಲಿರುವ ರಾಜಪುತ್ರಸ್ಥಾನದ ವರೆಗೂ ವಾಸವಾ ಗಿರುವ ಭಿಲ್ಲ ಜಾತಿಯವರೆಲ್ಲರೂ ಈ ಹುಡುಗನ ಶಾಸನವನ್ನು ಯಮ ಶಾಸನವೆಂದು ತಿಳಿದು ಗಡಗಡನೆ ನಡುಗಿಕೊಂಡಿರುತ್ತಿದ್ದರು.

ಈ ನವನಾಯಕನ ಕಾಲದಲ್ಲಿ ಭಿಲ್ಲರಲ್ಲಿ ವಾದ ವಿವಾದಗಳು ಮಾಯವಾಗಿ ಬಿಟ್ಟಿದ್ದುವು. ಇದಕ್ಕೆ ಮೊದಲು, ಭಿನ್ನಾಭಿಪ್ರಾಯವುಂ ಟಾದೊಡನೆಯೇ ಸಣ್ಣ ಸಣ್ಣ ಕಲಹವು ಅಂಕುರಿಸಿ ಅದು ದೊಡ್ಡ ದೊಡ್ಡ ಯುದ್ಧಗಳಲ್ಲಿ ಪರ್ಯವಸಾನವಾಗುತ್ತಿತ್ತು. ಈಗೇನಾದರೋ ಅಂತಹ ವಾದ ವಿವಾದಗಳಿಗೆ ಆಸ್ಪದವೇ ಇರುತ್ತಿರಲಿಲ್ಲ. ಒಂದೊಂದು ವೇಳೆ ಪ್ರಮಾದವಶದಿಂದ ವಿವಾದವುಂಟಾಗುವ ಸಂದರ್ಭದಲ್ಲಿ, ಆರೂ

ಮಾರವಾಡದ ಮಹಾರಾಣನ ಬಳಿಕೆ ನ್ಯಾಯವನ್ನು ಪಡೆದುಕೊಳ್ಳುವುದಕ್ಕೆ ಹೋಗುತ್ತಿರಲಿಲ್ಲ; ಎಲ್ಲರೂ ತಮ್ಮ ತಮ್ಮ ಸಂಕಟಗಳನ್ನು ನಾಯಕನಾದ ಜುಮೋಲಿಯನ ಬಳಿಯಲ್ಲಿ ಅರುಹುತ್ತಿದ್ದರು. ಆ ಬಾಲಕನು ಆವುದನ್ನು ನಿರ್ಣಯಿಸುತ್ತಿದ್ದನೋ, ಅದನ್ನು ಉಭಯ ಪಕ್ಷದವರೂ ಮಾನ್ಯ ಮಾಡಿ ನಡೆಯಿಸಿಕೊಂಡು ಬರುತ್ತಿದ್ದರು. ಮೊದಲಲ್ಲಿಯಾದರೋ ಕೆಲ ಕೆಲವರು ಮಾರವಾಡದ ಮಹಾರಾಣನ ನಿರ್ಣಯಕ್ಕೆ ವಿರೋಧವಾಗಿ ವರ್ತಿಸಲು ಸಾಹಸಿಗಳಾಗುತ್ತಿದ್ದರು; ಈಗಲಾದರೋ ಜುಮೋಲಿಯನ ಮಾತೇ ಮಾತು; ಆತನ ಮಾತೇ ವೇದವಾಕ್ಯವು. ಇಂದಿನ ವರೆಗೂ ಆರೂ ಆ ಬಾಲಕನ ಆಜ್ಞೆಯನ್ನು ಉಲ್ಲಂಘಿಸಿದವರೇ ಇಲ್ಲ.

ಭಿಲ್ಲರಿಗೆ ತಮ್ಮ ಜಾತಿಗೂ ಸ್ವಭಾವಕ್ಕೂ ತಕ್ಕ ನಾಯಕನೇ ದೊರೆತಂತಾಯಿತು. ಜುಮೋಲಿಯನು ರಾಜಕುಮಾರನಲ್ಲ; ಜುಮೋಲಿಯನು ರಾಜನು ಮೊದಲೇ ಅಲ್ಲ. ನಮ್ಮ ಜುಮೋಲಿಯನಿಗೆ ಅರಮನೆಯಿಲ್ಲ, ಮಂತ್ರಿಯಿಲ್ಲ; ಸಭೆಯಿಲ್ಲ, ಸಭಾಸ್ತಾರರಿಲ್ಲ; ಸೈನ್ಯವಿಲ್ಲ, ಆನೆಯಿಲ್ಲ, ಕುದುರೆಯಿಲ್ಲ; ದೇಶವಿಲ್ಲ, ಕೋಶವಿಲ್ಲ. ಜುಮೋಲಿಯನು ಸಾಮಾನ್ಯನಾದ ಭಿಲ್ಲನಂತೆ ಒಂದು ಸಣ್ಣ ಮನೆಯಲ್ಲಿ ವಾಸಮಾಡಿಕೊಂಡು ಇರುತ್ತಿದ್ದನು. ಆತನ ಬಳಿಯಲ್ಲಿ ಒಂದೆರಡು ಕುದುರೆಗಳೂ ನಾಲ್ಕಾರು ಜನ ವಾಸವಾಸಿಯರೂ ಇರುತ್ತಿದ್ದರು. ಇಷ್ಟಲ್ಲದೆ ಜುಮೋಲಿಯನ ಬಳಿಯಲ್ಲಿ ಮತ್ತಾವ ರಾಜಚಿಹ್ನೆಯೂ ಇರಲಿಲ್ಲ.

ಜುಮೋಲಿಯನು ಎಲ್ಲೆಡೆಗಳಲ್ಲಿಯೂ ಇರುವನು. ಒಂದು ದಿನ ಅವನು ರಾಜಪುತ್ರಸ್ಥಾನದ ಉತ್ತರದಲ್ಲಿರುವನು; ಮತ್ತೊಂದು ದಿನ ವಿಂಧ್ಯಪರ್ವತದ ಗಿರಿಗಹ್ವರದಲ್ಲಿ ವಾಸವಾಗಿರುವನು, ಇನ್ನೊಂದು ದಿನ ದಕ್ಷಿಣಾಪಥದಲ್ಲಿ ಸಂಚರಿಸುತ್ತಿರುವನು. ಜುಮೋಲಿಯನು ಎಂದು ಆವ ಗ್ರಾಮದಲ್ಲಿರುವನೋ ಅಂದು ಆ ಗ್ರಾಮವೇ ಅವನಿಗೆ ರಾಜಧಾನಿ; ಆ ಗ್ರಾಮದ ಪ್ರಮುಖರೇ ಅವನಿಗೆ ಮಂತ್ರಿಗಳು; ಅಲ್ಲಿಯ ಪುರನಿವಾಸಿಗಳೇ ಅವನ ಸೈನ್ಯವು.

ಜುಮೋಲಿಯನು ಆವಾಗಲೂ ಭಿಲ್ಲರ ಜತೆಯಲ್ಲಿಯೇ ಇರುತ್ತಿರ

ಲಿಲ್ಲ. ಒಂದೊಂದು ವೇಳೆ ಅವನು ಮಾಯವಾಗಿಬಿಡುತ್ತಿದ್ದನು, ಆಗ ಅವನನ್ನು ಕಂಡುಹಿಡಿಯುವುದು ಆರಿಗೂ ಸಾಧ್ಯವ ಮಾತಾಗಿರಲಿಲ್ಲ. ಒಂದೊಂದು ವೇಳೆ ಜುಮೋಲಿಯನು ಆರಿಗೆ ಆವಾಗ ಬೇಕಾಗುವನೋ ಆಗ ಅಲ್ಲಿಯೇ ಕಾಣಿಸಿಕೊಳ್ಳುವನು. ಈ ನಾಯಕನು ಎಲ್ಲರಲ್ಲಿಯೂ ಮಿಳಿತನಾಗಿದ್ದುಕೊಂಡು ಅವರ ಸ್ಥಿತಿಗತಿಗಳನ್ನು ಅರಿತುಕೊಳ್ಳುತ್ತಿದ್ದನೇ ಹೊರತು, ಇವನ ಸ್ಥಿತಿಗತಿಗಳು ಆರಿಗೂ ಗೋಚರವಾಗುತ್ತಿರಲಿಲ್ಲ.

ಜುಮೋಲಿಯನು ಭಿಲ್ಲನಲ್ಲ; ಭಿಲ್ಲರಂತೆ ಇವನ ದೇಹವು ಕಪ್ಪುಬಣ್ಣವುಳ್ಳುದಾಗಿರಲಿಲ್ಲ, ಹಾಗೂ ಭಿಲ್ಲರ ದೇಹಘಟನೆಯು ಅವನಲ್ಲಿ ಕಂಡುಬರುತ್ತಿರಲಿಲ್ಲ. ಇವನನ್ನು ರಾಜಪುತ್ರನೆಂದು ಹೇಳೋಣವೇ? ಇವನು ರಾಜಪುತ್ರರ ಜಾತಿಗೆ ಸೇರಿದವನಾಗಿರಲಿಲ್ಲ. ಬಲು ಮಾತಿನಿಂದೇನು? ಇವನು ಆವ ದೇಶದಲ್ಲಿ ಮಹಾ ಪರಾಕ್ರಮಶಾಲಿಯೆಂದು ಪ್ರಸಿದ್ಧಿ ಪಡೆದಿದ್ದನೋ, ಆ ದೇಶಕ್ಕೆ ಸಂಬಂಧಪಟ್ಟವನೇ ಆಗಿರಲಿಲ್ಲ. ಆ ಬಾಲಕನು ಹದಿಮೂರು ವರ್ಷದ ವಯಸ್ಸುಳ್ಳವನಾಗಿದ್ದರೂ, ಅವನ ದೇಹವು ದೃಷ್ಟವೂ ಪುಷ್ಟವೂ ಆಗಿದ್ದಿತು. ಆ ಹುಡುಗನು ತನ್ನ ಸಣ್ಣ ವಯಸ್ಸಿನಲ್ಲಿಯೇ ಕತ್ತಿಯನ್ನು ತಿರುಗಿಸುವುದರಲ್ಲಿಯೂ ಬಾಣವನ್ನು ಬಿಡುವುದರಲ್ಲಿಯೂ ಅದ್ವಿತೀಯನೆನಿಸಿಕೊಂಡಿದ್ದನು. ಯುದ್ಧ ವಿದ್ಯೆಯಲ್ಲಿ ಈತನಿಗಿದ್ದ ಚಾತುರ್ಯವನ್ನು ನೋಡಿ ಎಲ್ಲರೂ ಮೂಗಿನ ಮೇಲೆ ಬೆಟ್ಟನ್ನಿಟ್ಟು ಆಶ್ಚರ್ಯಪಡುತ್ತಿದ್ದರು. ಅವನ ಸಾಹಸವು ಅಸಾಧಾರಣವಾದುದು; ಅವನಲ್ಲಿದ್ದ ಶೌರ್ಯ ವೀರ್ಯ ಧೈರ್ಯಗಳಿಗೆ ಸಾಟಿಯೇ ಇರಲಿಲ್ಲ.

ಜುಮೋಲಿಯನು ಅತಿಸುಂದರನು. ಆತನ ಸೌಂದರ್ಯದಲ್ಲಿ ಲಾಲಿತ್ಯವೂ, ಮಾಧುರ್ಯವೂ, ಲಾವಣ್ಯವೂ ತುಂಬಿ ತುಳುಕಾಡುತ್ತಿದ್ದುವು. ಈ ಹುಡುಗನ ರೂಪದಲ್ಲಿ ಸ್ತ್ರೀಪುರುಷರಾದಿಯಾಗಿ ಎಲ್ಲರೂ ಮುಗ್ಧರಾಗಿಬಿಡುತ್ತಿದ್ದರು. ಕಾರಣವೇನೆಂದರೆ—ಇಂತಹ ಮೋಹನರೂಪವು ಮೂರು ಲೋಕದಲ್ಲಿಯೂ ದುರ್ಲಭವಾಗಿದ್ದಿತು.

ರೂಪಕ್ಕೆ ಅನುರೂಪವಾಗಿ ಜುಮೋಲಿಯನ ವೇಷವೂ ಅತಿ ಮನೋಹರವಾಗಿ ಕಂಗೊಳಿಸುತ್ತಿದ್ದಿತು. ಆತನು ಆಜಾನುಲಂಬಿತವಾದ ಕೃಷ್ಣ

ಕೇಶರಾಶಿಯನ್ನು ವೇಣೀಬದ್ಧವನ್ನಾಗಿ ಮಾಡಿ ತಲೆಯ ಮೇಲೆ ಕಟ್ಟಿಕೊಂಡಿರುತ್ತಿದ್ದನು; ಅದರ ಸುತ್ತಲೂ ಸುವರ್ಣಾಭರಣವು ಆ ಕೇಶರಾಶಿಯ ಸೌಂದರ್ಯವನ್ನು ಇಮ್ಮಡಿಸುತ್ತಿದ್ದಿತು. ಆ ಮುಡಿಯ ಮೇಲೆ ಮಯೂರ ಪಿಂಛಿಕೆಯು ಡೋಲಾಯಮಾನವಾಗಿ ವಿರಾಜಿಸುತ್ತಿದ್ದಿತು. ಬಾಲಗೋಪಾಲನ ಮೂರ್ತಿಯನ್ನು ಜ್ಞಾಪಿಸಿಕೊಂಡರೆ, ಜುಮೇಲಿಯನ ವೇಷವು ಸಂಪೂರ್ಣರೂಪದಿಂದ ವರ್ಣಿಸಲ್ಪಟ್ಟಂತಾಗುವುದು.

ಜುಮೇಲಿಯನು ಪೀತಾಂಬರಧಾರಿ. ಅವನ ಬೆನ್ನ ಮೇಲೆ ಅದೊಂದು ಸುಂದರವಾದ ಕೃಷ್ಣಾಜಿನವು ಆವಾಗಲೂ ಲಂಬಮಾನವಾಗಿರುವುದು. ಆತನ ಹೆಗಲಲ್ಲಿ ಧನುವೂ, ಬೆನ್ನ ಮೇಲೆ ಬತ್ತಳಿಕೆಯೂ, ಕಯ್ಯಲ್ಲಿ ಬಾಣವೂ ಸಿದ್ಧವಾಗಿರುತ್ತಿದ್ದುವು. ಆತನ ಸೊಂಟದಲ್ಲಿ ಒಂದು ಹರಿತವಾದ ಛುರಿಕೆಯೂ, ಉದ್ದವಾದ ಕತ್ತಿಯೂ ಆಶ್ರಯವನ್ನು ಪಡೆದುಕೊಂಡಿರುತ್ತಿದ್ದುವು.

ಆತನ ಕಯ್ಯಲ್ಲಿ ಸುಂದರವಾದ ಕೊಳಲೂ, ಕತ್ತಿನಲ್ಲಿ ಸ್ಫಟಿಕಾಕ್ಷಮಾಲೆಯೂ ಕಂಗೊಳಿಸುತ್ತಿದ್ದುವು. ಒಂದೊಂದು ವೇಳೆಗಳಲ್ಲಿ ಆತನ ಹಣೆಯಲ್ಲಿ ಕುಂಕುಮರೇಖೆಯೂ, ಕಂಠದಲ್ಲಿ ಜಪಾಕುಸುಮ ಮಾಲೆಯೂ ಶೋಭಿಸುತ್ತಿರುವುವು.

ಇಂತಹ ವಿಲಕ್ಷಣಾಕಾರದಿಂದ ವಿರಾಜಮಾನನಾದ ಜುಮೇಲಿಯನು ಒಂದು ದಿನವಾದರೂ ಬಂಡಿಯಲ್ಲಿ ಕುಳಿತವನಲ್ಲ, ಕುದುರೆಯೇರಿ ಸಂಚರಿಸಿದವನಲ್ಲ. ಆರು ಆವಾಗ ಈತನನ್ನು ಬಯಸಿದರೂ ಅವರ ಮಧ್ಯದಲ್ಲಿ ಸಿದ್ಧನಾಗಿರುವನು. ಆಗಿಂದಾಗ ಎಲ್ಲರಿಗೂ ದರ್ಶನ ಕೊಡುತ್ತಲೇ ಇರುವನು. ಇವನ್ನು ನೋಡಿ ಭಿಲ್ಲರೆಲ್ಲರೂ, ಜುಮೇಲಿಯನನ್ನು ಪ್ರತ್ಯಕ್ಷದ ದೇವತೆಯೆಂದೇ ಭಾವಿಸಿ ಪೂಜಿಸುತ್ತಿದ್ದರು.

---

## ಹದಿಮೂರನೆಯ ವಿಲಾಸ

ಜುಮೇಲಿಯಾ ಎಂಬುವನಾರು!. ಜುಮೇಲಿಯನು ಪರಮಾನಂದ ಸ್ವಾಮಿಯ ಶಿಷ್ಯನು. ಪರಮಾನಂದನ ಶಿಷ್ಯನಲ್ಲದಿದ್ದರೆ, ಭಿಲ್ಲ ಜಾತಿ

ಯವರಿಗೆ ನಾಯಕನಾಗುವ ಶಕ್ತಿಯು ಹೇಗೆ ಎಲ್ಲಿಂದ ಬರಬೇಕು? ಜುಮೋಲಿಯನು ಬಹುಕಾಲದಿಂದಲೂ ಗುರುವಾದ ಪರಮಾನಂದ ಸ್ವಾಮಿಯನ್ನು ಭಕ್ತಿಯಿಂದ ಸೇವಿಸುತ್ತಾ ಶಿಷ್ಯನಾಗಿದ್ದುಕೊಂಡಿದ್ದನು.

ಪರಮಾನಂದ ಸ್ವಾಮಿಯು ಸರ್ವಪ್ರಯತ್ನದಿಂದಲೂ ತನ್ನ ಶಿಷ್ಯನಾದ ಜುಮೋಲಿಯನಿಗೆ ನಾನಾ ವಿದ್ಯೆಗಳನ್ನು ಕಲಿಸಿದನು. ಜುಮೋಲಿಯನು ಬಾಲ್ಯದಲ್ಲಿಯೇ ಸಂಸ್ಕೃತದಲ್ಲಿ ಸಾಹಿತ್ಯ ಶಾಸ್ತ್ರವನ್ನೂ, ವ್ಯಾಕರಣವನ್ನೂ, ತರ್ಕವನ್ನೂ ಚೆನ್ನಾಗಿ ಅಭ್ಯಾಸಮಾಡಿದುದಲ್ಲದೆ, ಧರ್ಮಶಾಸ್ತ್ರ ವೈದ್ಯಶಾಸ್ತ್ರ ಜ್ಯೋತಿಶ್ಶಾಸ್ತ್ರಗಳಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದನು.

ಅಲ್ಲದೆ, ಜುಮೋಲಿಯನು ಬ್ರಹ್ಮಾನಂದವಾಗುವಂತೆ ವೀಣೆಯನ್ನು ಬಾರಿಸುವನು, ಕೊಳಲನ್ನೂದುವನು, ಮೃದುಮಧುರವಾದ ಧ್ವನಿಯಿಂದ ಹಾಡುವನು. ಸಂಗೀತ ಶಾಸ್ತ್ರದಲ್ಲಿಯೂ ಅವನಿಗೆ ಸಂಪೂರ್ಣವಾದ ಪರಿಚಯವಿದ್ದಿತು. ಸರ್ವಜನ ವಶೀಕಾರ ವಿದ್ಯೆಯೆನಿಸಿದ ವೇಣುಗಾನದಲ್ಲಿ ಜುಮೋಲಿಯನಿಗೆ ತುಂಬಾ ಆಸಕ್ತಿಯಿದ್ದಿತು. ಆತನು ಆಗಿಂದಾಗ ವೇಣುವನ್ನು ಊದುವನು. ಆಗ ಪಶು ಪಕ್ಷಿ ಮೃಗಾದಿಗಳೆಲ್ಲವೂ ಆತನ ಬಳಿಗೆ ಓಡಿಬಂದು ಗಾನದಲ್ಲಿ ಪರವಶವಾಗಿ ಕೇಳುತ್ತಾ ನಿಂತುಬಿಡುವುವು. ಇಂತಿರುವಲ್ಲಿ ಭಿಲ್ಲರ ಪಾಡೇನು?

ಅಲ್ಲದೆಯೂ, ಜುಮೋಲಿಯನು ಶಾಸ್ತ್ರೋಕ್ತವಾದ ಅಂಗಸಾಧನೆಯಿಂದ ದೇಹದಲ್ಲಿ ಯೋಗ್ಯತೆಗೆ ಮೀರಿದ ಶಕ್ತಿಯನ್ನೂ ದೃಢಾರೋಗ್ಯವನ್ನೂ ಪಡೆದುಕೊಂಡಿದ್ದನು. ಯುದ್ಧ ವಿದ್ಯೆಯಲ್ಲಿಯೂ ಶಸ್ತ್ರಾಸ್ತ್ರಚಾಲನದಲ್ಲಿಯೂ ಜುಮೋಲಿಯನಿಗೆ ಸಮರೇ ಇರಲಿಲ್ಲ. ಪರಮಾನಂದ ಸ್ವಾಮಿಯು ಜುಮೋಲಿಯನಿಗೆ ವಿದ್ಯೆಗಳನ್ನು ಕಲಿಸಿದ ಹಾಗೆ, ದ್ರೋಣಾಚಾರ್ಯರು ಕೂಡ ತಮ್ಮ ಶಿಷ್ಯರಿಗೆ ವಿದ್ಯೆಯನ್ನು ಕಲಿಸಿರಲಿಕ್ಕಿಲ್ಲವೆಂದು ಹೇಳಿದರೂ ಹೇಳಬಹುದು.

ಪರಮಾನಂದ ಸ್ವಾಮಿಯು ಸನ್ಯಾಸಿಯು. ಸನ್ಯಾಸಿಗೆ ಈ ಶಿಷ್ಯನು ದೊರೆತುದು ಹೇಗೆಂದು ನಮ್ಮ ಪ್ರಿಯವಾಠಕ ಮಹಾಶಯರು

ಕೇಳಿದರೂ ಕೇಳಬಹುದು. ಅವರ ಮನೋವಿನೋದನಕ್ಕಾಗಿ ಇದರ ಪೂರ್ವ ವೃತ್ತಾಂತವನ್ನು ಸ್ಥೂಲವಾಗಿ ಉಲ್ಲೇಖಿಸುವೆವು.

ಅನೇಕ ವರ್ಷಗಳ ಹಿಂದೆ ಪರಮಾನಂದ ಸ್ವಾಮಿಯು ತೀರ್ಥ ಯಾತ್ರೆಗಾಗಿ ತೆರಳಿದ್ದನು. ಆಗ ಬ್ರಹ್ಮಾಣೀ ನದಿಯ ತೀರದಲ್ಲಿ ಶೋಚ ನೀಯವಾದ ದೃಶ್ಯವೊಂದು ಆತನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿದ ಕೂಡಲೆ ಸನ್ಯಾಸಿಯ ಮನವು ಚಲಿಸಿತು. ಸಂಸಾರ ಬಂಧವು ಯೋಗಿಗೇ ಆಗಲಿ ವಿಯೋಗಿಗೇ ಆಗಲಿ ಆರಿಗೂ ತಪ್ಪಿದುದಲ್ಲ.

ಆ ಬ್ರಹ್ಮಾಣೀ ತೀರದಲ್ಲಿ ತೀರ್ಥಯಾತ್ರೆಗಾಗಿ ಬಂದಿದ್ದ ಆರೋ ದಂಪತಿಗಳು ಕಾಲವಶದಿಂದ ಏಕಕಾಲದಲ್ಲಿ ಅಕಾಲಮೃತ್ಯುವಿಗೆ ತುತ್ತಾಗಿ ಬಿದ್ದುಹೋಗಿದ್ದರು. ಗಂಡನು ಸತ್ತುದಕ್ಕಾಗಿ ಹೆಂಡತಿಯು ಅಳಬೇಕಾ ಗಿರಲಿಲ್ಲ. ಹೆಂಡತಿಯು ಕೈಬಿಟ್ಟು ಹೋದಳೆಂದು ಗಂಡನು ಕೊರಗಿ ಕೊರಗಿ ಸಾಯಬೇಕಾಗಿರಲಿಲ್ಲ. ಅವರಿಬ್ಬರೂ ಏಕಕಾಲದಲ್ಲಿಯೇ ಮಡಿ ದುದರಿಂದ, ಅವರಿಗಾಗಿ ಅಳುವವರಾರೂ ಇರಲಿಲ್ಲ. ಈ ದೃಶ್ಯವು ಲೋಕಸಾಮಾನ್ಯವಾದುದರಿಂದ, ಪರಮಾನಂದ ಸ್ವಾಮಿಯು ಇದರಲ್ಲಿ ಅಷ್ಟಾಗಿ ಗಮನವಿಡಲಿಲ್ಲ.

ಆದರೆ ಅಂಬೆಗಾಲಿಡತಕ್ಕ ಒಂದು ಮಗು ಮಟ್ಟೆಗೆ ಬಿಸಿಲಿನ ಬೇಗೆ ಯಿಂದಲೂ ಹಸಿವೆಯಿಂದಲೂ ಬತ್ತಿ ಬಳಲಿ ಅಳುತ್ತಾ ಒಂದು ಸಲ ತಾಯಿಯ ಬಳಿಗೆ ಬಂದು ಸೀರೆಯನ್ನು ಹಿಡಿದೆಳೆಯುವುದು. ಅಲ್ಲಿ ಆವ ಉತ್ತರವೂ ಬಾರದಿರಲು, ಅಲ್ಲಿಂದ ತಂದೆಯ ಬಳಿಗೆ ಬಂದು ಪಂಚೆ ಯನ್ನು ಹಿಡಿದು ಎಳೆದಾಡುವುದು. ಇಲ್ಲಿಯೂ ಆವ ಪ್ರಯೋಜನವೂ ಆಗದಿರುವುದನ್ನು ಕಂಡು ಆ ಮಗುವು ಕಿಟ್ಟೆಂದು ಅರಚುವುದು. ಅರಚಿ ಯರಚಿ ಬೇಸತ್ತ ಬಳಿಕ, ಆ ಮಗುವು ಮತ್ತೆ ತಾಯಿಯ ಬಳಿಗೆ ಬಂದು ಕಂಬನಿಗರೆಯುತ್ತಾ ಕರುಣಾಕ್ರಂದವನ್ನು ಮಾಡುವುದು. ತಾಯಿತಂದೆ ಗಳಲ್ಲಿ ಆರೂ ಮಾತನಾಡಿಸದೇ ಇದ್ದುದರಿಂದ, ಆ ಮಗುವು ನೆಲದ ಮೇಲೆ ಬಿದ್ದು ಬಿದ್ದು ಹೊರಳಾಡುವುದು, ಮತ್ತೆ ಏಳುವುದು, ಮತ್ತೆ ಬೀಳು ವುದು, ಮತ್ತೆ ಮತ್ತೆ ಬಿಕ್ಕಿ ಬಿಕ್ಕಿ ಅಳುವುದು.

ಸನ್ಯಾಸಿಯು ಇದನ್ನು ನೋಡಿದನು. ಅವನ ಮನವು ಚಲಿಸಿದ ಕೂಡಲೆ, ಕಣ್ಣುಗಳಿಂದ ಒಂದೆರಡು ತೊಟ್ಟು ನೀರುದುರಿತು. ಬಳಿಕ ಸನ್ಯಾಸಿಯು ಕಣ್ಣೀರನ್ನು ತೊಡೆದುಕೊಂಡು ಚಿಂತಿಸಿದನು :—

"ಮಾಯೆ! ಸಂಸಾರ ಮಾಯೆ! ನಿನ್ನ ಮಾಯಾ ಶಕ್ತಿಯನ್ನು ಬಲ್ಲವರಾರು ತಾಯೆ? ನಾನು ಸನ್ಯಾಸ ಧರ್ಮವನ್ನು ಅವಲಂಬಿಸಿ ಇಂದಿಗೆ ಹನ್ನೆರಡು ವರ್ಷಗಳಾಗುತ್ತಾ ಬಂದರೂ ನನಗಿನ್ನೂ ವೈರಾಗ್ಯ ವುಂಟಾಗಲಿಲ್ಲವಲ್ಲಾ! ನನ್ನ ಪ್ರಯತ್ನದ ಬಲವು ಎಷ್ಟು ತೀವ್ರವಾಗಿದ್ದರೂ, ನನ್ನ ಹೃದಯವು ಇನ್ನೂ ಅತಿ ದುರ್ಬಲವಾಗಿರುವುದನ್ನು ನೋಡಿದರೆ, ವೈರಾಗ್ಯವು ನನ್ನ ಪಾಲಿಗೆ ಬಂದುದಲ್ಲವೆಂದು ತೋರುತ್ತಿರುವುದು. ನನ್ನ ಈ ಜನ್ಮದಲ್ಲಿ ಆ ಯೋಗವು ಇದೆಯೋ ಇಲ್ಲವೋ ಭಗವಂತನೇ ಬಲ್ಲನು!

ಸಂಸಾರವೆಂಬುದು ಎಂತಹ ಮಾಯಾ ಜಾಲ ಜಟಿಲವಾದುದು! ಈ ಮಗುವನ್ನು ನೋಡಿದ ಕೂಡಲೆ ನನ್ನ ಮನವು ಮರುಗುವುದಲ್ಲಾ! ಈ ಮೃತ್ಪಿಂಡದಲ್ಲಿ ನನಗೆ ವ್ಯರ್ಥವಾದ ಅಭಿಮಾನವೇಕೆ? ಜನನ ಮರಣಗಳು ಪ್ರಾಣಿಮಾತ್ರದ ಸಹಜವಾದ ಆದ್ಯಂತಾವಸ್ಥೆಗಳು. ಇದಕ್ಕಾಗಿ ಚಿಂತಿಸಿ ಫಲವೇನು? ಈ ಮಗುವಿನ ತಂದೆ ತಾಯಿಗಳು ಸತ್ತಿರುವರು. ಇದಕ್ಕಾಗಿ ನನ್ನ ಮನವು ವ್ಯಸನ ಪಡುತ್ತಿಲ್ಲ. ಬದುಕಿರುವ ಈ ಮಗುವಿನ ವಿಷಯದಲ್ಲಿ ನನ್ನ ಮನವು ಇಷ್ಟು ಕನಿಕರ ಪಡಲು ಕಾರಣವೇನಿರಬಹುದು? ಇದೆಲ್ಲವೂ ಪೂರ್ವಜನ್ಮದ ವಾಸನಾ ಬಲವೇ ಹೊಗತು ಮತ್ತು ಬೇರೆಯಲ್ಲ."

ಸನ್ಯಾಸಿಯು ಹೀಗೆ ಚಿಂತಿಸುತ್ತಾ ನಿಂತಿರುವಲ್ಲಿ, ಆ ಮಗುವು ಹತ್ತಿರದಲ್ಲಿ ನಿಂತು ನೋಡುತ್ತಿದ್ದ ಸನ್ಯಾಸಿಯನ್ನು ನೋಡಿ ಅವನ ಬಳಿಗೆ ಬಂದು ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಿತು. ಇದನ್ನು ಕಂಡ ಕೂಡಲೆ ಸನ್ಯಾಸಿಗೆ ತೊಂದರೆಗಿಟ್ಟಿತು. ಸನ್ಯಾಸಿಯು ಮಗುವನ್ನು ಬಿಟ್ಟು ಹೋಗಬೇಕೇ, ಇಲ್ಲವೆ ಅದನ್ನು ಎತ್ತಿಕೊಂಡು ಹೋಗಿ ಕಾಪಿಡಬೇಕೆ? ಬಿಟ್ಟು ಹೋದರೆ ದುಷ್ಟ ಪ್ರಾಣಿಗಳು ಆ ಮಗುವನ್ನು ನುಂಗಿಬಿಡುವುವು; ಬಿಡದೇ ಹೋದರೆ,

ಮತ್ತೆ ಸಂಸಾರವು ಗಂಟು ಬೀಳುವುದು. ಭೂತದಯಾ ಪಶ್ಚಾತ್ತಾಪ ವಿರುವ ಸನ್ಯಾಸಿಯು ತಿಳಿ ತಿಳಿದೂ ಮಗುವನ್ನು ಬಿಟ್ಟು ಹೋಗುವುದು ಮಹಾಪಾಪಕರವೆಂದು ಸಿದ್ಧಾಂತಮಾಡಿಕೊಂಡವನಾಗಿ ಆ ಮಗು ವನ್ನು ಎತ್ತಿಕೊಂಡು ಹೋಗಿ ಆರಿಗಾದರೂ ಕೊಟ್ಟುಬಿಡೋಣವೆಂದು ಹೇಳಿಕೊಂಡು ಅದನ್ನು ಎತ್ತಿಕೊಂಡು ಹೊರಟನು. ಬಳಿಕ ಆ ಮಗುವು ಅಳುವನ್ನು ನಿಲ್ಲಿಸಿ ಹಾಗೆಯೇ ನಿದ್ರಿಸಿಬಿಟ್ಟಿತು.

---

## ಹದಿನಾಲ್ಕನೆಯ ವಿಲಾಸ

ಮಗುವಿನ ಮುಖವನ್ನು ನೋಡುವುದರಿಂದ ಅಭಿಮಾನವುಂಟಾಗು ವುದೆಂದು ತಿಳಿದು, ಸನ್ಯಾಸಿಯು ಅದರ ಕಡೆ ಕೊಂಚವೂ ಗಮನಿಸದೆಯೇ ಮುಂದೆ ಮುಂದೆ ತೆರಳಿದನು. ಸಮೀಪದಲ್ಲಿಯೇ ಅದೊಂದು ಗ್ರಾಮವು ಗೋಚರಿಸಲು, ಸನ್ಯಾಸಿಯು ಆ ಅನಾಥ ಶಿಶುವನ್ನು ಆರಲ್ಲಾದರೂ ಬಿಟ್ಟು ಹೋಗಬೇಕೆಂದು ಎಣಿಸಿ, ಆ ಮಗುವನ್ನು ಕೆಳಗಿಳಿಸಿದಾಗ ಆತ ನಿಗೆ ಸಂಪೂರ್ಣವಾಗಿ ಅದರ ಮುಖದರ್ಶನವಾಯಿತು. ಸನ್ಯಾಸಿಯು ಮಗುವಿನ ಮುಖವನ್ನು ನೋಡಿದ ಕೂಡಲೆ ಬೆರಗಾಗಿ ಅದರ ಲಕ್ಷಣ ಗಳನ್ನು ಪರೀಕ್ಷಿಸುವುದಕ್ಕೆ ತೊಡಗಿದನು. ಆಗ ಆತನಿಗೆ ಹೊಳೆದ ದೇ ನೆಂದರೆ:—

“ಸರ್ವಾಂಗ ಸುಂದರವಾದ ಈ ಮಗುವಿನಲ್ಲಿ ಸಮಸ್ತ ರಾಜ ಲಕ್ಷಣಗಳಿರುವುವು. ಆದುದರಿಂದಲೇ ಈ ಮಗುವಿಗೆ ನನ್ನಿಂದ ಪ್ರಾಣ ರಕ್ಷಣೆಯಾಗಬೇಕಾದ ಯೋಗವು ಒದಗಿ ಬಂದುದು. ಹೇಗಾದರೂ ಆಗಲಿ, ನಾನು ಈ ಮಗುವನ್ನು ಸಾಮಾನ್ಯರ ಕೈಗೆ ಕೊಡುವುದಕ್ಕೆ ಇಷ್ಟವುಳ್ಳವನಾಗಲಾರೆನು. ಆರಾದರೂ ರಾಜರು ಈ ಮಗುವನ್ನು ಸಾಕಿ ಕೊಂಡು ಅವರನಂತರದಲ್ಲಿ ಸಿಂಹಾಸನಾಧಿಪತ್ಯವನ್ನು ಈ ಮಗುವಿಗೇ ಸಲ್ಲಿಸುವುದಾಗಿ ವಾಗ್ದಾನಮಾಡುವುದಾದರೆ, ಅಂಥವರ ಕೈಯಲ್ಲಿ ಈ ಶಿಶುವನ್ನು ಅರ್ಪಿಸಿಬಿಡುವೆನು. ಬಳಿಕ ನನ್ನ ಕರ್ತವ್ಯವು ಸಾಂಗವಾಗಿ ನೆರವೇರಿದಂತಾಗುವುದು.”

ಪರಮಾನಂದ ಸ್ವಾಮಿಯು ಈ ರೀತಿಯಾಗಿ ಆಲೋಚಿಸಿ ಭರತ ಖಂಡದ ಒಬ್ಬೊಬ್ಬರಾಜನ ಬಳಿಗೂ ಹೋಗಿ ತನ್ನ ಅಭಿಪ್ರಾಯವನ್ನು ತಿಳಿಯಪಡಿಸಿದನು. ಆರೂ ಸನ್ಯಾಸಿಯ ಅಭಿಪ್ರಾಯಕ್ಕೆ ಸರಿಯಾದ ಉತ್ತರವನ್ನು ಕೊಡದಿರಲು, ಸನ್ಯಾಸಿಯು ಕಟ್ಟಕಡೆಗೆ ಆ ಮಗುವನ್ನು ತಾನೇ ರಕ್ಷಿಸುವುದಾಗಿಯೂ ರಾಜ್ಯೇಶ್ವರನಾಗುವುದಕ್ಕೆ ಬೇಕುಬೇಕಾದ ವಿದ್ಯೆಗಳನ್ನು ಕಲಿಸುವುದಾಗಿಯೂ ಸಂಕಲ್ಪ ಮಾಡಿಕೊಂಡನು. ಅಂದು ಮೊದಲು ಆ ಮಗುವು ಪರಮಾನಂದ ಸ್ವಾಮಿಯ ಪ್ರಿಯ ಶಿಷ್ಯನಾದನು. ಸನ್ಯಾಸಿಯು ಆ ಮಗುವನ್ನು ತನ್ನ ಮಗನಿಗಿಂತಲೂ ಅತಿಶಯವಾಗಿ ಕಾಪಿಟ್ಟುಕೊಂಡು ಬರುತ್ತಿದ್ದುದರಿಂದ, ಎಲ್ಲರೂ ಆ ಮಗುವನ್ನು ಸನ್ಯಾಸಿಯ ಮಗನೆಂದೇ ಭಾವಿಸುತ್ತಿದ್ದರು.

ಭಿಲ್ಲರೆಲ್ಲರನ್ನೂ ಒಟ್ಟುಗೂಡಿಸುವ ಕಾರ್ಯಭಾರವನ್ನು ವಹಿಸಿದ್ದ ಪರಮಾನಂದನು ಈ ಶಿಷ್ಯನನ್ನು ಭಿಲ್ಲರಾಜನನ್ನಾಗಿ ಮಾಡಬೇಕೆಂದು ಮೊದಲಿನಿಂದಲೂ ಆಲೋಚಿಸಿಕೊಂಡಿದ್ದನು. ಈಯಭಿಪ್ರಾಯಕ್ಕನು ಸಾರವಾಗಿಯೇ ಆ ಮಗುವಿಗೆ ರಾಜಯೋಗ್ಯವಾದ ವಿದ್ಯೆಗಳನ್ನು ಕಲಿಸುವುದಕ್ಕೆ ತೊಡಗಿದನು. ಅಂದು ಮೊದಲು ಪರಮಾನಂದನು ಎಲ್ಲಿಗೆ ಹೋದರೂ ಆ ಶಿಷ್ಯನನ್ನು ಜತೆಯಲ್ಲಿಯೇ ಕರೆದುಕೊಂಡು ಹೋಗಲಾರಂಭಿಸಿದನು. ಅಲ್ಲದೆಯೂ ತನ್ನ ದೂರಾಲೋಚನೆಗೆ ಅನುಸಾರವಾಗಿ ಆ ಮಗುವಿಗೆ ಭಿಲ್ಲ ಜಾತಿಗೆ ತಕ್ಕ ಜುಮೇಲಿಯಾ ಎಂಬ ನಾಮಕರಣವನ್ನು ಮಾಡಿದನು. ಹಾಗೂ ಆ ಹೆಸರಿಗೆ ತಕ್ಕಹಾಗೆ ಜುಮೇಲಿಯನಿಗೆ ಭಿಲ್ಲವೇಷವನ್ನೂ ಏರ್ಪಡಿಸಿದನು. ಭಿಲ್ಲರೆಲ್ಲರೂ ಆ ಮಗುವನ್ನು ನೋಡಿ ತಮ್ಮ ಗುರು ಮಹಾಶಯರ ಶಿಷ್ಯನೆಂದು ಜುಮೇಲಿಯನನ್ನು ತೆರತೆರನಾಗಿ ಆದರಿಸಲಾರಂಭಿಸಿದರು. ಕ್ರಮಕ್ರಮವಾಗಿ ಆ ಆದರವು ಪರಮಪ್ರೀತಿಯಲ್ಲಿ ಪರಿಣಮಿಸಿತು. ಕಾರಣವೇನೆಂದರೆ—ಆ ಮಗುವಿನ ಸೌಂದರ್ಯವೂ, ಚಾಕಚಕ್ಯವೂ, ನಡೆನುಡಿಗಳೂ, ವಿದ್ಯಾಬುದ್ಧಿಗಳೂ, ಆಕಾರ ಪ್ರಕಾರಗಳೂ, ವೇಷಭೂಷೆಗಳೂ ಭಿಲ್ಲರೆಲ್ಲರನ್ನೂ ಮುಗ್ಧರನ್ನಾಗಿ ಮಾಡಿಬಿಟ್ಟದ್ದುವು.

ಜುಮೇಲಿಯನ ಸುಮಧುರವಾದ ವೀಣಾ ಧ್ವನಿಯೂ, ಸುಲಲಿತವಾದ ವೇಣುನಾದವೂ, ಆತನ ಅಪೂರ್ವವಾದ ದಿವ್ಯ ಗಾನವೂ, ಆತನ ಜ್ಞಾನವೂ, ಆತನ ಬುದ್ಧಿಯೂ, ಆತನ ಪಾಂಡಿತ್ಯವೂ, ಆತನ ಅಸೀಮವಾದ ಶಕ್ತಿಯೂ, ಅಸಮವಾದ ಸಾಹಸವೂ, ಅದ್ಭುತವಾದ ಯುದ್ಧ ಕೌಶಲವೂ, ಇವೆಲ್ಲವೂ ಒಂದೆಡೆಯಲ್ಲಿರುವುದಾದರೆ ಆರ ಮನಸ್ಸು ತಾನೇ ವಶವಾಗದೇ ಇರದು? ಭಿಲ್ಲರಾದರೋ ಜುಮೇಲಿಯನ ಅನನ್ಯ ಸಾಧಾರಣವಾದ ಗುಣಗಳನ್ನು ನೋಡಿ ತಾವಾಗಿಯೇ ಆ ಹುಡುಗನಿಗೆ ಅಕ್ರೀತ ದಾಸರಾಗಿ ಹೇಳಿದ ಕೆಲಸಗಳನ್ನು ಭಯಭಕ್ತಿಗಳಿಂದ ನೆರವೇರಿಸಿಕೊಂಡು ಬರುತ್ತಿದ್ದರು.

ಇದರ ಫಲಿತಾಂಶವೇನೆಂದರೆ—ಭಿಲ್ಲಜಾತಿಯವರೆಲ್ಲರೂ ಜುಮೇಲಿಯವನಿಗೆ ಹದಿಮೂರು ವರ್ಷ ವಯಸ್ಸಾಗುವುದರೊಳಗಾಗಿ ಆ ಹುಡುಗನನ್ನು ನವನಾಯಕನನ್ನಾಗಿ ಒಪ್ಪಿಕೊಂಡುಬಿಟ್ಟರು. ಬಳಿಕ ಪರಮಾನಂದ ಸ್ವಾಮಿಯು ಜುಮೇಲಿಯನನ್ನು ಭಿಲ್ಲರಾಜ್ಯಕ್ಕೆ ಅಧಿರಾಜನನ್ನಾಗಿ ಏರ್ಪಡಿಸಿ ತಾನು ಲೌಕಿಕ ಕಾರ್ಯಗಳನ್ನು ತ್ಯಾಗಮಾಡಿ ಭಗವಂತನ ಆರಾಧನೆಯಲ್ಲಿ ಮಗ್ನನಾಗಿಬಿಟ್ಟನು.

ಜುಮೇಲಿಯನು ಭಿಲ್ಲ ರಾಜನೆನಿಸಿದ ಬಳಿಕ ತನ್ನ ಕೆಲಸಗಳನ್ನು ಮತ್ತಾರ ಸಾಹಾಯ್ಯವೂ ಇಲ್ಲದೆ ನೆರವೇರಿಸುತ್ತಲೂ, ಆಗಿಂದಾಗ ಭಿಲ್ಲರಿಗೆ ಸದುಪದೇಶಗಳನ್ನು ಮಾಡುತ್ತಲೂ ಪಶ್ಚಿಮ ಘಟ್ಟಗಳಲ್ಲಿ ಸಂಚರಿಸಲಾರಂಭಿಸಿದನು. ಜುಮೇಲಿಯನು ವೇಣುವನ್ನು ಊದಿದನೆಂದರೆ, ಭಿಲ್ಲರೆಲ್ಲರೂ ತಮ್ಮ ತಮ್ಮ ಕೆಲಸಗಳೇನಿದ್ದರೂ ಅವೆಲ್ಲವನ್ನೂ ಬಿಟ್ಟು ನಿರ್ದಿಷ್ಟವಾದ ಸ್ಥಾನಕ್ಕೆ ಬಂದುಬಿಡುತ್ತಿದ್ದರು. ಗುರುಕಾರ್ಯವಿಲ್ಲದಿದ್ದರೆ ಜುಮೇಲಿಯನು ಕೊಳಲನ್ನು ಊದುತ್ತಿರಲಿಲ್ಲ. ಎಲ್ಲೆಲ್ಲಿಯೂ ಕೊಳಲಿನ ಧ್ವನಿಯು ಕೇಳಿದೊಡನೆಯೇ ಭಿಲ್ಲರೆಲ್ಲರೂ ಏನೋ ವಿಶೇಷವಾದ ಕೆಲಸವಿರಬೇಕೆಂದು ತಿಳಿದು ಒಟ್ಟುಗೂಡಿ ಬಂದು ಜುಮೇಲಿಯನನ್ನು ಕಂಡುಕೊಂಡು ತಿಳಿಯಬೇಕಾದುದನ್ನು ತಿಳಿದೂ ಮಾನವೀಕ್ಷಣನನ್ನು ಮಾಡಿಯೂ ತಮ್ಮ ತಮ್ಮ ಕೆಲಸಗಳ ಮೇಲೆ ಮತ್ತೆ ಹೊರಟು ಹೋಗುತ್ತಿದ್ದರು.

---

## ಹದಿನೈದನೆಯ ವಿಲಾಸ

ಅಹಮ್ಮದಾಬಾದಿನ ದಕ್ಷಿಣ ದಿಕ್ಕಿನಲ್ಲಿ ವಿಶಾಲವಾದ ಅರಣ್ಯವೊಂದಿರುವುದು. ಆ ಅರಣ್ಯದ ಮಧ್ಯದಲ್ಲಿ ಬಹು ಪುರಾತನವಾದ ದೇವತಾ ಮಂದಿರವೊಂದಿರುವುದು. ದೂರದಿಂದ ನೋಡತಕ್ಕವರಿಗೆ ಅದೊಂದು ಸಾಮಾನ್ಯವಾದ ಮನೆಯೆಂದೇ ಬೋಧವಾಗುತ್ತಿದ್ದಿತು. ಒಳಹೊಕ್ಕು ನೋಡುವವರಿಗೆ ಅದೊಂದು ದೇವತಾ ಮಂದಿರವೇ ಹೊರತು ಸಾಮಾನ್ಯ ಮಂದಿರವಾಗಿ ಕಾಣಿಸುತ್ತಿರಲಿಲ್ಲ. ಈ ದೇವತಾಮಂದಿರವೇ ಭಿಲ್ಲರ ಯಾತ್ರಾಸ್ಥಾನವು. ವಿಶೇಷ ದಿವಸಗಳಲ್ಲಿ ಭಿಲ್ಲರು ಈ ಮಂದಿರಕ್ಕೆ ಬಂದು ದೇವತಾ ಪೂಜೆಯನ್ನು ನೆರವೇರಿಸಿಕೊಂಡು ಪ್ರಸಾದದೊಡನೆ ತೆರಳುತ್ತಿದ್ದರು. ಜುಮೇಲಿಯನು ವೇಣುಗಾನವನ್ನು ಮಾಡಿದ ಕೂಡಲೆ, ಭಿಲ್ಲರ ಪಂಗಡದವರೆಲ್ಲರೂ ಈ ದೇವತಾ ಮಂದಿರದ ಬಳಿಯಲ್ಲಿ ಬಂದು ಸೇರಬೇಕೆಂದು ವಿಧಾಯಕವಾಗಿದ್ದಿತು. ಅದರಂತೆಯೇ ಪಶ್ಚಿಮ ಘಟ್ಟದ ಭಿಲ್ಲರೆಲ್ಲರೂ ಸಮಯವೊದಗಿ ಬಂದಾಗಲೆಲ್ಲಾ ಈ ದೇವತಾ ಮಂದಿರದ ಬಳಿಯಲ್ಲಿ ಜುಮೇಲಿಯನನ್ನು ಕಂಡುಕೊಂಡು ಮುಂದಣ ಕರ್ತವ್ಯವನ್ನು ಆಲೋಚಿಸುವರು.

ಈ ದೇವತಾ ಮಂದಿರವು ಭಿಲ್ಲರಿಗೆ ಸೇರಿದುದಾಗಿದ್ದಿತು. ಈ ಮಂದಿರದಲ್ಲಿ ಆರೂ ಆವಾಗಲೂ ವಾಸಮಾಡಿಕೊಂಡಿರುತ್ತಿರಲಿಲ್ಲ. ಈ ದೇವತೆಗೆ ಪೂಜಾರಿಯು ನಿಯಮಿಸಲ್ಪಟ್ಟಿರಲಿಲ್ಲ. ಆವಾಗ ಆರು ಬೇಕಾದರೂ ಬಂದು ತಮ ತಮಗೆ ತೋರಿಬಂದಂತೆ ಪೂಜೆಯನ್ನು ನೆರವೇರಿಸಿಕೊಂಡು ತೆರಳಬಹುದಾಗಿದ್ದಿತು. ಉತ್ಸವ ದಿವಸಗಳಲ್ಲಿ ಭಿಲ್ಲರು ಆ ದೇವತೆಗೆ ಬಗೆ ಬಗೆಯ ಬಲಿಯನ್ನು ಕೊಟ್ಟು ಸಂಧ್ಯಾಕಾಲದ ವರೆಗೂ ಪೂಜೆಯನ್ನು ನೆರವೇರಿಸಿ ಆನಂದದಿಂದ ಕಾಲವನ್ನು ಕಳೆದು ರಾತ್ರಿಯಾದ ಕೂಡಲೆ ಎಲ್ಲರೂ ತಮ್ಮ ತಮ್ಮ ಸ್ಥಲಗಳಿಗೆ ಹೊರಟು ಹೋಗುತ್ತಿದ್ದರು.

ಮೇಲೆ ಹೇಳಿದ ದೇವತಾ ಮಂದಿರದಲ್ಲಿ ಆರೂ ವಾಸಮಾಡುತ್ತಿರಲಿಲ್ಲವೆಂದು ನಾವು ಮೊದಲೇ ಸೂಚಿಸಿರುವೆವಾದರೂ ಒಬ್ಬ ಹುಚ್ಚಿ ಮುಟ್ಟಿಗೆ ಆ ದೇವಸ್ಥಾನದಲ್ಲಿ ಆಗಿಂದಾಗ ವಾಸವಾಗಿರುತಿದ್ದುದನ್ನು

ಅನೇಕರು ನೋಡಿದ್ದರು. ಆ ಹುಚ್ಚಿಯು ಹನ್ನೆರಡು ಹದಿಮೂರು ವರ್ಷದ ಬಾಲೆಯಾಗಿದ್ದಳು. ಅವಳು ಹುಚ್ಚಿಯಾಗಿದ್ದರೂ ಸರ್ವಾಂಗ ಸುಂದರಿ ಯಾಗಿದ್ದಳು. ಆಕೆಯ ಮಲಿನಾಂಬರದಲ್ಲಿ ಆ ದೇವತಾ ಸೌಂದರ್ಯವು ಮೇಘಾವೃತವಾದ ಚಂದ್ರಬಿಂಬದಂತೆ ಶೋಭಿಸುತ್ತಿದ್ದಿತು.

ಆಕೆಯ ಕೇಶರಾಶಿಯು ತೈಲಾಭಾವದಿಂದ ಕೆದರಿರುವುದು. ಆಕೆಯು ಉಟ್ಟಿದ್ದ ಮಲಿನಾಂಬರವು ನೂರಾರು ತೇಪೆಗಳಿಂದ ಕೂಡಿದು ದಾಗಿರುವುದು. ಒಂದೊಂದು ಕಡೆ ಬಟ್ಟೆಯು ಹರಿದು ಹೋಗಿ ಒಳಗಣ ದೇಹದ ಕೆಲಕೆಲವು ಭಾಗಗಳು ಹೊರಗೆ ಕಾಣಿಸುತ್ತಿದ್ದುವು. ಆಕೆಯ ಕತ್ತಿನಲ್ಲಿ ಒಂದೊಂದು ವೇಳೆ ರುದ್ರಾಕ್ಷ ಮಾಲೆಯೂ, ಒಂದೊಂದು ವೇಳೆ ಜಪಾ ಕುಸುಮಮಾಲಿಕೆಯೂ, ಒಂದೊಂದು ವೇಳೆ ಕರಟಗಳ ಹಾರವೂ, ಒಂದೊಂದು ವೇಳೆ ಮೂಳೆಗಳ ಸರವೂ ಕಂಗೊಳಿಸುತ್ತಿರು ವುವು, ಒಂದೊಂದು ವೇಳೆ ಕತ್ತಿನಲ್ಲಿ ಏನೂ ಇರುತ್ತಿರಲಿಲ್ಲ.

ಆದರೆ ಅವಳ ಹಣೆಯಲ್ಲಿ ಆವಾಗಲೂ ಕುಂಕುಮ ರೇಖೆಯು ಇದ್ದೇ ಇರುವುದು. ಲೋಕದಲ್ಲಿ ಹುಚ್ಚರನ್ನು ನೋಡಿದರೆ ಎಲ್ಲರಿಗೂ ಭಯವಾಗುವುದು ಸಹಜವಾಗಿಯೇ ಇರುವುದು. ಆದರೆ ಈಕೆಯನ್ನು ನೋಡಿದರೆ ಆರಿಗೂ ಭಯವಾಗುತ್ತಿರಲಿಲ್ಲ. ಈಕೆಯನ್ನು ನೋಡಿದವ ರೆಲ್ಲರೂ ಮತ್ತೆ ಮತ್ತೆ ನೋಡುತ್ತಿರಬೇಕೆಂಬ ಬಯಕೆಯುಳ್ಳವರಾಗಿರುತ್ತಿ ದ್ದರೇ ಹೊರತು, ಹುಚ್ಚಿಯೆಂದು ಆರೂ ದೂರವಾಗಿ ಓಡಿ ಹೋಗು ತ್ತಿರಲಿಲ್ಲ. ಈ ಹುಚ್ಚಿಯಲ್ಲಿ ಅದೊಂದು ಅದ್ಭುತವಾದ ಶಕ್ತಿಯಿದ್ದಿತು. ಈಕೆಯು ಗಾನಮಾಡುತ್ತಾ ಕುಳಿತಳೆಂದರೆ, ಎಂತಹ ಕಲ್ಲಾದರೂ ಕರಗಿ ಕರಗಿ ನೀರಾಗಿ ಹರಿದು ಹೋಗುತ್ತಿದ್ದಿತು. ಪಶು ಪಕ್ಷಿ ಮೃಗಾದಿಗಳು ಕೂಡ ಈಕೆಯ ಸುಮಧುರವಾದ ಗಾನವನ್ನು ಕೇಳಿ, ತಿನ್ನುತ್ತಿರುವ ಆಹಾರವನ್ನಾದರೂ ಬಿಟ್ಟು ಆನಂದದಿಂದ ಕೇಳುತ್ತಾ ನಿಂತು ಬಿಡು ತ್ತಿದ್ದುವು.

ದೇವತಾ ಮಂದಿರದಲ್ಲಿ ಜನರು ಪೂಜೆಗಾಗಿ ಗುಂಪುಗೂಡಿದೊಡ ನೆಯೇ ಆ ಹುಚ್ಚಿಯೂ ಕಾತ್ಯಾಯನೀ ಎಂದು ಕೂಗುತ್ತಾ ಆ ಗುಂಪಿನಲ್ಲಿ

ಸೇರಿಕೊಂಡು ಬಿಡುವಳು. ಆ ಹುಚ್ಚಿಯನ್ನು ಎಲ್ಲರೂ ಕಾತ್ಯಾಯನಿ ಯೆಂದೇ ಕೂಗುತ್ತಿದ್ದರು. ಕಾತ್ಯಾಯನಿಯು ಬಂದಳೆಂದರೆ, ಭಿಲ್ಲರೆಲ್ಲರೂ ಪರಮಾನಂದಭರತರಾಗಿ ದೇವತಾಪೂಜೆಯನ್ನು ಸಾಂಗವಾಗಿ ನೆರವೇರಿಸುವರು. ಕಾತ್ಯಾಯನಿಯು ಮನದಣಿಯೆ ಹಾಡಿದಲ್ಲದೆ, ಅಂದಿನ ಮಹೋತ್ಸವವು ಪೂರ್ಣವಾಗುತ್ತಿರಲಿಲ್ಲ. ಹುಚ್ಚಿಯು ಅಲ್ಪವಾಗಿ ಜನರಿರುವಾಗ ಕಾಣಿಸಿಕೊಳ್ಳುವಳು; ಜನರ ಗದ್ದಲವು ವಿಶೇಷವಾಗಿದ್ದಲ್ಲಿ ಹುಚ್ಚಿಯು ಮಾಯವಾಗಿ ಬಿಡುವಳು. ತರುವಾಯ ಆರು ಎಲ್ಲಿ ಹುಡುಕಿದರೂ ಹುಚ್ಚಿಯು ಮಟ್ಟಿಗೆ ಗೋಚರಿಸುತ್ತಿರಲಿಲ್ಲ. ಆರಾದರೂ ಹುಚ್ಚಿಯನ್ನು ಕುರಿತು—ನಿನ್ನ ಹೆಸರೇನು, ತಾಯೇ? ಎಂದು ಕೇಳಿದರೆ ಆಕೆಯು ನಗುತ್ತಾ ಕುಣಿಯುತ್ತಾ ಬಾಯಿಗೆ ಬಂದ ಹಾಗೆ ಮಾತನಾಡುತ್ತಾ ಪಲಾಯನ ಸೂಕ್ತಪಾರಾಯಣ ಮಾಡಿಬಿಡುವಳು.

---

## ಹದಿನಾರನೆಯ ವಿಲಾಸ

ಅದೇ ಈ ದೇವತಾಮಂದಿರವು. ಆವ ಮಂದಿರದಲ್ಲಿ ಮಹಾರಾಜಸಿಂಹನು ಅತ್ಯಾಚಾರವನ್ನೆಸಗಿ ಭಯಂಕರವಾದ ಹೆಂಗುಸಿನ ಶಾಪವನ್ನು ಕೇಳಿ ಹೆದರಿದವನಾಗಿ ಓಡಿ ಹೋಗಿದ್ದನೋ, ಆ ಮಂದಿರವು ಇದೇ ಆಗಿರುವುದು. ಈ ಮಂದಿರದಲ್ಲಿಯೇ ಇಂದು ಭಿಲ್ಲರು ಒಬ್ಬೊಬ್ಬರಾಗಿ ಬಂದು ಸೇರುತ್ತಿರುವರು.

ಭಿಲ್ಲರು ತಂಡತಂಡವಾಗಿ ಈ ಮಂದಿರದ ಬಳಿಯಲ್ಲಿ ಸೇರಲು ಕಾರಣವೇನೆಂದು ಕೇಳಬಹುದು. ಕೆಲವು ದಿನಗಳಿಂದಲೂ ಪಾರ್ವತ್ಯ ಪ್ರದೇಶಗಳಲ್ಲಿ ವೇಣುಗಾನವು ಕೇಳಿಬರುತ್ತಿದ್ದುದೇ ಕಾರಣವು. ವೇಣುಗಾನವು ಇಂದು ದಕ್ಷಿಣದಲ್ಲಿ ಕೇಳಿ ಬಂದರೆ, ನಾಳೆ ಉತ್ತರದಲ್ಲಿ ಕೇಳಿಬರುವುದು; ಇಂದು ಈ ಗ್ರಾಮದಲ್ಲಿ ಕೇಳಿತೆಂದರೆ, ನಾಳೆ ಮತ್ತೊಂದು ಗ್ರಾಮದಲ್ಲಿ ಕೇಳಿಬರುವುದು. ಅಂತೂ ಎಲ್ಲಾ ಕಡೆಗಳಲ್ಲಿಯೂ ವೇಣುನಾದವು ಕೇಳಿಬರಲಾರಂಭಿಸಿತು.

ವೇಣುನಾದವನ್ನು ಕೇಳಿದ ಕೂಡಲೆ ಪ್ರತಿಯೊಂದು ಗ್ರಾಮದಲ್ಲಿಯೂ ಸಡಗರ ವೆದ್ದಿತು ; ಎಲ್ಲೆಲ್ಲಿಯೂ ನೂತನವಾದ ಚೈತನ್ಯದಿಂದ ಭಿಲ್ಲರು ಮೆಯ್ಯುಬ್ಬಿದವರಾದರು. ಈ ಚೈತನ್ಯದಿಂದಲೇ ಎಲ್ಲಾ ಭಿಲ್ಲರೂ ಯುದ್ಧ ಸನ್ನದ್ಧರಾಗಿ ದೇವತಾಮಂದಿರದ ಬಳಿಗೆ ಒಬ್ಬೊಬ್ಬರಾಗಿ ಬರಲಾರಂಭಿಸಿದರು. ಭೂಮಿಯನ್ನು ಉಳುತ್ತಿದ್ದ ಕೆಲವರು ಆ ಕೆಲಸವನ್ನು ಹಾಗೆಯೇ ಬಿಟ್ಟು ಹೊರಟು ಬಂದರು. ವೃದ್ಧರಾದ ಮಾತಾಪಿತೃಗಳನ್ನು ಸೇವಿಸುತ್ತಿದ್ದ ಕೆಲವರು ಹೇಳದೇ ಕೇಳದೇ ಮಂದಿರದ ಬಳಿಗೈತಂದರು. ಮನೆಯ ಕೆಲಸವನ್ನು ನೆರವೇರಿಸುತ್ತಿದ್ದ ಕೆಲವರು ಆಯಾ ಕೆಲಸವನ್ನು ಪೂರ್ತಿಗೊಳಿಸದೆ ಹಾಗೆಯೇ ಬಂದು ಬಿಟ್ಟರು. ಬೇಟೆಗೆ ಹೋಗಿದ್ದವರು ಹಾಗೆಯೇ ದೇವ ಮಂದಿರದ ಕಡೆಗೆ ಓಡಿದರು. ಪ್ರಣಯಾಭಿಲಾಷಿಗಳಾದ ಯುವತೀ ಯುವಕರೂ, ವೃದ್ಧ ದಂಪತಿಗಳೂ, ಬಾಲಕ ಬಾಲಿಕೆಯರೂ ಅಂತೂ ಭಿಲ್ಲ ಜಾತಿಗೆ ಸೇರಿದವರೆಲ್ಲರೂ ದೇವತಾ ಮಂದಿರಕ್ಕೆ ಬಂದು ಸೇರಿದರು. ಆವ ಮಂದಿರದಲ್ಲಿ ಹಿಂದಣ ದಿನ ಪ್ರಕೃತಿಯ ಪ್ರಶಾಂತತೆಯು ಏಕಾಧಿಪತ್ಯ ಮಾಡುತ್ತಿದ್ದಿತೋ, ಇಂದು ಆ ಮಂದಿರದಲ್ಲಿ ಕೋಲಾಹಲಧ್ವನಿ, ಹಾಸ್ಯಧ್ವನಿ, ಜಯಧ್ವನಿಗಳೆದ್ದು ಗಗನ ಮಂಡಲವನ್ನು ಭೇದಿಸಲಾರಂಭಿಸಿದುವು.

ಒಂದೆರಡು ದಿನಗಳೆನ್ನುವುದರೊಳಗಾಗಿ ಹತ್ತೆಂಟುಸಾವಿರ ಭಿಲ್ಲರು ಗುಂಪುಗುಂಪಾಗಿ ಬಂದು ಮಂದಿರದ ಸುತ್ತಲೂ ಬೀಡಾರಗಳನ್ನು ಕಲ್ಪಿಸಿಕೊಂಡರು. ಇಷ್ಟಾದರೂ ಭಿಲ್ಲ ರಾಜನಾದ ಜುಮೇಲಿಯನು ಮಟ್ಟಿಗೆ ಆರ ಕಣ್ಣಿಗೂ ಗೋಚರಿಸಲಿಲ್ಲ. ಜುಮೇಲಿಯನು ಎಲ್ಲಾ ಕಡೆಗಳಿಗೂ ಹೋಗಿ ಬರುವುದಕ್ಕೆ ಕೊಂಚ ಕಾಲವಾದರೂ ತಡವಾಗಬಹುದೆಂದು ತಿಳಿದು ಭಿಲ್ಲರು ಆತನ ಆಗಮನವನ್ನೇ ನಿರೀಕ್ಷಿಸುತ್ತಾ ಕಾಲವನ್ನು ಕಳೆಯಲಾರಂಭಿಸಿದರು.

ಈ ದೇವತಾ ಮಂದಿರದ ಬಳಿಯಲ್ಲಿ ನಮ್ಮ ಪೂರ್ವಪರಿಚಿತೆಯಾದ ಕಾತ್ಯಾಯನಿಯೆಂಬ ಹುಚ್ಚಿಯು ಗುಂಪನ್ನು ನೋಡಿ ಹೆದರದೆ ಎಲ್ಲರ ಕಣ್ಣಿಗೂ ಬೀಳಲಾರಂಭಿಸಿದಳು. ಕಾತ್ಯಾಯನಿಯು ಜನರ ಗುಂಪಿನಲ್ಲಿ ಸೇರಿಕೊಂಡು ಒಂದೊಂದು ಕಡೆ ಕುಣಿಯುವಳು, ಒಂದೊಂದು ಕಡೆ

ನಗುವಳು, ಒಂದೊಂದು ಕಡೆ ದಿವ್ಯಗಾನವನ್ನು ಮಾಡುವಳು, ಒಂದೊಂದು ಕಡೆ ಅಳುವಳು, ಒಂದೊಂದು ಕಡೆ ರೇಗುವಳು, ಒಂದೊಂದು ಕಡೆ ಬಯ್ಯುವಳು, ಒಂದೊಂದು ಕಡೆ ಒಯ್ಯಾರವನ್ನು ತೋರುವಳು, ಒಂದೊಂದು ಕಡೆ ಹಾವಭಾವಗಳನ್ನು ತೋರಿ ಅಭಿನಯಿಸುವಳು, ಒಂದೊಂದು ಕಡೆ ಗಂಭೀರಭಾವವನ್ನು ತಾಳಿಕೊಂಡಿರುವಳು. ಒಂದು ಕಡೆ ಫಲಾಹಾರ ಮಾಡುವಳು, ಒಂದು ಕಡೆ ಪಾನಕವನ್ನು ಕುಡಿಯುವಳು. ಒಂದು ಕಡೆ ಕೊಟ್ಟ ಆಹಾರವನ್ನು ಬೀಸಾಡುವಳು, ಒಂದು ಕಡೆ ಬಾಯಲ್ಲಿ ನೀರನ್ನು ತುಂಬಿಕೊಂಡು ಎಲ್ಲರ ಮೇಲೂ ಉಗುಳುವಳು. ಒಂದು ಕಡೆ ಮೆಲ್ಲಗೆ ನಡೆಯುವಳು, ಮತ್ತೊಂದು ಕಡೆ ಸಡಗರದಿಂದ ಹೋಗುವಳು, ಮಗದೊಂದು ಕಡೆ ದುಡುದುಡುನೆ ಓಡಿ ಹೋಗುವಳು.

ಹುಚ್ಚಿಯು ಹೀಗೆಲ್ಲಾ ಮಾಡುತ್ತಿದ್ದರೂ, ಭಿಲ್ಲರು ಆಕೆಯಲ್ಲಿ ದೇವತಾ ಬುದ್ಧಿಯನ್ನಿಟ್ಟುಕೊಂಡು ಅವಳನ್ನು ಭಕ್ತಿಯಿಂದ ಪರಿಪರಿಯಾಗಿ ಸೇವಿಸುತ್ತಿದ್ದರು. ಕೆಲವು ಹೆಂಗುಸರು ಆಕೆಗೆ ವಸ್ತ್ರವನ್ನುಡಿಸುವರು; ಕೆಲವರು ಆಭರಣವನ್ನು ತೊಡಿಸುವರು, ಕೆಲವರು ಪುಷ್ಪಮಾಲೆಯನ್ನರ್ಪಿಸುವರು, ಕೆಲವರು ಕುಂಕುಮವನ್ನು ಹಚ್ಚುವರು; ಕೆಲವರು ಗಂಧವನ್ನು ತೊಡೆಯುವರು. ಹುಚ್ಚಿಯು ಇದೆಲ್ಲವನ್ನೂ ಆನಂದದಿಂದ ಸ್ವೀಕರಿಸಿ ಕುಣಿಯುವಳು. ಈಕೆಯು ಕುಣಿದರೆ ಎಲ್ಲರೂ ಕುಣಿಯುವರು; ಈಕೆಯು ನಕ್ಕರೆ ಎಲ್ಲರೂ ನಗುವರು, ಈಕೆಯು ರೇಗಿದರೆ, ಎಲ್ಲರೂ ತಲೆಬಾಗಿ ನಿಲ್ಲುವರು, ಈಕೆಯು ಹಾಡಿದರೆ ಎಲ್ಲರೂ ಆನಂದದಿಂದ ಕೇಳುತ್ತಾ ತಲೆಯನ್ನು ತೂಗುವರು.

ಭಿಲ್ಲರಿಗೆ ಲೋಕದಲ್ಲಿ ಇಷ್ಟವಾದ ವಸ್ತುಗಳು ಮೂರು ಹೊರತಾಗಿ ಮತ್ತಾವುವೂ ಇರಲಿಲ್ಲ. ಅವುಗಳಲ್ಲಿ ಮೊದಲನೆಯದು—ಕಾಳಿಕಾಂಬಿಕೆಯ—ನಿತ್ಯಾರಾಧ್ಯಮೂರ್ತಿಯು; ಎರಡನೆಯದು—ಸರ್ವಜನ ಶಿರೋಧಾರ್ಯನಾದ ಜಮೀಲಿಯನ ಮೂರ್ತಿಯು, ಮೂರನೆಯದು—ಪರಮಾನಂದ ಸ್ವರೂಪಿಣಿಯಾದ ಕಾತ್ಯಾಯಿನೀಮೂರ್ತಿಯು. ಜಮೀಲಿಯನೂ ಕಾತ್ಯಾಯಿನಿಯೂ ಕಾಳಿಕಾದೇವತೆಯ ನರಾಕೃತಿಗಳೆಂದು ಭಿಲ್ಲರೆಲ್ಲರ ಸರ್ವತೋಮುಖವಾದ ಭಾವನೆಯು. ಈ ಸದ್ಭಾವನೆಯಿಂ

ದಲೇ ಭಿಲ್ಲರು ಈ ಮೂರ್ತಿತ್ರಯವನ್ನೂ ಆರಾಧ್ಯವಸ್ತುವನ್ನಾಗಿ ಮಾಡಿಕೊಂಡು ತಮ್ಮ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳುತ್ತಿದ್ದರು.

---

## ಹದಿನೇಳನೆಯ ವಿಲಾಸ

ಕಾತ್ಯಾಯನಿಯು ಕೋಗಿಲೆಯ ಕಂಠದಿಂದ ಹಾಡಿದಳು.

ರಾಗ—ಕಲ್ಯಾಣಿ : ರೂಪಕ ತಾಳ

ಪಾಲಿಸು ಮಾಯೇ । ಶೂಲಿಯ ಜಾಯೇ ॥ಪ॥
ಎನ್ನನು ತಾಯೇ । ಸನ್ನುತ ಕಾಯೇ ॥ಅನುಪ॥
ಭವ ಬಂಧನದಿಂ । ದಲಿ ಬೆಂದಿಹೆ ನಾಂ ।
ಜವದಿಂ ಕರುಣಿಸಿ । ಪಾರವ ತೋರುತೆ ॥೧॥

* * *

ಕಾತ್ಯಾಯನಿಯು ಕೈಗಳಲ್ಲಿ ತಾಳವನ್ನು ಹಾಕಿಕೊಂಡು ಶಬ್ದಸೌಷ್ಠವದಿಂದಲೂ ಅರ್ಥಗಾಂಭೀರ್ಯದಿಂದಲೂ ಕೂಡಿರುವ ಹಾಗೆ ಆನಂದವಾಗಿ ಹಾಡಿದಳು. ಹಾಡಿದ ಕೂಡಲೆ ಅಲ್ಲಿ ಒಂದು ಕ್ಷಣವೂ ನಿಲ್ಲದೆ ಹುಚ್ಚು ಹುಚ್ಚಾಗಿ ಕುಣಿದು ಕುಪ್ಪಳಿಸಿ ಹಾರಿಕೊಂಡು ಓಡಿಹೋದಳು. ಆಕೆಯು ಓಡಿದ ರಭಸಕ್ಕೆ ಎಲ್ಲರೂ ಬೆರಗಾಗಿ ದಾರಿಯನ್ನು ಬಿಟ್ಟರು. ಕಾತ್ಯಾಯನಿಯು ಎಲ್ಲರೂ ನೋಡುತ್ತಿದ್ದ ಹಾಗೆಯೇ ಮಂದಿರದೊಳಗೆ ಪ್ರವೇಶಮಾಡಿ ಒಳಗಡೆಯಿಂದ ಬಾಗಿಲನ್ನು ಬಂಧಿಸಿದಳು.

ಅಲ್ಲಿಗೆ ಬಂದಿದ್ದ ಭಿಲ್ಲರೆಲ್ಲರೂ ಜುಮೋಲಿಯನು ಬರುವ ಹೊತ್ತಾಯಿತೆಂದು ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಾ ರಣೋಚಿತವಾದ ವೇಷವನ್ನು ಧಾರಣಮಾಡಿ ಸಿದ್ಧರಾಗಿ ನಿಂತರು. ಅವರ ದಳಪತಿಗಳು ಸೈನಿಕರೆಲ್ಲರನ್ನೂ ಕ್ರಮವರಿತು ಒಂದೊಂದು ದಳವಾಗಿ ವಿಂಗಡಿಸಿ ನಿಲ್ಲಿಸಿದರು. ಎಲ್ಲಿ ನೋಡಿದರೂ ಧನುರ್ಬಾಣಗಳೂ ಕತ್ತಿ ಕಠಾರಿಗಳೂ ನೋಡುವರಿಗೆ ಭಯವನ್ನುಂಟುಮಾಡುವಂತಿದ್ದುವು

ಹೀಗಾಗಲು ಕಾರಣವೇನು? ಶತ್ರುಗಳೇನಾದರೂ ಯುದ್ಧಕ್ಕೆ ಸಿದ್ಧರಾಗಿ ಬಂದಿರಬಹುದೇ? ಅಂತಹ ಸುದ್ದಿಯೇನೂ ಕೇಳಿ ಬರಲಿಲ್ಲ. ಹಾಗಾದರೆ ಈ ಯುದ್ಧೋದ್ಯೋಗವೇತಕೆ? ಮತ್ತೆ ವೇಣುನಾದವು ಕೇಳಿ ಬಂದುದೇ ಇದಕ್ಕೆ ಕಾರಣವು. ಈ ವೇಣುನಾದದಿಂದ ಜುಮೋಲಿಯನು ಸಮೀಪದಲ್ಲಿಯೇ ಬರುತ್ತಿರಬಹುದೆಂದು ತಿಳಿದು ಎಲ್ಲರೂ ರಾಜನ ಮರ್ಯಾದೆಗನುಸಾರವಾಗಿ ಎಚ್ಚರಿಕೆಯಿಂದ ತಮ್ಮ ತಮ್ಮ ಸ್ಥಾನಗಳಲ್ಲಿ ನಿಂತುಕೊಂಡರು.

ವೇಣುನಾದವು ಮತ್ತೆ ಮತ್ತೆ ವಾಯುಮಂಡಲದಲ್ಲಿ ತೇಲಿಕೊಂಡು ಹೊರಡಲಾರಂಭಿಸಿತು. ಈ ಗಾನದಿಂದ ಎಲ್ಲರೂ ಮೈಮರೆತು ನಿಂತರು. ಕೆಲವರು ಸಮೀಪದಲ್ಲಿಯೇ ವೇಣುನಾದವಾಗುತ್ತಿರುವುದೆಂದು ಮಾತ ನಾಡಿಕೊಂಡರು; ಮತ್ತೆ ಕೆಲವರು ಈ ಮಂದಿರದಲ್ಲಿಯೇ ವೇಣುಗಾನ ವಾಗುತ್ತಿರುವುದೆಂದು ಸಮರ್ಥನ ಮಾಡಿದರು. ಈ ಮಾತನ್ನು ಕೇಳಿದ ಕೂಡಲೆ ಎಲ್ಲರಿಗೂ ಆಶ್ಚರ್ಯವುಂಟಾಯಿತು. ಆಶ್ಚರ್ಯದಿಂದ ಅವರು ಮಾತನಾಡಿಕೊಂಡುದೇನೆಂದರೆ :—

"ನಮ್ಮ ರಾಜನಾದ ಜುಮೋಲಿಯನು ವೇಣುಗಾನವನ್ನು ಮಾಡು ತ್ತಾ ಸಂಚರಿಸುವನು. ಆ ವೇಣುಗಾನದಿಂದಲೇ ಆತನು ನಮ್ಮನ್ನು ಇಂದು ಇಲ್ಲಿಗೆ ಬರಮಾಡಿಕೊಂಡಿರುವನು. ಎಲ್ಲಿಲ್ಲಿಯೋ ಕೇಳಿಸುತ್ತಿದ್ದ ವೇಣು ನಾದವು ಈಗ ಈ ಮಂದಿರದಲ್ಲಿಯೇ ಕೇಳಿಬರುತ್ತಿರುವುದು. ಹೀಗೆಂದ ಮೇಲೆ ಜುಮೋಲಿಯನು ಈ ದೇವತಾಮಂದಿರದಲ್ಲಿಯೇ ಇರಬೇಕು. ಇಷ್ಟು ಹೊತ್ತಿನ ವರೆಗೂ ಹೊರಗೆಯೇ ತಿರುಗಾಡುತ್ತಿದ್ದ ಜುಮೋಲಿಯನು ಈ ಮಂದಿರದೊಳಗಿರಲು ಹೇಗೆ ಸಾಧ್ಯವು? ನಾವುಗಳೆಲ್ಲರೂ ಸುತ್ತಲೂ ಕಾದುಕೊಂಡಿರುತ್ತಿರುವಲ್ಲ, ಆತನು ನಮ್ಮ ಕಣ್ಣಿಗೆ ಬೀಳದ ಹಾಗೆ ಈ ಮಂದಿರದಲ್ಲಿ ಬಂದ ಬಗೆ ಹೇಗೆ? ನಾವು ಕಂಡ ಹಾಗೆ ಈ ಮಂದಿರದೊಳಗೆ ಕಾತ್ಯಾಯನಿಯು ಪ್ರವೇಶಮಾಡಿ ಬಾಗಿಲನ್ನು ಹಾಕಿಕೊಂಡಿರುವಳು. ಇದೇನು ಸ್ವಪ್ನವಾಯಿತೋ? ಜುಮೋಲಿಯನು ಸರ್ವಾಂತರ್ಯಾಮಿಯೋ? ಇಲ್ಲವೇ, ಇದೆಲ್ಲವೂ ಕಾಳಿಕಾಂಬಿಕೆಯ ಲೀಲಾ ವಿಲಾಸವೇ? ತತ್ತ್ವ ವನ್ನು ಪರಿಶೀಲಿಸಿ ನೋಡಿದಷ್ಟು, ನಮ್ಮ ಜುಮೋಲಿಯನು ಕಾಳಿಕಾದೇವಿಯ

ಸಾಹಸದ ಅಪರಾವತಾರವೆಂದೂ, ನಮ್ಮ ಕಾತ್ಯಾಯನಿಯು ಕಾಳಿಕಾ ದೇವಿಯ ಶಕ್ತಿಯ ಅಪರಾವತಾರವೆಂದೂ ನಿಶ್ಚಯ ಮಾಡಿಕೊಳ್ಳ ಬೇಕಾಗಿರುವುದು. ಹಾಗಿಲ್ಲದಿದ್ದರೆ ಎಂದಿಗೂ ಹೀಗಾಗಲಿಕ್ಕಿಲ್ಲ. ನಮ್ಮ ಪೂರ್ವಪುಣ್ಯೋದಯದಿಂದ, ಕಾಳಿಕಾಂಬಿಕೆಯೇ ಕಾತ್ಯಾಯನಿಯು; ಕಾತ್ಯಾಯನಿಯೇ ಜುಮೇಲಿಯನು. ಈ ಮೂವರೂ ನಮ್ಮ ಭಾಗಕ್ಕೆ ಒಂದೇ ಆಗಿರುವರು. 'ಮೂರೂ ಸೇರಿದುದು ಪೂರ್ವಸುಕೃತವು' ಎಂಬ ಗಾದೆಯು ನಮಗಾಗಿಯೇ ಹುಟ್ಟಿರಬೇಕು. ಮತ್ತಾರಿಗೆ ಈ ಸುಯೋಗವು ಲಭಿಸೀತು?"

ಎಲ್ಲರೂ ಈ ರೀತಿಯಾಗಿ ಮಾತನಾಡಿಕೊಂಡ ಬಳಿಕ ಭಗವತಿಯ ಮಹಾ ಮಹಿಮೆಯನ್ನು ಕೊಂಡಾಡುತ್ತಾ ನಿಂತಿದ್ದರು. ಹೀಗಿರುವಷ್ಟರೊಳಗಾಗಿ, ಮಂದಿರದ ಬಾಗಿಲು ತಟ್ಟನೆ ತೆರೆಯಲ್ಪಟ್ಟಿತು. ಕೂಡಲೆಯೇ ಜುಮೇಲಿಯನು ಭಿಲ್ಲರ ಇದಿರಿನಲ್ಲಿ ಬಂದು ನಿಂತನು. ಭಿಲ್ಲರು ಜುಮೇಲಿಯನನ್ನು ಮೊದಲು ಆವ ರೂಪದಿಂದ ನೋಡಿದ್ದರೋ, ಇಂದೂ ಅದೇ ರೂಪದಲ್ಲಿದ್ದುದನ್ನು ನೋಡಿದರು.

ಭಿಲ್ಲರು ಜುಮೇಲಿಯನನ್ನು ನೋಡಿದ ಕೂಡಲೆ ಜಯಧ್ವನಿಯನ್ನು ಮಾಡಿದರು. ಅವರು ಮಾಡಿದ ಜಯಧ್ವನಿಯು ಆ ಅರಣ್ಯವೆಲ್ಲವನ್ನೂ ಆವರಿಸಿಕೊಂಡು ಅಂತರಿಕ್ಷದಲ್ಲಿಯೂ ಘೋರ್ಗರೆಯಿತು. ಬಳಿಕ ಜುಮೇಲಿಯನು ಅತಿ ಗಂಭೀರ ಭಾವವನ್ನು ತಾಳಿ ಮೃದುಮಧುರವಾದ ಧ್ವನಿಯಿಂದ ಮಾತನಾಡಿದನು:—

"ರಾಜಭಕ್ತಿ ಪರಾಯಣರಾದ ಭಿಲ್ಲ ಮಹಾಜನಗಳಿರಾ! ರಾಜಾಜ್ಞೆಯನ್ನು ಪರಿಪಾಲನೆ ಮಾಡುವುದರಲ್ಲಿ ನಿಮ್ಮಗಳ ಆದರವು ಎಷ್ಟರಮಟ್ಟನದೆಂಬುದನ್ನು ಅರಿವುದಕ್ಕಾಗಿ ಇಂದು ನಾವು ನಿಮ್ಮೆಲ್ಲರನ್ನೂ ಈ ಸ್ಥಳದಲ್ಲಿ ಬರಮಾಡಿಕೊಂಡುದಾಯಿತು. ಇನ್ನೊಂದು ವರ್ಷದ ಇದೇ ದಿವಸಕ್ಕೆ ನಿಮ್ಮನ್ನು ನಾವು ಇಲ್ಲಿಯೇ ನೋಡುವವರಾಗಿರುವೆವು. ಆಗ ಮಾರವಾಡದಲ್ಲಿ ಭಯಂಕರವಾದ ವಿಪ್ಲವವುಂಟಾಗುವ ಸಂಭವವುಂಟು. ಅದರಿಂದ ಮಾರವಾಡದ ರಾಜ್ಯವೂ, ಮಾರವಾಡದ ಗೌರವವೂ ಉಳಿ

ಯುವ ಹಾಗಿಲ್ಲ. ಪರಾಕ್ರಮಶಾಲಿಗಳಾದ ಮುಸಲರು ಮಾರವಾಡದ ಗೌರವವನ್ನೂ ಸ್ವಾತಂತ್ರ್ಯವನ್ನೂ ಕಾಲಿನಿಂದ ತುಳಿದು ಬಿಡಬೇಕೆಂದು ಸಂಕಲ್ಪಮಾಡಿಕೊಂಡಿರುವರು. ನಮಗೆ ಮಾರವಾಡದವರು ಅನೇಕ ಸಂದರ್ಭಗಳಲ್ಲಿ ಉಪಕಾರ ಮಾಡಿರುವುದರಿಂದ, ನಾವುಗಳೆಲ್ಲರೂ ಸೇರಿ ಕೊಂಡು ಅವರಿಗೆ ಸಂಭವಿಸಬಹುದಾದ ಅನರ್ಥಗಳನ್ನು ಸಾಧ್ಯವಾದ ಮಟ್ಟಿಗೂ ಹೋಗಲಾಡಿಸುವ ಯತ್ನಮಾಡಬೇಕಾಗಿರುವುದು. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡುವುದರಲ್ಲಿ ನಮ್ಮ ಪ್ರಾಣಗಳು ಹೋದರೂ ನಮಗೆ ಮಂಗಳವೇ ಉಂಟಾಗುವುದು. ಮಾರವಾಡದ ವರು ನಮ್ಮ ಸಾಹಾಯ್ಯವನ್ನು ಬಯಸಲಿ, ಬಯಸದಿರಲಿ, ನಾವು ಮಟ್ಟಿಗೆ ಸಮಯದಲ್ಲಿ ಅವರಿಗೆ ಒತ್ತಾಸೆಯಾಗಿ ನಿಂತು ಕೆಲಸಮಾಡಬೇಕಾದುದು ನಮ್ಮಗಳ ಕುಲಧರ್ಮವಾಗಿರುವುದು. ನಾವು ಸ್ವಧರ್ಮದಿಂದ ಚ್ಯುತ ರಾಗುವುದಾದರೆ, ನಮಗೆ ಇಹದಲ್ಲಿ ಶಾಶ್ವತವಾದ ಸುಖಸಂಪತ್ತು ಗಳೂ, ಪರದಲ್ಲಿ ಸದ್ಗತಿಯೂ ದೊರೆಯಲಾರವು. ನಾವು ಸ್ವಧರ್ಮ ದಲ್ಲಿರುವ ವರೆಗೂ ಭಗವತೀ ಕಾಳಿಕಾಂಬಿಕೆಯ ಪೂರ್ಣ ಕಟಾಕ್ಷವು ನಮ್ಮಲ್ಲಿರುವುದು. ''

ಜುಮೋಲಿಯನು ಹೀಗೆ ಹೇಳಿ ಸುಮ್ಮನಾದನು. ರಾಜನ ಮಾತನ್ನು ಕೇಳಿದ ಕೂಡಲೆ, ಭಿಲ್ಲರೆಲ್ಲರೂ ಹುರಿದುಂಬಿದವರಾಗಿ ಜಯ ಜಯ ಶಬ್ದವನ್ನು ಉಚ್ಚಾರಣೆ ಮಾಡಿದರು. ಬಳಿಕ ಎಲ್ಲರೂ ಸಂತೋಷ ಸಮಾರಂಭದಲ್ಲಿ ಮಗ್ನರಾಗಲು, ಜುಮೋಲಿಯನೂ ಸಾಮಾನ್ಯನಂತೆ ಅವರ ಜತೆಯಲ್ಲಿ ಸೇರಿಕೊಂಡು ಸಂತೋಷದಲ್ಲಿ ಭಾಗಿಯಾದನು. ಜುಮೋಲಿಯನು ಆತ್ಮ ಗೌರವವನ್ನೂ ಅಧಿಕಾರ ದರ್ಪವನ್ನೂ ರಾಜ ಠೀವಿ ಯನ್ನೂ ಒತ್ತಟ್ಟಿಗಿಟ್ಟು ಭಿಲ್ಲರೊಡನೆ ಸೇರಿಕೊಂಡು ಕೆಲವೆಡೆಗಳಲ್ಲಿ ವೀಣೆಯನ್ನು ಬಾರಿಸಿದನು, ಕೆಲವೆಡೆಗಳಲ್ಲಿ ವೇಣುವನ್ನು ಊದಿದನು, ಮತ್ತೆ ಕೆಲವೆಡೆಗಳಲ್ಲಿ ಮಧುರವಾದ ಕಂಠದಿಂದ ಮನೋಹರವಾದ ಗಾನ ವನ್ನು ಮಾಡಿದನು. ಈ ರೀತಿಯಾದ ಆನಂದಾತಿಶಯಗಳಿಂದ ಅಂದಿನ ದಿನವು ಒಂದು ನಿಮಿಷದಂತೆ ಕಳೆದುಹೋಯಿತು.

ಮರುದಿನ ಪ್ರಾತಃಕಾಲದಲ್ಲಿ ಬಂದಿದ್ದವರೆಲ್ಲರೂ ಜುಮೇಲಿಯನ ಅಪ್ಪಣೆಯನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿ ಹೊರಟುಹೋದರು. ಕೂಡಲೆಯೇ ಮಂದಿರವು ಜನಶೂನ್ಯವಾಗಿ ಮೊದಲಿನಂತಾಗಿಬಿಟ್ಟಿತು. ಜುಮೇಲಿಯನು ಮಟ್ಟಿಗೆ ಅಲ್ಲಿಯೇ ನಿಂತುಬಿಟ್ಟನು. ಜನರೆಲ್ಲರೂ ಹೊರಟುಹೋದ ಮೇಲೆ, ಆ ಅರಣ್ಯ ಮಧ್ಯದಲ್ಲಿ ಹುಚ್ಚಿಯಾದ ಕಾತ್ಯಾಯನಿಯು ಆಗಿಂದಾಗ ಸರ್ವಜನನ್ಮನೋಮೋಹಕರವಾದ ಗಾಂಧರ್ವಗಾನವನ್ನು ಹಾಡುತ್ತಾ ಸಂಚರಿಸುತ್ತಿದ್ದಳು.

---

## ಹದಿನೆಂಟನೆಯ ವಿಲಾಸ

ಕಮಲಿನಿಯು ಮೊದಲಿನ ಕಮಲಿನಿಯಾಗಿರಲಿಲ್ಲ. ಮೊದಮೊದಲು ಕಮಲಿನಿಯು ಆವ ಗಾಂಭೀರ್ಯದಿಂದ ಕಾಣಿಸಿಕೊಳ್ಳುತ್ತಿದ್ದಳೋ, ಆಕೆಯು ರಾಣಿಯಾದ ಮೇಲೆ ಆ ಗಾಂಭೀರ್ಯವು ನೂರ್ಮಡಿಯಾಗಿ ಹೋಗಿದ್ದಿತು. ಇದರ ಅರ್ಥವೇನೆಂದರೆ—ಕಮಲಿನಿಯು ರಾಣಿಯಾದಂದಿನಿಂದಲೂ ಸಖಿಯರೊಡನೆ ಮೊದಲಿನಂತೆ ಸೇರುತ್ತಿರಲಿಲ್ಲ; ದಾಸದಾಸಿಯರೊಡನೆ ಮೊದಲಿನಂತೆ ಮುಖಕೊಟ್ಟು ಮಾತನಾಡುತ್ತಿರಲಿಲ್ಲ. ಕಮಲಿನಿಯು ರಾಣಿಯಾದ ಮೇಲೆ ತನ್ನ ತಂಗೆಯಾದ ಕುಮುದಿನಿಯೊಡನೆ ಸರಸವಾಗಿ ಮಾತನಾಡುವುದನ್ನು ಕೂಡ ಬಿಟ್ಟು ಬಿಟ್ಟಳು. ಅಧಿಕಾರ ಸಂಪತ್ತು ಒದಗಿ ಬಂದಿತೆಂದರೆ ಕೆಲವು ಸ್ವಭಾವದ ಜನರಿಗೆ ತಲೆ ತಿರುಗಿ ಈ ತೆರನಾದ ಬಿಗುಮಾನವು ಬರುವುದುಂಟು. ಇದನ್ನು ತಪ್ಪಿಸುವುದಕ್ಕೆ ಆರಿಂದಲೂ ಸಾಧ್ಯವಲ್ಲ.

ನಮ್ಮ ಕಮಲಿನಿಯು ತನ್ನ ಕೋಣೆಯಲ್ಲಿ ಕುಳಿತುಕೊಂಡು ಭೂಮ್ಯಾಕಾಶಗಳನ್ನೇ ಚಿಂತಿಸುತ್ತಿರುವಳು. ಈ ಚಿಂತೆಯೆಂಥದೆಂಬುದು ಆರಿಗೂ ತಿಳಿಯಲು ಸಾಧ್ಯತರವಾಗಿರಲಿಲ್ಲ. ಕಮಲಿನಿಯ ಚಿಂತೆಯಿಂದ ಆರಿಗೂ ಆವ ತೆರನಾದ ತೊಂದರೆಯೂ ಉಂಟಾಗುತ್ತಿರಲಿಲ್ಲವಾದರೂ, ಆಕೆಯು ತುದಿಮೊದಲಿಲ್ಲದೆ ಚಿಂತಿಸಿಯೇ ಚಿಂತಿಸುವಳು. ಈ ಚಿಂತೆಯ ಪ್ರಭಾವದಿಂದ ಕಮಲಿನಿಯು ಅರಮನೆಯಲ್ಲಿ ನಡೆಯುತಿದ ಆನ

ಸಂತೋಷದ ಸಮಾರಂಭದಲ್ಲಿಯೂ ಆವ ಭಾಗವನ್ನೂ ತೆಗೆದುಕೊಳ್ಳು ತ್ತಿರಲಿಲ್ಲ. ಇತರರ ಸಂತೋಷಕ್ಕೆ ಇದೊಂದು ದೊಡ್ಡ ಕೊರತೆಯಾ ಗಿದ್ದಿತು.

ಮಾರವಾಡದ ಸಂಸ್ಥಾನದಲ್ಲಿ ಅದೊಂದು ಸಂತೋಷದ ಸುದ್ದಿ ಯೆದ್ದು ಎಲ್ಲೆಲ್ಲಿಯೂ ಹರಡಲಾರಂಭಿಸಿತು. ಕಮಲಿನಿಯು ಮಹಾ ರಾಣನ ಅರಮನೆಯನ್ನು ಬಿಟ್ಟು ಬೇರೆಯ ಕಡೆಗೆ ತೆರಳುವ ಳಾಗಿದ್ದಳು. ಇದಕ್ಕೆ ಕಾರಣವು ಈ ರೀತಿಯಾಗಿದ್ದಿತು. ಮಾರವಾಡದ ಮಹಾರಾಣಾ ಅಮರ ಸಿಂಹನು ತನ್ನ ಮಗನಾದ ಮಹಾರಾಜಸಿಂಹನಿಗೆ ರಾಜ್ಯದಲ್ಲಿ ಆವ ಸಂಬಂಧವೂ ಇಲ್ಲದೇ ಹೋದುದಕ್ಕಾಗಿ ಅತಿಯಾಗಿ ಕತಿಗೊಂಡು ದೊಡ್ಡ ಜಹಗೀರಿಯೊಂದನ್ನು ಆತನಿಗೆ ಬಿಟ್ಟುಕೊಟ್ಟು ಅದರಲ್ಲಿ ಸುಂದರ ವಾದ ಅರಮನೆಯೊಂದನ್ನು ಕಟ್ಟಿಸಿ ಅಲ್ಲಿ ರಾಜ್ಯಭಾರಮಾಡಿಕೊಂಡಿರು ವಂತೆ ತನ್ನ ಮಗನಿಗೆ ಅಪ್ಪಣೆಮಾಡಿದನು. ಮಹಾರಾಜಸಿಂಹನು ಅದಕ್ಕೆ ಸಮ್ಮತಿಸಿದ ಬಳಿಕ, ಒಂದು ಸುಮುಹೂರ್ತದಲ್ಲಿ ಆತನು ತನ್ನ ಜಹಗೀರಿ ಯಲ್ಲಿ ರಾಜನಾಗಿ ಪಟ್ಟಾಭಿಷಿಕ್ತನಾದನು. ಅಂದು ಮೊದಲು ಕಮಲಿ ನಿಯೂ ರಾಣಿಯಾಗಿಬಿಟ್ಟಳು.

ಮಹಾರಾಜಸಿಂಹನು ಗುರುದತ್ತವಾದ ತನ್ನ ಜಹಗೀರಿಯಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯಭಾರಮಾಡುವುದಕ್ಕೆ ಮೊದಲು ಮಾಡಿದನು. ತಾನು ರಾಜನಾದುದಕ್ಕೆ ಸಂತೋಷ ಮಹೋತ್ಸವವನ್ನು ಏರ್ಪಡಿಸಬೇ ಕೆಂದೂ ಆ ಮಹೋತ್ಸವಕ್ಕೆ ತನ್ನ ತಂದೆ ಆದಿಯಾಗಿ ಎಲ್ಲರನ್ನೂ ಕರೆ ಯಿಸಬೇಕೆಂದೂ ಸಂಕಲ್ಪಿಸಿ ಅದಕ್ಕೆ ತಕ್ಕ ಪ್ರಯತ್ನಮಾಡಿದನು. ಅದ ಕ್ಕನುಗುಣವಾಗಿಯೇ ದೇಶದ ಮಾನ್ಯರಾದ ಹಾಗೂ ಸಾಮಾನ್ಯರಾದ ಪ್ರಜೆ ಗಳೂ, ರಾಜವರ್ಗದವರೂ, ಮಿತ್ರಮಂಡಲಿಯವರೂ, ದೀನಾನಾಥರೂ ಎಲ್ಲರೂ ಮಹೋತ್ಸವಕ್ಕೆ ಕರೆಯಲ್ಪಟ್ಟಿರುವರು. ಮಹಾರಾಣಾ ಅಮರ ಸಿಂಹನೂ, ಯುವರಾಜ ಲಲಿತಸಿಂಹನೂ ಮಹಾರಾಜಸಿಂಹನ ಅರ ಮನೆಗೆ ತೆರಳುವುದಕ್ಕೆ ತಕ್ಕ ಏರ್ಪಾಡು ನಡೆದಿರುವುದು. ಮಹಾರಾಜ ಸಿಂಹನು ಈ ಮಹೋತ್ಸವವನ್ನು ಮಹಾ ವಿಜೃಂಭಣೆಯಿಂದ ನೆರವೇರಿಸ ಬೇಕೆಂದು ಹಣವನ್ನು ನೀರಿನಂತೆ ವೆಚ್ಚಮಾಡಲಾರಂಭಿಸಿದನು. ಆವ

ಬಗೆಯಲ್ಲಿಯೂ ಲೋಪದೋಷಗಳುಂಟಾಗಬಾರದೆಂಬುದೇ ಮಹಾರಾಜ ಸಿಂಹನ ಪರಮೋದ್ದೇಶವಾಗಿದ್ದಿತು.

ಮಹೋತ್ಸವದ ಹಿಂದಣ ರಾತ್ರಿಯಲ್ಲಿ ಕಮಲಿನಿಯು ತನ್ನ ಗಂಡನಿಗೆ ಮಹೋಪಚಾರವನ್ನು ಮಾಡಿದಳು. ಆಕೆಯು ಮಾಡಿದ ಉಪಚಾರವನ್ನು ಮಹಾರಾಜಸಿಂಹನು ಹಿಂದೆ ಎಂದೂ ಕಂಡವನಾಗಿರಲಿಲ್ಲ. ಇಂದು ತನ್ನ ಹೆಂಡತಿಯ ಪರಮಾದರವನ್ನು ನೋಡಿ, ಮಹಾರಾಜನು ಆಕೆಯ ಮೋಹದಲ್ಲಿ ಮುಗ್ಧನಾಗಿಬಿಟ್ಟನು. ಮೊದಲಿನಿಂದಲೂ ಈ ಸಮಯವನ್ನೇ ಕಾದುಕೊಂಡಿದ್ದ ಕಮಲಿನಿಯು ಗಂಡನನ್ನು ಕುರಿತು— ಪ್ರಭೂ! ತಾವು ಮಾರವಾಡದ ಮಹಾರಾಣಾ ಆಗುವಿರಿ, ಎಂದು ಮುಗುಳು ನಗೆಯನ್ನು ತೋರುತ್ತಾ ಮಿದುನುಡಿಗಳನ್ನಾಡಿದಳು.

ಮಹಾ—(ಚಮತ್ಕೃತನಾಗಿ) ಪ್ರಿಯೆ! ಈ ಮಾತನ್ನು ನೀನು ನನ್ನೊಡನೆ ಆಡಬಾರದು. ಇದನ್ನು ಕೇಳಿದೊಡನೆಯೇ ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಗುವುದು.

ಕಮಲಿನಿ—ಆಮೇಲೆ?

ಮಹಾ—ಮಹಾರಾಣನಾಗುವುದಕ್ಕೇನೋ ನನಗೆ ತುಂಬಾ ಇಷ್ಟವುಂಟು, ಆದರೆ ಮಹಾರಾಣನಾಗಿ ಸಾಯುವುದು ಮಟ್ಟಿಗೆ ನನಗೆ ಇಷ್ಟವಿಲ್ಲ. ಆದುದರಿಂದ, ಪ್ರಿಯೆ! ನೀನು ಈ ಮಾತನ್ನು ನನ್ನ ಇದಿರಿನಲ್ಲಿ ಎಂದಿಗೂ ಆಡಬೇಡ, ಕಂಡೆಯಾ?

ಕಮಲಿನಿ—(ನಗುತ್ತಾ) ಆ ಹೆಂಗುಸಾದರೋ ಸಾಕ್ಷಾತ್ತಾದ ದೇವತೆಯು. ಅವಳು ಹೇಳಿದಂತೆಯೇ ಎಲ್ಲವೂ ನಡೆದು ಹೋಗುವುದು.

ಮಹಾ—ಆ ಮಾತು ಹಾಗಿರಲಿ. ಪ್ರಿಯೆ! ನಾನು ಮಹಾರಾಣನಾಗುವುದು ಹೇಗೆ? ಲಲಿತಸಿಂಹನು ಇನ್ನೂ ಬದುಕಿರುವನಲ್ಲವೇ!

ಕಮಲಿನಿ—ಸಾಯುವುದು ಎಷ್ಟು ಹೊತ್ತಿನ ಕೆಲಸ.

ಈ ಕರ್ಣ ಕಠೋರವಾದ ಮಾತನ್ನು ಕೇಳಿದ ಕೂಡಲೆ ಮಹಾರಾಜಸಿಂಹನ ತಲೆಯು ಗಿರ್ರನೆ ತಿರುಗಿ ಮೆಯ್ಯೆಲ್ಲವೂ ಬೆವತು ಹೋಯಿತು. ಬಳಿಕ ಕೊಂಚ ಕಾಲದ ವರೆಗೂ ಚೇತರಿಸಿಕೊಂಡವನಾಗಿ ಹೆಂಡತಿಯನ್ನು ಕುರಿತು—ಪ್ರಿಯೆ ಕಮಲಿನಿ! ನಿನ್ನಲ್ಲಿ ವಂಚನೆಯೇಕೆ? ಕೇಳು. ಈ ಜಹಗೀರಿಯಲ್ಲಿ ರಾಜನಾದುದಕ್ಕೆ ನನಗೆ ಎಷ್ಟೋ ಸಂತೋಷವು. ಹೀಗಿರುವ ಮೇಲೆ, ಮಾರವಾಡದ ಸಂಸ್ಥಾನಕ್ಕೇ ರಾಜನಾಗುವುದಾದರೆ ಆ ಸಂತೋಷಕ್ಕೆ ಪಾರವೆಲ್ಲಿಯದು? ಆ ಸಂತೋಷವಾದರೋ ಪುಣ್ಯ ಮಾಡಿದವನೊಬ್ಬನಿಗೆ ಸಲ್ಲತಕ್ಕುದೇ ಹೊರತು ನನ್ನಂತಹ ಪಾಮರನಿಗೆ ಎಂದಿಗೂ ಲಭಿಸತಕ್ಕುದಲ್ಲ, ಎಂದು ಮಾತನಾಡಿದನು.

ಕಮಲಿನಿ—ಅದರ ಸುಖವೆಷ್ಟೆಂಬುದನ್ನು ನಾನು ಮೊದಲಿನಿಂದಲೂ ಬಲ್ಲೆನು. ತಮಗೆ ಅದು ಈಗ ತಿಳಿದು ಬಂದುದಕ್ಕಾಗಿ ನಾನು ಎಷ್ಟೋ ಸಂತೋಷ ಪಡಬೇಕಾಗಿರುವುದು.

ಮಹಾ—ಪ್ರಿಯೆ! ನಿನ್ನ ಅಭಿಪ್ರಾಯವಾದರೂ ಏನು? ನಾನು ಏನ ಮಾಡಬೇಕೆಂಬುದು ನಿನಗೆ ಇಷ್ಟ, ತಿಳಿಸು.

ಕಮಲಿನಿ—(ನಗುತ್ತಾ) ಹೆಂಗುಸರ ಮಾತನ್ನು ಕೇಳುವವರಾರು? ಅವರಲ್ಲಿಯೂ ಹೆಂಡತಿಯ ಮಾತೆಂದರೆ ಗಂಡನಾದವನಿಗೆ ಅಸಹ್ಯ. ಹೀಗಿರುವಲ್ಲಿ ತಾವು ನನ್ನ ಮಾತನ್ನು ಕೇಳುವಿರಾ? ಕೇಳುವುದಾದರೆ ತಿಳಿಸಬಹುದು.

ಮಹಾ—ಪ್ರಿಯೆ! ನಿನ್ನ ಮಾತನ್ನೂ ನಾನು ಕೇಳದ ಮೇಲೆ, ಮತ್ಯಾರ ಮಾತನ್ನು ಕೇಳಬೇಕು?

ಕಮಲಿನಿ—ಹಾಗಾದರೆ ಕೇಳೋಣವಾಗಲಿ.

ಕಮಲಿನಿಯು ಹೀಗೆ ಹೇಳಿ ತನ್ನ ಪತಿಯನ್ನು ವಕ್ಷದ ಮೇಲೆ ಒರಗಿಸಿಕೊಂಡು ಅತ್ಯಂತಾದರದೊಡನೆ ಮೃದುಮಧುರವಾದ ಧ್ವನಿಯಿಂದ ಹೇಳಿದಳು :—

"ಪ್ರಭೂ! ತಾವು ಎಲ್ಲಾ ವಿಷಯದಲ್ಲಿಯೂ ಸಮರ್ಥರಿದ್ದೀರಿ. ನೀವೇ ಮಹಾರಾಣಾ ಆಗುವಿರಿ. ಲಲಿತನು ಮೂರ್ಖನು; ಲಲಿತನು ಸರಳನು; ಲಲಿತನು ರಣಭೀರು; ಲಲಿತನು ಬೀದಿಯ ಬಿಕಾರಿಯ ಸ್ವಭಾವದವನು. ಮಹಾರಾಣನಾಗುವುದಕ್ಕೆ ಲಲಿತನಿಗೆ ತಕ್ಕ ಗುಣಗಳೂ ಇಲ್ಲ; ಯೋಗ್ಯತೆಯಂತೂ ಇಲ್ಲವೇ ಇಲ್ಲ. ತಾವೇ ರಾಜಲಕ್ಷಣ ಸಂಪನ್ನರು; ತಾವೇ ಮಾರವಾಡದ ಮಹಾರಾಣಾ ಆಗುವುದಕ್ಕೆ ತಕ್ಕ ಪಾತ್ರರು. ಇದರ ಮೇಲೂ ಭಗವಂತನ ಇಚ್ಛೆಯೂ ಹೀಗೆಯೇ ಇರುವುದು. ಹೀಗಿರುವಲ್ಲಿ ತಾವು ಮಹಾರಾಣಾ ಆಗುವುದಕ್ಕೆ ಪ್ರಯತ್ನ ಪಡದೇ ಹೋದರೆ ಆ ದೋಷವು ತಮ್ಮದೇ ಆಗಿರುವುದು."

---

## ಹತ್ತೊಂಬತ್ತನೆಯ ವಿಲಾಸ

ಮಹಾರಾಜಸಿಂಹನು ಈ ಮಾತನ್ನು ಕೇಳಿ, ಬಲು ಹೊತ್ತು ಸುಮ್ಮನಿದ್ದ ಬಳಿಕ -ಪ್ರಿಯೇ! ನೀನು ಹೇಳುವುದೆಲ್ಲವೂ ನಿಜವು. ಲಲಿತನು ಇನ್ನೂ ಬದುಕಿರುವಲ್ಲಿ, ನಾನು ಮಹಾರಾಣನಾಗಲು ಸಂಭವವೆಲ್ಲಿಯದು? ಎಂದುಸುರಿದನು.

ಕಮಲಿನಿ—ಸಾಯುವುದು ಎಷ್ಟು ಹೊತ್ತಿನ ಕೆಲಸ.

ಮಹಾ—ಜೀವಮಾನವು ಅಶಾಶ್ವತವೆಂದು ನಾನೂ ಬಲ್ಲೆನು. ಲಲಿತನು ಇನ್ನೂ ಹುಡುಗನಾಗಿರುವುದರಿಂದ, ಅವನು ಈಗಾಗಲೇ ಸಾಯುವುದೆಂದರೇನು? ಈಗ ನಾವು ಈ ಆಶೆಯನ್ನಿಟ್ಟುಕೊಂಡಿರುವುದು ಪ್ರಯೋಜನಕಾರಿಯಲ್ಲವೆಂದು ತೋರುವುದು.

ಕಮಲಿನಿ—(ಸಿಂಹಿಯಂತೆ ರೇಗಿದವಳಾಗಿ) ನಾಥ! ತಾವು ಪರಾಕ್ರಮ ಶಾಲಿಗಳೆಂದು ನಾನು ಕೇಳಿ ಬಲ್ಲೆನು. ತಾವು ಮುಂದಣ ಮಾರ್ಗವನ್ನು ನಿಷ್ಕಂಟಕವನ್ನಾಗಿ ಮಾಡಿಕೊಂಡು ಇಷ್ಟಾರ್ಥವನ್ನು ಸಾಧಿಸಿಕೊಳ್ಳತಕ್ಕವರೆಂದು ನಾನು ತಿಳಿದುಕೊಂಡಿದ್ದೆನು. ಲೋಕದಲ್ಲಿ ಸಿಂಹಾಸನಾಧಿಪತ್ಯವನ್ನು ಪಡೆದುಕೊಳ್ಳುವುದಕ್ಕಾಗಿ ಎರಡು ಎಂತೆಂತಹ

ಕೆಲಸಗಳನ್ನು ಮಾಡಿರುವರೆಂಬುದನ್ನು ಚರಿತ್ರೆಗಳಿಂದಲೂ, ಮಾಡುತ್ತಿರುವುದನ್ನು ಕಣ್ಣಾರೆ ನೋಡಿಯೂ ತಿಳಿದುಕೊಂಡಿರಬಹುದು. ತಮ್ಮ ನಡೆನುಡಿಗಳನ್ನು ನೋಡಿದರೆ, ತಮ್ಮಂತಹ ಹೇಡಿಗಳು ಮತ್ತಾರೂ ಇಲ್ಲವೆಂದು ತೋರುವುದು.

ಮಹಾ—(ಖಿನ್ನನಾಗಿ) ಪ್ರಿಯೆ! ನಿನ್ನ ಮಾತನ್ನು ಕೇಳಿದರೆ, ನನ್ನ ಪ್ರಾಣವೇ ಹಾರಿ ಹೋದಂತಾಗುವುದು. ಪ್ರಾಣಪ್ರಿಯೆ! ನನಗೆ ಮಟ್ಟಿಗೆ ಇಂತಹ ದುರಾಶೆಯನ್ನು ಹುಟ್ಟಿಸಬೇಡ. ದುರಾಶೆಯಿಂದ ನಾವು ಏನನ್ನೋ ಮಾಡುವುದಕ್ಕೆ ಹೋಗಿ ಏನನ್ನೋ ಮಾಡಿಬಿಡುವೆವು.

ಕಮಲಿನಿ—ಹಾಗೆಂದರೇನು, ನಾಥ? ತಾವು ಹೀಗೆ ಭಯಪಡಲು ಕಾರಣವೇನಿರುವುದು? ನಾವು ಮಹಾರಾಜಾ ಆಗಬೇಕಾದುದು ದೈವೇಚ್ಛೆ. ದೈವೇಚ್ಛೆಯನ್ನು ಪಾಲಿಸುವುದು ತಮ್ಮ ಕರ್ತವ್ಯವಲ್ಲವೇ? ಪ್ರಭೂ! ತಾವು ನನ್ನನ್ನು ಬಗೆಬಗೆಯಾಗಿ ಪ್ರೀತಿಸೋಣವಾಗುತ್ತಿದೆ; ಹಾಗೂ ನನ್ನ ಮನೋರಥಗಳನ್ನು ಸಫಲಗೊಳಿಸೋಣವಾಗುತ್ತಿದೆ. ಇಷ್ಟಾದರೂ ನಾನು ತಮ್ಮ ಕಣ್ಣೆದಿರಿನಲ್ಲಿ ಮಹಾರಾಣಿಯಾಗಿ ಬಾಳಬೇಕೆಂದಿರುವುದು ತಮಗೆ ಇಷ್ಟವಾಗಿದ್ದಂತೆ ಕಂಡು ಬರುತ್ತಿಲ್ಲ. ಇದೇ ಅಲ್ಲವೇ ತಮ್ಮ ಪ್ರೀತಿಯ ಫಲವು?

ಮಹಾರಾಜಸಿಂಹನು ತನ್ನ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಮಗುವಿನಂತೆ ಅಳುತ್ತಾ—ಪ್ರಿಯೆ! ನನಗೆ ಮಟ್ಟಿಗೆ ಇಂತಹ ದುರಾಶೆಯನ್ನು ಹುಟ್ಟಿಸಬೇಡ, ಕಂಡೆಯಾ? ಎಂದನು.

ಕಮಲಿನಿ—(ಕೋಪವನ್ನು ನಟಿಸುತ್ತಾ) ಪ್ರಿಯತಮ! ನಾನು ತಮ್ಮನ್ನು ಇಂದಿನ ವರೆಗೂ ಕಾಪುರುಷರೆಂದು ತಿಳಿದಿರಲಲ್ಲ. ಹಾಗೆ ನಾನು ತಿಳಿಯದೇ ಇದ್ದುದು ನನ್ನ ತಪ್ಪೇ ಆಗಿರುವುದು. ನಾನು ಹೇಡಿಯ ಕೈಯನ್ನು ಹಿಡಿದಿರುವುದಕ್ಕಾಗಿ ತುಂಬಾ ವ್ಯಸನಪಡುತ್ತಿರುವೆನು. ನಾನಾದರೋ ತಮ್ಮಂತಹ ಹೇಡಿಯು ಎಂದಿಗೂ ಆಗಲಾರೆನು. ಕೇಳೋಣವಾಗಲಿ; ಪ್ರಯೋಜನ ವಿರುವುದಾದರೆ, ಸದ್ಯೋಜಾತನಾದ ಮಗುವನ್ನು ಕೂಡ ಸಂಹಾರ ಮಾಡುವುದಕ್ಕೆ ನಾನು

ಆವಾಗಲೂ ಹಿಂಜರಿಯತಕ್ಕವಳಲ್ಲ. ಲಾಭವಿರುವುದಾದರೆ, ನನ್ನ ತಾಯಿ ತಂದೆಗಳ ಹೃದಯದಲ್ಲಿ ಹರಿತವಾದ ಚೂರಿಯನ್ನಾದರೂ ನಟ್ಟುಬಿಡುವೆನು. ಗಂಡಸಾಗಿ ಹುಟ್ಟಿ ಬದುಕುವುದಕ್ಕೆ ದಾರಿಯನ್ನು ಅರಿಯದ ಮೇಲೆ, ಗಂಡಸಿನ ಬಾಳು ಅದೆಂತಹ ಬಾಳೋ ದೇವರೊಬ್ಬನೇ ಬಲ್ಲನು.

ಕಮಲಿನಿಯು ಹೀಗೆ ಹೇಳಿ ಗಂಡನ ಬಳಿಯಲ್ಲಿ ಕುಳಿತಿರಲು ಇಷ್ಟವಿಲ್ಲದವಳಾಗಿ ದೂರವಾಗಿ ಹೊರಟು ಹೋಗುವುದಕ್ಕೆಂದು ಎದ್ದು ನಿಂತಳು. ಮಹಾರಾಜಸಿಂಹನು ಹೆದರಿದ ಮಗುವಿನಂತಾಗಿ ತನ್ನ ಹೆಂಡಿತಿಯ ಸೀರೆಯ ಸೆರಗನ್ನು ಹಿಡಿದುಕೊಂಡನು. ಕಮಲಿನಿಯು ಮುಖವನ್ನು ಸೊಟ್ಟಗೆ ಮಾಡಿಕೊಂಡು—ನನ್ನ ಸೆರಗನ್ನು ಬಿಡಿರಿ. ನಿಮ್ಮ ಪ್ರೀತಿಯೂ ಸಾಕು; ನಿಮ್ಮ ಸಹವಾಸವೂ ಸಾಕು. ನಾನು ಎಲ್ಲಿಗಾದರೂ ಹೋಗಿ ಆತ್ಮಹತ್ಯೆಯನ್ನಾದರೂ ಮಾಡಿಕೊಳ್ಳುವೆನು. ಹೇಡಿಯಾದ ಗಂಡನೊಡನೆ ಬಾಳುವುದಕ್ಕಿಂತಲೂ ಸಾಯುವುದು ಎಷ್ಟೋ ಮೇಲು, ಎಂದು ಗಟ್ಟಿಯಾಗಿ ಮಾತನಾಡಿದಳು. ಮಹಾರಾಜಸಿಂಹನು ಎದ್ದು ನಿಂತುಕೊಂಡು—ಪ್ರಿಯೆ! ಕೋಪ ಮಾಡಬೇಡ. ನಾನು ಕಾಪುರುಷನಿಗಿಂತಲೂ ಅಧಮನೆಂಬುದು ಸತ್ಯವಾದ ಮಾತು. ಹೆಂಡಿತಿಯ ಬಯಕೆಯನ್ನು ನಡೆಯಿಸಿ ಕೊಡದ ಗಂಡನು ಷಂಡನೇ ಸರಿ. ನಾನು ನಿನ್ನ ವಿಷಯದಲ್ಲಿ ಉದಾಸೀನ ಭಾವವನ್ನು ತಾಳಿದುದು ಮಹಾಪರಾಧವಾದುದು, ಎಂದನು.

ಕಮಲಿನಿ—ಯೋಗ್ಯತೆಗೆ ತಕ್ಕ ಹಾಗೆಯೇ ಮಾತು ಹೊರಡುವುದು. ಇದರಲ್ಲಿ ತಮ್ಮ ದೋಷ ತಾನೇ ಏನಿರುವುದು?

ಮಹಾ—ಪ್ರಿಯೆ! ನಾನು ಮಾಡಬೇಕಾದುದೇನು? ಈಗಲಾದರೂ ಸರಿಯಾಗಿ ಬುದ್ಧಿಗಲಿಸು.

ಕಮಲಿನಿ—ವಿವೇಕಿಗಳಿಗೆ ಹೇಳಬಹುದು; ಅವಿವೇಕಿಗಳಿಗೆ ಹೇಳುವುದು ಹೇಗೆ? ತಾವು ನನ್ನ ಮಾತನ್ನು ಕೇಳುವ ಹಾಗೂ ಇಲ್ಲ;

ನಾನು ತಮ್ಮಂತಹ ರಣಧೀರರಿಗೆ ಹೇಳುವ ಹಾಗೂ ಇಲ್ಲ. ತಮಗೆ ತೋರಿ ಬಂದಂತೆ ಮಾಡಬಹುದು.

ಮಹಾ—ಕಮಲಿನಿ! ನಾನು ನಿನ್ನ ಮಾತ ಕೇಳದೆ, ಮತ್ತಾರ ಮಾತ ಕೇಳಲಿ?

ಕಮಲಿನಿ—ನನ್ನ ಮಾತನ್ನು ಕೇಳುವಿರಾ?

ಮಹಾ—ಕೇಳುವೆನು.

ಕಮಲಿನಿ—ಇಂದು ಲಲಿತಸಿಂಹನು ನಮ್ಮ ಮನೆಗೆ ಆಹೂತನಾಗಿರುವನು. ತಾವು ಅನಾಯಾಸವಾಗಿ ಮಾರ್ಗವನ್ನು ನಿಷ್ಕಂಟಕವನ್ನಾಗಿ ಮಾಡಿಕೊಳ್ಳಬಹುದು. ಇದಕ್ಕಿಂತಲೂ ಒಳ್ಳೆಯ ಸಮಯವು ಮತ್ತಾವಾಗಲೂ ದೊರೆಯಲಾರದು.

ಮಹಾ—(ಹೆದರಿದವನಾಗಿ) ಪ್ರಿಯೆ! ನಿಜವಾಗಿಯೂ ನಿನ್ನ ಹೃದಯವು ಪಾಷಾಣದಿಂದ ನಿರ್ಮಿತವಾದುದು. ಇದನ್ನು ಭಾವಿಸಿ ದೊಡನೆಯೇ ನನ್ನ ಎದೆ ನಡುಗುವುದು.

ಕಮಲಿನಿ—ತಮ್ಮ ಎದೆಯು ನಡುಗುವುದಾದರೆ, ತಾವು ಈ ಕೆಲಸದಲ್ಲಿ ಮುಂದುವರಿಯಲಾಗದು. ಆರ ಹೃದಯವು ಮೃದುವಾದುದೋ, ಅವರು ಮಾರವಾಡದ ಮಹಾರಾಣಾ ಎನ್ನಿಸಿಕೊಳ್ಳುವುದಕ್ಕೆ ಅನರ್ಹರು. ಅಯೋಗ್ಯರನ್ನೂ ಅಶಕ್ತರನ್ನೂ ಉತ್ತೇಜನ ಪಡಿಸುವುದು ಅನರ್ಥ ಹೇತುವು. ನಾನು ಇದನ್ನು ಅರಿಯದೆಯೇ ಇಷ್ಟು ದೂರ ಮಾತನಾಡಿದುದಕ್ಕಾಗಿ ತಮ್ಮ ಕ್ಷಮೆಯನ್ನು ಬೇಡುವವಳಾಗಿರುವೆನು.

ಮಹಾ—ಪ್ರಿಯೆ! ಇಂದು ಸಂತೋಷದ ದಿನ; ಲಲಿತನು ನಮ್ಮ ಮನೆಗೆ ಅತಿಥಿಯಾಗಿ ಬರುವನು.

ಕಮಲಿನಿ—ಈ ಕೆಲಸದಲ್ಲಿ ನ್ಯಾಯಾನ್ಯಾಯ ವಿಮರ್ಶೆಯು ಕೂಡದು. ಯುದ್ಧದಲ್ಲಿಯೂ ಸೋದರ ಮಾವನೆಂದರೇನು; ತಾವು ಬ್ರಾಹ್ಮಣನಂತೆ ಮಾತನಾಡುವುದು ನನಗೆ ಸರಿಬೀಳುವುದಿಲ್ಲ.

ಮಹಾ—ಪ್ರಿಯೆ! ನಿನ್ನ ಇಷ್ಟದಂತೆಯೇ ನೆರವೇರಿಸುವೆನು. ನಾನೇ ಈ ಕೆಲಸವನ್ನು ಮಾಡುವೆನು. ಇಂದಿನಿಂದ ನಾನು ರಾಕ್ಷಸನು.

ಕಮಲಿನಿ—ಪ್ರಾಣೇಶ್ವರ! ಇಂದಿನಿಂದ ತಾವು ಮಹಾರಾಣಾ.

---

## ಇಪ್ಪತ್ತನೆಯ ವಿಲಾಸ

ಕುಮುದಿನಿಯು ತನ್ನ ಕೋಣೆಯಲ್ಲಿ ಕುಳಿತುಕೊಂಡು ಅತ್ತೇ ಅಳುವಳು. ಅತ್ತು ಅತ್ತು ಆಕೆಯ ಕಣ್ಣುಗಳು ರಕ್ತದಂತೆ ಕೆಂಪಾಗಿ ಹೋಗಿರುವುವು. ಲಲಿತಸಿಂಹನು ಇದನ್ನು ನೋಡಿ—ಪ್ರಿಯೆ! ಅಳಬೇಡ; ನೀನು ಅಳುವುದರಿಂದ ನನ್ನ ಹೃದಯವು ಒಡೆದು ಹೋಗುವುದು. ಅಳಬೇಡ; ಅಳಬೇಡ. ನೀನು ಅಳುವುದಾದರೆ ನಾನೂ ಅಳಬೇಕಾಗುವುದು. ಕುಮುದಿನಿ! ಅತ್ತು ಅತ್ತು ಕಣ್ಣುಗಳನ್ನು ಅದೇಕೆ ಕಳೆದುಕೊಳ್ಳುವೆ? ಇಂತಹ ಸಂತೋಷದ ಕಾಲದಲ್ಲಿ ನೀನು ಅಳಬಾರದು. ಅಳುವುದರಿಂದ ಅನಿಷ್ಟವುಂಟಾದರೂ ಉಂಟಾಗಬಹುದು. ನಾವು ಮತ್ತೊಬ್ಬರಿಗೆ ಅನಿಷ್ಟವನ್ನು ಆವಾಗಲೂ ಕೋರಬಾರದು. ಪ್ರಿಯೆ! ಇನ್ನಾದರೂ ಅಳುವುದನ್ನು ಬಿಡು. ಎಂದು ಬಗೆಬಗೆಯಾಗಿ ಸಮಾಧಾನೋಕ್ತಿಗಳನ್ನಾಡಿದನು. ಇಷ್ಟಾದರೂ ಏನೂ ಪ್ರಯೋಜನವಾಗಲಿಲ್ಲ. ಲಲಿತಸಿಂಹನು ಸಮಾಧಾನ ಪಡಿಸಿದ ಹಾಗೆಲ್ಲಾ ಕುಮುದಿನಿಯು ಮೇಲೆ ಮೇಲೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಆಕೆಯ ಕಣ್ಣುಗಳಿಂದ ಕಂಬನಿಯು ಧಾರಾಕಾರವಾಗಿ ಹರಿದು ಉಟ್ಟಿದ್ದ ಸೀರೆಯನ್ನು ತೋಯಿಸಲಾರಂಭಿಸಿತು.

ಇಂದು ಮಾರವಾಡದ ರಾಜವರ್ಗದವರೂ ಪ್ರಜಾವರ್ಗದವರೂ ಆನಂದಸಾಗರದಲ್ಲಿ ತೇಲಿ ಮುಳುಗುತ್ತಿರುವರು. ಎಲ್ಲರೂ ಮಹಾರಾಜಸಿಂಹನ ಅರಮನೆಯನ್ನು ಕುರಿತು ಗುಂಪುಗುಂಪಾಗಿ ತೆರಳುತ್ತಿರುವರು. ಮಹಾರಾಣಾ ಅಮರಸಿಂಹನೂ ರಾಜಚಿಹ್ನೆಗಳಿಂದ ಕೂಡಿದವನಾಗಿ ಹೊರಡುವುದಕ್ಕೆ ಸಿದ್ಧನಾದನು. ಮಹಾರಾಜನೊಡನೆ ಯುವರಾಜನೂ ಹೊರಡುವುದಾಗಿ ಏರ್ಪಾಡಿದ್ದಿತು, ಆದರೆ ಅದು ನೆರವೇರು

ವುದಕ್ಕೆ ಸಾಧ್ಯವಾಗಲಿಲ್ಲ. ಕಾರಣವೇನೆಂದರೆ—ಕುಮುದಿನಿಯು ಲಲಿತಸಿಂಹನಿಗೆ ಆ ಮಹೋತ್ಸವಕ್ಕೆ ಹೋಗಕೂಡದೆಂದು ಅಡ್ಡಗಿಸಿ ನಿಂತು ಬಿಟ್ಟಿದ್ದಳು.

ಕುಮುದಿನಿಯು ಎಲ್ಲರೂ ಅಲ್ಲಿಗೆ ಹೋಗುವ ಸಮಾಚಾರವನ್ನು ಕೇಳಿ ಗಳಗಳನೆ ಅಳುತ್ತಾ ಲಲಿತಸಿಂಹನ ಕುತ್ತಿಗೆಯಲ್ಲಿ ತನ್ನ ಕೈಗಳನ್ನು ಹಾಕಿಕೊಂಡು—ನಾಥ! ಈ ದಿವಸ ತಾವು ಅಲ್ಲಿಗೆ ಹೋಗಕೂಡದು. ಚರಣದಾಸಿಯಾದ ನನ್ನ ಈ ಪ್ರಾರ್ಥನೆಯೊಂದನ್ನಾದರೂ ನಡೆಯಿಸಿ ಕೊಡೋಣವಾಗಲಿ. ತಾವು ಮಟ್ಟಿಗೆ ಅಲ್ಲಿಗೆ ಹೋಗ ಕೂಡದು, ಎಂದು ತೆರತೆರನಾಗಿ ಅಂಗಲಾಚಿದಳು. ಕೊಂಚ ಹೊತ್ತಿನ ಮೇಲೆ ಅತ್ತು ಅತ್ತು ಬೇಸತ್ತು ಹೋಗಿದ್ದ ಕುಮುದಿನಿಯು ಗಂಡನನ್ನು ಕಂಠದಲ್ಲಿ ಆಲಿಂಗಿಸಿಕೊಂಡೇ ನಿದ್ರಿಸಿ ಬಿಟ್ಟಳು. ಲಲಿತಸಿಂಹನು ತನ್ನೊಳಗೆ ತಾನೇ ಆಲೋಚಿಸಿದುದೇನೆಂದರೆ :—

"ಈ ಹುಡುಗಿಯು ಇಂದು ಹೀಗೇಕೆ ಮಾಡುವಳು? ಇಂತಹ ಸಂತೋಷದ ಸಮಾರಂಭದಲ್ಲಿ ಈಕೆಯು ಅಳುವುದಕ್ಕಾದರೂ ಕಾರಣವೇನಿರುವುದು? ಮಹಾರಾಜಸಿಂಹನು ರಾಜನಾದನೆಂದು ಈಕೆಗೆ ಸಂಕಟವೇ? ಶಿವಶಿವಾ! ಈಕೆಯು ಎಂದಿಗೂ ಹೊಟ್ಟೆಯ ಕಿಚ್ಚಿನ ಸ್ವಭಾವದವಳಲ್ಲ. ಹಾಗಾದರೆ ಈಕೆಯು ಬಿಕ್ಕಿ ಬಿಕ್ಕಿ ಅಳಲು ಕಾರಣವೇನು? ಈಕೆಯು ನನಗೆ ಆವ ಕಾರಣವನ್ನೂ ತಿಳಿಸದೇ ಅಳುತ್ತಿರುವಳು. ನಾನು ಈಕೆಯ ಮಾತಿನಂತೆ ಹೊರಡದೇ ಇರಲು ಸಾಧ್ಯವೇ? ನಾನು ಹೋಗದೇ ಹೋದರೆ, ಮಹಾರಾಜಸಿಂಹನು ನನ್ನ ವಿಷಯದಲ್ಲಿ ವಿಪರೀತವಾದ ಭಾವನೆಯನ್ನೇ ಇಟ್ಟುಕೊಂಡು ಮುಂದೆ ದ್ವೇಷವನ್ನು ಸಾಧಿಸುವುದಕ್ಕೂ ಸಾಕು. ನಾನು ಹೋಗದೇ ಹೋದರೆ ನಮ್ಮ ಮಹಾರಾಜಾ ಸಾಹೇಬರು ಏನೆಂದಾರು? ಪ್ರಜೆಗಳು ನನ್ನನ್ನು ಮನಬಂದ ತೆರದಿ ಹೀಯಾಳಿಸುವುದಿಲ್ಲವೇ? ನಾನೊಬ್ಬನು ಹೋಗದೆಯೇ ಇರುವುದರಿಂದ, ಇಷ್ಟೆಲ್ಲಾ ಅನರ್ಥಗಳಿಗೆ ಕಾರಣವಾಗುವುದರಿಂದ, ನಾನು ಹೆಂಡತಿಯ ಮಾತಿಗೆ ವಿರೋಧವಾಗಿಯಾದರೂ ಅಲ್ಲಗೆ ಹೋಗಲೇ

ಬೇಕು. ಇದು ಹೋಗಬಾರದ ಕಾಲವಲ್ಲ. ಅದು ಕಾರಣ ನಾನು ನನ್ನ ಹೆಂಡಿತಿಗೆ ತಿಳಿಯದ ಹಾಗೆ ಹೊರಟೇ ಹೋಗುವೆನು.''

ಲಲಿತಸಿಂಹನು ಈ ರೀತಿಯಾಗಿ ಚಿಂತಿಸಿದ ಬಳಿಕ ನಿದ್ರಿಸುತ್ತಿರುವ ತನ್ನ ಹೆಂಡಿತಿಯ ಬಂಧನದಿಂದ ಮುಕ್ತನಾಗಿ ಶಬ್ದ ಮಾಡದೆಯೇ ಹೊರಗೆ ಬಂದುಬಿಟ್ಟನು. ಮತ್ತೆ ಅಲ್ಲಿರುವುದಾದರೆ, ಹೆಂಡಿತಿಯು ನಿಷೇಧಿಸುವಳೆಂದು ತಿಳಿದು ಲಲಿತಸಿಂಹನು ತನ್ನ ಕುದುರೆಯನ್ನೇರಿ ಪರಿವಾರದೊಡನೆ ಮಹಾರಾಜಸಿಂಹನ ಅರಮನೆಗೆ ಅಭಿಮುಖವಾಗಿ ತೆರಳಿದನು.

ಮಹಾರಾಜಸಿಂಹನ ಅರಮನೆಯಲ್ಲಿ ಸಂತೋಷ ಮಹೋತ್ಸವಕ್ಕೆ ಪ್ರಾರಂಭವಾಗಿರುವುದು. ವಾದ್ಯಗಳು ಎಲ್ಲೆಲ್ಲಿಯೂ ಘೋರ್ಗರೆಯುತ್ತಿರುವುವು. ಅರಮನೆಯು ಚಿತ್ರವಿಚಿತ್ರವಾದ ತೋರಣಗಳಿಂದ ಅಲಂಕರಿಸಲ್ಪಟ್ಟಿರುವುದು. ಜನರ ಸಂದಣಿಯಂತೂ ಹೇಳಲೇ ಕೆಲಸವಿಲ್ಲ. ಬರುವವರು ಬರುತ್ತಿರುವರು ; ಹೋಗುವವರು ಹೋಗುತ್ತಿರುವರು. ಆ ಸಂತೋಷದ ಸಮಾರಂಭದಲ್ಲಿ ಒಬ್ಬರನ್ನೊಬ್ಬರು ಮಾತನಾಡಿಸುವ ಹಾಗೆಯೇ ಇರಲಿಲ್ಲ.

ಲಲಿತಸಿಂಹನು ತನ್ನ ಮಿತ್ರಮಂಡಲಿಯೊಡನೆ ಕುದುರೆಯನ್ನೇರಿಕೊಂಡು ಅರಮನೆಯ ಬಳಿಗೆ ಬಂದನು. ಆ ಸಮಯಕ್ಕೆ ಸರಿಯಾಗಿ ಹುಚ್ಚಿಯೊಬ್ಬಳು ಲಲಿತಸಿಂಹನ ಕುದುರೆಯ ಇದಿರಿನಲ್ಲಿ ಬಂದು ನಿಂತಳು. ಸೇವಕರು ಆಕೆಯನ್ನು ದೂರ ಸರಿದು ಹೋಗುವಂತೆ ತಿಳಿಸಿದರು. ಹುಚ್ಚಿಯು ಆ ಮಾತನ್ನು ಕಿವಿಯ ಮೇಲೆ ಹಾಕಿಕೊಂಡಂತೆ ಕಂಡು ಬರಲಿಲ್ಲ. ಬಳಿಕ ಸೇವಕರು ಆಕೆಯನ್ನು ಹಿಡಿದು ದೂರವಾಗಿ ತಳ್ಳಿಬಿಡುವುದರಲ್ಲಿದ್ದರು. ಲಲಿತಸಿಂಹನು ಹುಚ್ಚಿಯಾಗಿರುವ ಹೆಂಗುಸಿನ ಮೇಲೆ ಕೈಮಾಡುವುದು ತರವಲ್ಲವೆಂದು ಸೇವಕರಿಗೆ ದೂರ ಸರಿಯುವಂತೆ ಅಪ್ಪಣೆಮಾಡಿದನು. ಕೂಡಲೆಯೇ ಅವರು ದೂರ ಸರಿದು ನಿಲ್ಲಲು, ಲಲಿತಸಿಂಹನು ಕುದುರೆಯಿಂದಿಳಿದು ಹುಚ್ಚಿಯ ಬಳಿಗೆ ಬಂದು ನಿಂತನು. ಇವನನ್ನು ನೋಡಿ ಹುಚ್ಚಿಯು ಕಿಲಕಿಲನೆ ನಕ್ಕಳು. ಲಲಿತ

ಸಿಂಹನು ಹುಚ್ಚಿಯನ್ನು ಕುರಿತು—ತಾಯೆ! ನನ್ನ ಜತೆಯಲ್ಲಿ ಬಾ. ನಿನ್ನನ್ನು ಆರೂ ಹುಚ್ಚಿಯೆಂದು ಕರೆಯದ ಹಾಗೆ ನಾನು ನೋಡಿಕೊಳ್ಳುವೆನು. ಸಭಾಮಂದಿರದಲ್ಲಿ ನಡೆಯುವ ಸಂತೋಷ ಸಮಾರಂಭದಲ್ಲಿ ನೀನೂ ಭಾಗವನ್ನು ತೆಗೆದುಕೊಳ್ಳುವೆ, ನಡೆ, ಎಂದು ಗೌರವದಿಂದ ಮಾತನಾಡಿಸಿದನು. ಹುಚ್ಚಿಯು ಆ ಮಾತಿಗೆ ಆವ ಪ್ರತ್ಯುತ್ತರವನ್ನೂ ಕೊಡದೆ ಮತ್ತೆ ಕಿಲಕಿಲನೆ ಗಟ್ಟಿಯಾಗಿ ನಕ್ಕಳು. ಇದನ್ನು ನೋಡಿ ಲಲಿತಸಿಂಹನು ಲಜ್ಜಿತನಾಗಿ ಪರಿವಾರದವರ ಕಡೆ ತಿರುಗಿ—ಈಕೆಗೆ ಆವ ತೊಂದರೆಯನ್ನೂ ಮಾಡದೆ ಹೊಟ್ಟೆಯ ತುಂಬಾ ಭೋಜನ ಮಾಡಿಸಿ ಕಳುಹಿಸಿರಿ, ಎಂದು ಹೇಳುತ್ತಿರುವಷ್ಟರಲ್ಲಿಯೇ ಹುಚ್ಚಿಯು ಲಲಿತ ಸಿಂಹನನ್ನು ನೋಡಿ ಗಂಭೀರ ಭಾವದಿಂದ—ನಾನಾರು, ಬಲ್ಲೆಯಾ? ಎಂದಳು.

ಲಲಿತ—ನೀನಾರೆಂಬುದು ಗೊತ್ತಿಲ್ಲ, ತಾಯೆ!

ಹುಚ್ಚಿ—ನಾನೇ ಮಾರವಾಡದ ಮಹಾರಾಣಿ.

ಈ ಮಾತನ್ನು ಕೇಳಿದ ಕೂಡಲೆ ಎಲ್ಲರೂ ಹುಚ್ಚಿಯನ್ನು ಹಾಸ್ಯ ಮಾಡುವುದಕ್ಕೆ ತೊಡಗಿದರು. ಲಲಿತಸಿಂಹನಾದರೋ ಹುಚ್ಚರನ್ನು ಇದಿರು ಹಾಕಿಕೊಳ್ಳುವುದು ಮಾನಕ್ಕೆ ಕಡಮೆಯೆಂದು ತಿಳಿದು ಆವ ಮಾತನ್ನೂ ಆಡದೆ ಸಭಾಮಂದಿರವನ್ನು ಪ್ರವೇಶ ಮಾಡಿದನು.

ಲಲಿತಸಿಂಹನು ಹೊರಟು ಹೋದುದನ್ನು ನೋಡಿ ಹುಚ್ಚಿಯು ಗೊಳೋ ಎಂದು ಗಟ್ಟಿಯಾಗಿ ಅತ್ತುಬಿಟ್ಟಳು. ಆಕೆಯ ಕರುಣಾಕ್ರಂದನವು ಲಲಿತಸಿಂಹನ ಮರ್ಮವನ್ನು ಭೇದಿಸಿತು. ಬಳಿಕ ಮುಂದಕ್ಕೆ ತೆರಳಲು ಕಾಲೇ ಬರದೆ, ಲಲಿತಸಿಂಹನು ಆಕೆಯನ್ನೇ ನೋಡುತ್ತಾ ನಿಂತುಬಿಟ್ಟನು. ಹುಚ್ಚಿಯು ಲಲಿತಸಿಂಹನನ್ನು ನೋಡಿ ಗಟ್ಟಿಯಾಗಿ—ಹೋಗಬೇಡ, ಹೋಗಬೇಡ, ಹೋಗಬೇಡ, ಎಂದು ಅರಚಿಕೊಂಡಳು. ಹೀಗೆ ಅರಚಿದ ಬಳಿಕ ಹುಚ್ಚಿಯು ಕುಣಿಯುತ್ತಾ ಸಭಾಮಂದಿರದ ಕಡೆಗೆ ನುಗ್ಗಿದಳು. ಎಲ್ಲರೂ ಆಕೆಗೆ ದಾರಿಯನ್ನು ಬಿಟ್ಟುಕೊಟ್ಟರು. ಹುಚ್ಚಿಯು ಮತ್ತೆ ಲಲಿತಸಿಂಹನ ಬಳಿಯಲ್ಲಿ ಬಂದು ನಿಂತು—ಹೋಗ

ಬೇಡ, ಹೋಗಬೇಡ, ಹೋಗಬೇಡ, ಎಂದು ಮೂರು ಸಲ ಚೀತ್ಕಾರ ಧ್ವನಿಯನ್ನು ಮಾಡಿದಳು. ಇತರರು ಆ ಹುಚ್ಚಿಗೆ ಏನ ಮಾಡುವುದಕ್ಕೂ ಯತ್ನವಿಲ್ಲದವರಾಗಿ ಸುಮ್ಮನೆ ನೋಡುತ್ತಾ ಬೆರಗಾಗಿ ನಿಂತುಬಿಟ್ಟರು. ಲಲಿತಸಿಂಹನು ಹಾಗೆಯೇ ನಿಂತುಕೊಂಡು ಚಿಂತಿಸಿದನದೇನೆಂದರೆ:—

"ಮನೆಯಿಂದ ಹೊರಡುವಾಗ ನನ್ನ ಹೆಂಡಿತಿಯು ಹೋಗಬೇಡವೆಂದು ಹೇಳಿ ಅತ್ತು ಅತ್ತು ಅಪಶಕುನವನ್ನು ತೋರಿಸಿದಳು. ನಾನು ಅದನ್ನು ಲೆಕ್ಕಿಸದೆ ಹೊರಟು ಬಂದರೆ, ಇಲ್ಲಿಯೂ ಈ ಹುಚ್ಚಿಯು ಹೋಗಬೇಡವೆಂದು ಅಪಶಕುನವನ್ನೇ ನುಡಿಯುತ್ತಿರುವಳು. ಇದನ್ನು ನೋಡಿದರೆ ನನಗೆ ಇಂದು ಭಯಂಕರವಾದ ವಿಪತ್ತು ಕಾದಿರುವುದೆಂದು ತೋರಿಬರುತ್ತಿರುವುದು. ಅಪಶಕುನಗಳು ಎಂದಿಗೂ ಸುಳ್ಳಾಗ ತಕ್ಕುವುಗಳಲ್ಲ."

ಲಲಿತಸಿಂಹನು ಹೀಗೆ ಚಿಂತಿಸಿದ ಬಳಿಕ ಪರಿವಾರದವರನ್ನು ನೋಡಿ—ಈ ಹುಚ್ಚಿ ಯಾರು? ಎಂದು ಕೇಳಲಾಗಿ, ಪರಿವಾರದವರು ಅದಕ್ಕೆ ಪ್ರತ್ಯುತ್ತರವಾಗಿ—ಮಹಾ ಸ್ವಾಮಿಾ! ಈಕೆಯು ಭಿಲ್ಲರ ಕಾತ್ಯಾಯನಿಯೆಂಬ ಹುಚ್ಚಿಯು, ಎಂದು ನುಡಿದರು.

## ಇಪ್ಪತ್ತೊಂದನೆಯ ವಿಲಾಸ

ಕಾತ್ಯಾಯನಿಯು ಹಿಂದೆ ಹೇಳಿದ ರೀತಿಯಲ್ಲಿ ಕೂಗಿಕೊಂಡು ಆವುದೋ ಗುಂಪಿನಲ್ಲಿ ಸೇರಿಹೋದಳು. ಲಲಿತಸಿಂಹನು ಕಾತ್ಯಾಯನಿಯ ವಿಷಯವನ್ನೇ ಅರಿಯದವನಾಗಿ ತನ್ನ ಪರಿವಾರದವರನ್ನು ಕುರಿತು—ಭಿಲ್ಲರ ಕಾತ್ಯಾಯನಿ ಯೆಂಬುವಳಾರು? ಎಂದು ಪ್ರಶ್ನೆ ಮಾಡಿದನು.

ಪರಿವಾರ—ಮಹಾ ಪ್ರಭೂ! ಈ ಹುಚ್ಚಿಯು ಬಹುತರವಾಗಿ ಅಹಮ್ಮದಾಬಾದಿನ ಬಳಿಯಲ್ಲಿಯೇ ವಾಸಮಾಡಿಕೊಂಡಿರುವಳು. ನಮ್ಮ ಮಹಾರಾಣಾ ಸಾಹೇಬರ ಅಪ್ಪಣೆಯನ್ನು ಭಿಲ್ಲರಿಗೆ ತಿಳಿಸು

ವುದಕ್ಕಾಗಿ ಹೋಗಿದ್ದಾಗ, ನಾವು ಈಕೆಯನ್ನು ಆ ಕಾಳಿಕಾಂಬಿಕೆಯ ಮಂದಿರದ ಬಳಿಯಲ್ಲಿ ಆಗಿಂದಾಗ ನೋಡಿದ್ದೆವು. ಈಕೆಯನ್ನು ಭಿಲ್ಲರೆಲ್ಲರೂ ಮಾನಮರ್ಯಾದೆಗಳಿಂದ ಗೌರವಿಸುತ್ತಿದ್ದರು. ಈಕೆಯು ದಿವ್ಯವಾಗಿ ಹಾಡುವಳು.

ಲಲಿತ.—(ಚಿಂತಿಸಿ) ಹಾಗಾದರೆ ನಾನು ಈಕೆಯನ್ನು ಮತ್ತೊಂದು ಸಲ ನೋಡಬೇಕೆಂದಿರುವೆನು. ಸಾಧ್ಯವಾದರೆ ಅವಳನ್ನು ಇಲ್ಲಿಗೆ ಕರೆತನ್ನಿರಿ.

ಈ ಮಾತನ್ನು ಕೇಳಿದ ಕೂಡಲೆ, ಪರಿವಾರದವರು ಹುಚ್ಚಿಯನ್ನು ಕರೆತರಲು ಹೊರಟರು. ಅಷ್ಟುಹೊತ್ತಿಗೆ ಹುಚ್ಚಿಯು ಸಭಾಮಂದಿರವನ್ನು ಪ್ರವೇಶಮಾಡುವುದಕ್ಕೆ ಸಿದ್ಧಳಾಗಿದ್ದಳು. ಈಕೆಗೆ ಒಳಗೆ ಪ್ರವೇಶಿಸುವುದಕ್ಕೆ ಅಸ್ಪದವನ್ನೀಯದೇ ತೊಂದರೆ ಪಡಿಸುತ್ತಿದ್ದ ಸೇವಕರಿಗೆ ಈಕೆಯು ಬಲವಾಗಿ ಪ್ರಹಾರವನ್ನು ಮಾಡಿ ಕೆಳಗೆ ಕೆಡಹಿಬಿಟ್ಟಳು. ಇದನ್ನು ಕಣ್ಣಾರೆ ನೋಡಿದ ಅನೇಕರು ಹುಚ್ಚಿಯ ಗೋಜಿಗೆ ಹೋಗುವುದು ಅಪಾಯಕರವೆಂದು ತಿಳಿದು ಆಕೆಗೆ ದಾರಿಯನ್ನು ಬಿಟ್ಟುಕೊಟ್ಟರು.

ಲಲಿತಸಿಂಹನು ಈ ದೃಶ್ಯವನ್ನು ಕಣ್ಣಿನಿಂದ ನೋಡಲಾರದವನಾಗಿ ಸಭಾಮಂದಿರವನ್ನು ಪ್ರವೇಶಮಾಡಿ ಮಹಾರಾಣಾ ಸಾಹೇಬನ ಬಳಿಯಲ್ಲಿ ಬಂದು ನಿಂತನು. ಮಹಾರಾಣನು ಗಲಭೆಗೆ ಕಾರಣವೇನೆಂದು ಕೇಳಲಾಗಿ, ಲಲಿತಸಿಂಹನು - ಪ್ರಭೂ ! ಗಲಭೆಗೆ ಕಾರಣವನ್ನು ಅರಿಯುವುದಕ್ಕಾಗಿ ಜನರನ್ನು ಕಳುಹಿರುವೆನು, ಎಂದು ಉತ್ತರಕೊಟ್ಟನು. ಇಷ್ಟನ್ನುವುದರೊಳಗಾಗಿ ಹುಚ್ಚಿಯು ನುಗ್ಗಿಕೊಂಡು ಸಭಾಮಂದಿರವನ್ನು ಪ್ರವೇಶ ಮಾಡಿ ಮಹಾರಾಣನ ಇದಿರಿನಲ್ಲಿ ಬಂದು ನಿಂತುಕೊಂಡು—ದೂರ ಸರಿ, ದೂರ ಸರಿ, ದೂರ ಸರಿ; ಮಾರವಾಡದ ಸಂಸ್ಥಾನಕ್ಕೆ ನಾನೇ ಮಹಾರಾಣಿ, ಮಹಾರಾಣಿ, ಮಹಾರಾಣಿ, ಎಂದು ಅಬ್ಬರಿಸಿದಳು.

ದಾರಿಹಿಡಿದು ಬರುತ್ತಿರುವಾಗ ತಟ್ಟನೆ ನಾಗರಹಾವನ್ನು ಮೆಟ್ಟಿದರೆ ಆವ ಭಯವುಂಟಾಗುವುದೋ, ತಟ್ಟನೆ ಬಾಣವು ಬಂದು ಹೃದಯ

ವನ್ನು ಭೇದಿಸಲು ಆವ ಯಾತನೆಯುಂಟಾಗುವುದೋ, ತಟ್ಟನೆ ಸಿಡಿಲು ಸಿಡಿದರೆ ಆವ ಭಾವವುಂಟಾಗುವುದೋ, ಅದೆಲ್ಲವೂ ಏಕಕಾಲದಲ್ಲಿ ಹುಚ್ಚಿಯನ್ನು ನೋಡಿದ ಕೂಡಲೆ ಮಹಾರಾಜಸಿಂಹನ ಹೃದಯದಲ್ಲಿ ಉಂಟಾಯಿತು. ಮಹಾರಾಜಸಿಂಹನು ಹುಚ್ಚಿಯನ್ನು ನೋಡಿದ ಕೂಡಲೆ ಕಂಗೆಟ್ಟವನಾಗಿ ತಟ್ಟನೆ ಎದ್ದು ನಿಂತುಕೊಂಡು ಕತ್ತಿಯನ್ನು ಒರೆಯಿಂದ ಹಿರಿದು, ಶತ್ರುವನ್ನು ಇದಿರಿನಲ್ಲಿ ಕಂಡ ಕೂಡಲೆ ಮಾನವನು ಆತ್ಮರಕ್ಷಣೆಗಾಗಿ ಏನೇನ ಮಾಡುವನೋ, ಅದೆಲ್ಲವನ್ನೂ ಮಾಡ ತೊಡಗಿದನು.

ಇದನ್ನು ಕಂಡಕೂಡಲೆ ಹುಚ್ಚಿಯೂ ಆತ್ಮರಕ್ಷಣೆಗಾಗಿ ತನ್ನ ಸೊಂಟದಿಂದ ಮಚ್ಚನ್ನು ಹೊರಗೆ ತೆಗೆದು ಮಹಾರಾಜಸಿಂಹನನ್ನು ದುರದುರನೆ ನೋಡಿದಳು. ಹುಚ್ಚಿಯ ಭಯಂಕರ ಮೂರ್ತಿಯನ್ನು ನೋಡಿ ಸಭೆಯಲ್ಲಿದ್ದವರೆಲ್ಲರೂ ಭಯದಿಂದ ನಡುಗಿಹೋದರು. ಮಹಾರಾಜಸಿಂಹನು ದಕ್ಷಿಣಾ ಪಥದಲ್ಲಿ ಮಲಗಿದ್ದಾಗ ಆವ ಭಯಂಕರವಾದ ಸ್ವಪ್ನವನ್ನು ಕಂಡು ನಡುಗಿ ಹೋಗಿದ್ದನೋ, ಇಂದು ಪ್ರತ್ಯಕ್ಷವಾಗಿ ಅದನ್ನೇ ಕಂಡುಕೊಂಡು ಹೆದರಿ ಹೆದರಿ ಬಸವಳಿದು ಬಿದ್ದುಬಿಟ್ಟನು. ಉಳಿದವರೆಲ್ಲರೂ ಹಾಯ್ ಹಾಯ್ ಎಂದು ಓಡಿಬಂದು ಮಹಾರಾಜಸಿಂಹನಿಗೆ ಶೈತ್ಯೋಪಚಾರಮಾಡಿದರು.

## ಇಪ್ಪತ್ತೆರಡನೆಯ ವಿಲಾಸ

ಮಹಾರಾಜಸಿಂಹನಿಗೆ ಕೊಂಚ ಹೊತ್ತಿನ ಮೇಲೆ ಜ್ಞಾನೋದಯವಾಯಿತು. ಕೂಡಲೆಯೇ ಆತನು ಎದ್ದು ನಿಂತುಕೊಂಡು ಮತ್ತೆ ಕತ್ತಿಯನ್ನು ಒರೆಯಿಂದ ಹೊರಗೆ ತೆಗೆದು ಝಳಪಿಸುತ್ತಾ ಹುಚ್ಚಿಯನ್ನು ಇರಿಯುವುದಕ್ಕೆ ಮುಂದೆ ಸರಿದು ಬಂದನು. ಆಗ ಸಭಾಂಗಣದಲ್ಲಿದ್ದವರೆಲ್ಲರೂ ಸ್ತ್ರೀಯ, ಅದರಲ್ಲಿಯೂ ಹುಚ್ಚಿಯ ಹತ್ಯೆಯಾದೀತೆಂಬ ಭಯದಿಂದ ಮಹಾರಾಜಸಿಂಹನನ್ನು ಅಡ್ಡಗಿಸಿ ನಿಂತರು. ಸ್ವಪ್ನದ ಮಹಾರಾಣಿಯು 'ಇದೇನು ಸರ್ವನಾಶ!' ಎಂದು ಗಟ್ಟಿಯಾಗಿ ಕೂಗಿಕೊಳ್ಳಲು, ಸಭಾಮಂದಿರದ ಎಲ್ಲೆಡೆಗಳಲ್ಲಿಯೂ ಕೋಲಾಹಲವೆದ್ದಿತು.

ಜನರ ಪ್ರಯತ್ನ ಬಲದಿಂದ ಮಹಾರಾಜಸಿಂಹನ ಕತ್ತಿಯು ಹುಚ್ಚಿಯ ಶಿರವನ್ನು ಛೇದಿಸದೆ ಹಾಗೆಯೇ ನಿಂತುಬಿಟ್ಟಿತು. ಲಲಿತ ಸಿಂಹನು ತನ್ನ ಕತ್ತಿಯನ್ನು ಹಿರಿದು ಮಹಾರಾಜಸಿಂಹನ ಇದಿರಿನಲ್ಲಿ ಬಂದು ನಿಂತುಕೊಂಡನು. ಆರಿಬ್ಬರಿಗೆ ತಂದೆ ಮಕ್ಕಳ ಸಂಬಂಧವೋ, ಆರಿಬ್ಬರು ಹಿಂದೊಂದು ದಿನ ಸಭಾಮಧ್ಯದಲ್ಲಿ ಕೇವಲವಾದ ಪ್ರೀತಿ ಯಿಂದ ಆಲಿಂಗನ ಮಾಡಿಕೊಂಡಿದ್ದರೋ, ಇಂದು ಅವರಿಬ್ಬರೂ ಸಿಂಹಾ ಸನದ ಮೇಲೆ ಕುಳಿತಿರುವ ಮಹಾರಾಣಿನ ಇದಿರಿನಲ್ಲಿ ಎಲ್ಲರ ಸಮಕ್ಷ ವಾಗಿ ಒಬ್ಬರಿಗೊಬ್ಬರು ಹೋರಾಡಲು ಸಿದ್ಧರಾಗಿ ನಿಂತಿರುವರು. ಇಬ್ಬರ ಕೈಯಲ್ಲಿಯೂ ಕತ್ತಿಗಳು ಝಣಝಣತ್ಕಾರ ಮಾಡುತ್ತಿರು ವುವು. ಈ ಸಮಯದಲ್ಲಿ ಕಾತ್ಯಾಯನಿಯು ಲಲಿತಸಿಂಹನ ಮರೆ ಹೊಕ್ಕಳು. ಲಲಿತಸಿಂಹನು ಆಕೆಯನ್ನು ಕುರಿತು—ತಾಯೆ! ನೀನು ಹೆದರಲು ಕಾರಣವೇನೂ ಇರುವುದಿಲ್ಲ, ಎಂದು ಹೇಳಿದುದಕ್ಕೆ ಪ್ರತ್ಯು ತ್ತರವಾಗಿ ಹುಚ್ಚಿಯು ಎಲ್ಲರ ಮನವೂ ಕರಗುವಂತೆ ಗಳಗಳನೆ ಅಳ ತೊಡಗಿದಳು.

ಸಂತೋಷದ ಮಧ್ಯದಲ್ಲಿ ಇಂತಹ ಅಚಾತುರ್ಯವು ನಡೆದುದ ಕ್ಕಾಗಿ ಬಂದಿದ್ದವರೆಲ್ಲರೂ ಭಯ ಶೋಕಗಳಿಂದ ಬೆರಗಾಗಿ ಹೋದರು. ಆರ ಬಾಯಲ್ಲಿಯೂ ಆವ ಮಾತೂ ಹೊರಡದೆ ಸಭೆಯು ನಿಸ್ತಬ್ಧ ವಾಗಿಬಿಟ್ಟಿತು. ಕೊಂಚ ಹೊತ್ತಿನ ಮೇಲೆ ಲಲಿತಸಿಂಹನು ಮಹಾ ರಾಜಸಿಂಹನನ್ನು ಕುರಿತು—ಚಿಕ್ಕಪ್ಪಾ! ಈ ಹುಚ್ಚಿಯು ನನ್ನ ಮರೆ ಹೊಕ್ಕಿರುವಳು. ಅದುಕಾರಣ ನಾನು ಈಕೆಗೆ ಅಭಯ ಪ್ರದಾನ ಮಾಡಿ ರುವೆನು. ಈಕೆಯು ಹುಚ್ಚುಹಿಡಿದ ಹೆಂಗುಸು, ಅದರ ಮೇಲೂ ಹೊಟ್ಟೆಗಿಲ್ಲದ ಬೀದಿಯ ಬಿಕಾರಿ. ಇಂತಹ ಅನಾಥೆಯಾದ ಬಾಲಿಕೆಯ ಮೇಲೆ ತಮಗೆ ಇಷ್ಟು ಕೋಪವೇತಕೆ? ಇಂತಹ ಸಂತೋಷದ ಸಮಾ ರಂಭಕ್ಕೆ ಅಡ್ಡಿಯನ್ನು ತಂದೊಡ್ಡಿದಳೆಂದು ತಮಗೆ ಅಸಮಾಧಾನವಿರುವು ದಾದರೆ, ಈಕೆಯನ್ನು ದೂರವಾಗಿ ಕಳುಹಿದರಾಯಿತು. ಒಳ್ಳೆಯದು ಕೆಟ್ಟದು ಎಂಬುದನ್ನೇ ಅರಿಯದ ಹುಚ್ಚರೊಡನೆ ಹೋರಾಡುವುದು ವೀರರಿಗೆ ಎಂದಿಗೂ ತಕ್ಕುದಲ್ಲ. ಹೊಟ್ಟೆಗಾಗಿ ಬಂದಿರುವ ಹುಚ್ಚಿಗೆ

ಹೊಟ್ಟೆ ತುಂಬಾ ಭೋಜನಮಾಡಿಸಿ ಸಂತೋಷದಿಂದ ಕಳುಹೋಣ ವಾಗಲಿ, ಎಂದು ಸರ್ವ ಸಮ್ಮತವಾಗಿ ಮಾತನಾಡಿದನು. ಲಲಿತಸಿಂಹನು ಮಾತನ್ನು ಮುಗಿಸಿದ ಕೂಡಲೆ, ಮಹಾರಾಣನು ಮಹಾರಾಜಸಿಂಹನನ್ನು ಸಂಬೋಧಿಸಿ ಇಂತೆಂದನು :—

" ಮಗು ! ನೀನು ಹೀಗೆ ಮೈಮರೆತುದನ್ನು ನಾನೆಂದೂ ನೋಡಿ ದವನಲ್ಲ. ಸ್ತ್ರೀ ಹತ್ಯೆಗಾಗಿ ನೀನು ಮುಂದುವರಿದು ಬಂದಿರುವುದು ನೋಡಿದರೆ, ನನಗೆ ಆಶ್ಚರ್ಯವೂ ವಿಷಾದವೂ ಏಕಕಾಲದಲ್ಲಿಯೇ ಉಂ ಟಾಗುತ್ತಿರುವುವು. ಮಹಾರಾಜಸಿಂಹ ! ಸ್ತ್ರೀ ಹತ್ಯೆಯನ್ನು ಮಾಡಿ ಪವಿತ್ರ ವಾದ ಮಾರವಾಡದ ರಾಜವಂಶಕ್ಕೆ ಶಾಶ್ವತವಾದ ಕಳಂಕವನ್ನುಂಟು ಮಾಡಬೇಡ, ಕಂಡೆಯಾ? ನಮ್ಮ ಪೂರ್ವಿಕರೆಲ್ಲರೂ ವೀರರಾಗಿಯೇ ಬಾಳಿ ಬದುಕಿದರು. ನಾವು ಅವರ ವಂಶದಲ್ಲಿ ಹುಟ್ಟಿ ನೀಚಕೃತ್ಯಕ್ಕೆ ಕೈಹಾಕಬಾರದು. "

ಮಹಾರಾಜಸಿಂಹನು ಈ ಮಾತನ್ನು ಕೇಳಿದ ಕೂಡಲೆ ನಾಚುಗೆ ಯಿಂದ ತಲೆವಾಗಿ ನಿಂತುಬಿಟ್ಟನು. ತಪ್ಪು ಮಾಡಿದವನು ಆವ ರೀತಿ ಯಲ್ಲಿ ಕಿಂಕೃತಿಯನ್ನು ಪಡೆವನೋ, ಮಹಾರಾಜಸಿಂಹನೂ ಅದೇ ರೀತಿ ಯಲ್ಲಿಯೇ ಭಾವವನ್ನು ತೋರ್ಪಡಿಸಿದವನಾಗಿ ತನ್ನ ಕತ್ತಿಯನ್ನು ಮತ್ತೆ ಒರೆಯೊಳಗೆ ಸೇರಿಸಿ—ತಂದೆಯೇ ! ನಾನು ಸನ್ನಿಧಾನವಲ್ಲಿ ದ್ರೋಹ ವನ್ನು ಮಾಡಿದೆನು. ಕರುಣಾಶಾಲಿಗಳಾದ ತಾವು ನನ್ನನ್ನು ಕ್ಷಮಿಸಿ ಉದ್ಧರಿಸಬೇಕು. ನನಗೆ ಇಂದು ವಿವೇಕವೆಂಬುದೇ ಲುಪ್ತವಾಗಿ ಹೋ ಗಿರುವುದು. ನಾನು ಮಾಡಿದ ಕೆಲಸಕ್ಕಾಗಿ ಇಂದು ನನಗೆ ಅಪಮಾನ ವಾಗಿರುವುದರಿಂದ, ಈ ಪುರಪ್ರಮುಖರಲ್ಲಿ ನಾನು ಮುಖವನ್ನು ತೋರಿಸ ಲಾರದವನಾಗಿರುವೆನು, ಎಂದು ತಲೆವಾಗಿ ಬೇಡಿಕೊಂಡ ಬಳಿಕ ಸಭಾ ಜನರೆಲ್ಲರನ್ನೂ ಕುರಿತು—ಮಹಾಜನರಲ್ಲಿ ನನ್ನ ವಿಜ್ಞಾಪನೆಯೇನೆಂದರೆ— ನಾನು ವಿವೇಕವಿಲ್ಲದೆಯೇ ದುಡುಕಿ ಕೆಲಸವನ್ನು ಮಾಡಿದೆನು. ಇದು ನಿಮ್ಮೆಲ್ಲರಿಗೂ ಅಸಮಾಧಾನವನ್ನುಂಟುಮಾಡಿರುವುದು. ನಾನು ಮಾಡಿ ದುದು ತಪ್ಪೆಂಬುದನ್ನು ಚೆನ್ನಾಗಿಯೂ ಅರಿತುಕೊಂಡು ನಿಮ್ಮೆಲ್ಲರ ಕ್ಷಮೆ ಯನ್ನು ಬೇಡುವವನಾಗಿರುವೆನು. ನೀವುಗಳೆಲ್ಲರೂ ನನ್ನಲ್ಲಿ ಕೃಪೆಯಿಟ್ಟು

ಮನ್ನಿಸಬೇಕಾಗಿ ವಿನಯದಿಂದ ತಲೆವಾಗಿ ಪ್ರಾರ್ಥಿಸುವೆನು, ಎಂದು ಕೈಗಳನ್ನು ಜೋಡಿಸಿಕೊಂಡು ನಿಂತನು.

ಮಹಾರಾಜಸಿಂಹನು ಪ್ರಜೆಗಳನ್ನು ಈ ರೀತಿಯಾಗಿ ಪ್ರಾರ್ಥಿಸುತ್ತಿದ್ದರೂ, ಹುಚ್ಚಿಯು ಲಲಿತಸಿಂಹನನ್ನು ಹಿಡಿದುಕೊಂಡು ಗೋಳೋ ಎಂದು ರೋದನಮಾಡುತ್ತಿದ್ದಳು. ಲಲಿತನು ಮಹಾರಾಣಾ ಸಾಹೇಬನನ್ನು ನೋಡಿ —ಮಹಾಸ್ವಾಮಿ! ಸನ್ನಿಧಾನದಿಂದ ಅಪ್ಪಣೆಯಾಗುವುದಾದರೆ, ಭಯಭೀತೆಯಾದ ಈ ಹುಚ್ಚಿಯನ್ನು ನಾನೇ ಬೇರೆಯ ಕಡೆಗೆ ಕರೆದುಕೊಂಡು ಹೋಗುವೆನು. ಈಕೆಯು ಇಲ್ಲಿಯೇ ಇರುವುದಾದರೆ, ಈಗಣ ಸಂತೋಷಕ್ಕೆ ಮತ್ತಾವ ಕುಂದುಕೊರತೆಗಳುಂಟಾಗುವುವೋ ಬಲ್ಲವರಾರು? ಎಂದು ಹೇಳಿದ ಮಾತನ್ನು ಕೇಳಿ ಮಹಾರಾಣನು ತನ್ನಲ್ಲಿ ತಾನೇ ಕೊಂಚ ಹೊತ್ತು ಈ ರೀತಿಯಾಗಿ ಚಿಂತಿಸಿದನು :—

" ಲಲಿತಸಿಂಹನು ಸಭಾ ಪರಿತ್ಯಾಗಮಾಡುವುದಾದರೆ, ಇಂದಿನ ಸಂತೋಷಕ್ಕೆ ಭಂಗವುಂಟಾಗದಿರದು. ಲಲಿತಸಿಂಹನಿಗೂ ಮಹಾರಾಜಸಿಂಹನಿಗೂ ಅಂತರ್ಯದಲ್ಲಿ ಬಲವತ್ತರವಾದ ದ್ವೇಷವಿರುವುದೆಂದು ಪ್ರಜಾವರ್ಗದವರೆಲ್ಲರೂ ಏಕಾಭಿಪ್ರಾಯಪಡುವುದಕ್ಕೆ ದಾರಿಮಾಡಿಕೊಟ್ಟಂತಾಗುವುದು. ಆದುದರಿಂದ ಲಲಿತಸಿಂಹನನ್ನು ಹೊರಗೆ ಬಿಡದೆ ಇಲ್ಲಿಯೇ ಇರುವಂತೆ ಮಾಡಬೇಕು. "

ಮಹಾರಾಣನು ಹೀಗೆ ಆಲೋಚಿಸಿದ ಬಳಿಕ ಲಲಿತಸಿಂಹನನ್ನು ಕುರಿತು ಮಗು! ಹುಚ್ಚಿಗಾಗಿ ನೀನು ಇಷ್ಟು ಶ್ರಮವನ್ನು ತೆಗೆದುಕೊಳ್ಳಬೇಕಾದುದೇನೂ ಇರುವುದಿಲ್ಲ. ಪ್ರಜೆಗಳನ್ನು ರಕ್ಷಿಸುವುದು ಮಹಾರಾಣನ ಕರ್ತವ್ಯವಾದುದರಿಂದ, ಆ ಭಾರವು ನನ್ನದಾಗಿರುವುದು. ಈ ಹುಚ್ಚಿಯು ಮಾರವಾಡದ ಮಹಾರಾಣಿಯೆಂದು ಹೇಳಿಕೊಂಡಿರುವುದರಿಂದ, ಈಕೆಯು ಮಾರವಾಡದ ಮಹಾರಾಣಿಯಂತೆ ನನ್ನ ಸಿಂಹಾಸನದ ಮೇಲೆ ಕುಳಿತುಕೊಂಡಿರಲಿ, ಎಂದು ಹೇಳಿ ಹುಚ್ಚಿಯನ್ನು ನೋಡಿ ತಾಯೀ! ಮಹಾರಾಣಿಯಾಗಿ ನನ್ನ ಪಕ್ಕದಲ್ಲಿ ಕುಳಿತುಕೊಂಡು ಮಹಾರಾಜಸಿಂಹನ ಮಹೋತ್ಸವವನ್ನು ನೋಡಿ ಆನಂದಿಸು, ಎಂದು

ನುಡಿದ ಮಾತನ್ನು ಕೇಳಿ ಹುಚ್ಚಿ ಹೊರತಾಗಿ ಉಳಿದವರೆಲ್ಲರೂ ನಗುವುದಕ್ಕೆ ಮೊದಲು ಮಾಡಿದರು.

ಹುಚ್ಚಿಯು ಮಹಾರಾಣನ ಮಾತನ್ನು ಕೇಳಿದ ಕೂಡಲೆ ಲಲಿತಸಿಂಹನನ್ನು ಬಿಟ್ಟು ಮಹಾರಾಣನ ಪಕ್ಕದಲ್ಲಿ ಬಂದು ಕುಳಿತುಕೊಂಡಳು. ಮಹಾರಾಣನು ಹುಚ್ಚಿಯ ಗಲ್ಲವನ್ನು ಹಿಡಿದು—ಬಾ, ತಾಯಿ! ಬಾ. ನನ್ನ ಪಕ್ಕದಲ್ಲಿ ಕುಳಿತುಕೊಳ್ಳು. ನಿನಗೆ ಆವ ಭಯವೂ ಇರುವುದಿಲ್ಲ ನೀನು ಮಟ್ಟಗೆ ಹುಚ್ಚು ಹುಚ್ಚಾಗಿ ಆಡದಿರು. ನೀನು ಹುಚ್ಚಿಯಂತೆ ಆಡುವುದಾದರೆ, ಎಲರೂ ನಿನ್ನನ್ನು ನಿಂದಿಸುವರು. ಮಗು! ನೀನು ಬಲು ಒಳ್ಳೆಯ ಹುಡುಗಿಯಾಗಿ ಕಾಣುವೆ. ನೀನಾರಮ್ಮಾ? ಎಂದು ಪ್ರಶ್ನೆಮಾಡಿದನು.

ಹುಚ್ಚಿ—ತಾವು ನನ್ನನ್ನು ಹೀಗೆಲ್ಲಾ ಕೇಳಬಾರದು. ನಾನು ಮಾರವಾಡದ ಮಹಾರಾಣಿ.

ಈ ಮಾತನ್ನು ಕೇಳಿ ಎಲ್ಲರೂ ನಕ್ಕರು. ಮಹಾರಾಣನು ಲಜ್ಜಿತನಾಗಿ—ನಿನ್ನ ಹೆಸರೇನಮ್ಮಾ? ಎಂದು ಮತ್ತೆ ಪ್ರಶ್ನೆಮಾಡಿದನು.

ಹುಚ್ಚಿ—ಭಿಲ್ಲರ ಕಾತ್ಯಾಯನೀ ದೇವಿ.

ಹುಚ್ಚಿಯಾದ ಕಾತ್ಯಾಯನಿಯು ಈ ರೀತಿಯಾಗಿ ತನ್ನ ಹೆಸರನ್ನು ಹೇಳಿದ ಬಳಿಕ, ಕಂಠವನ್ನು ಸರಿಮಾಡಿಕೊಂಡು ಹಾಡುವುದಕ್ಕೆ ಮೊದಲು ಮಾಡಿದಳು.

ರಾಗ ಶಂಕರಾಭರಣ—ರೂಪಕ ತಾಳ.

ನಾರಾಯಣ ನಾರಾಯಣ ನಾರಾಯಣ ।
ನಾರಾಯಣ ಜಯಗೋಪಾಲಹರೇ ॥ಪ॥
ನರವರ ನಂದ ಕುಮಾರ । ದಾನವ ಮದಸಂಹಾರ ॥೧॥
ಯಮುನಾತೀರ ವಿಹಾರ । ಧೃತ ಕೌಸ್ತುಭಮಣಿಹಾರ ॥೨॥
ಕರುಣಾ ಪಾರಾವಾರ । ವರುಣಾಲಯ ಗಂಭೀರ ॥೩॥

## ಇಪ್ಪತ್ತು ಮೂರನೆಯ ವಿಲಾಸ

ಹುಚ್ಚಿಯಾದ ಕಾತ್ಯಾಯನಿಯು ಮಹಾರಾಣಿಯಂತೆ ಮಹಾರಾಜನ ಪಕ್ಕದಲ್ಲಿ ಕುಳಿತಿರುವಳು. ಇದನ್ನು ನೋಡಿದ ಕೂಡಲೆ, ಮಹಾರಾಜಸಿಂಹನಿಗೆ ಏಕ ಕಾಲದಲ್ಲಿ ಸಾವಿರಾರು ಚೇಳುಗಳು ಕುಟುಕಿದರೆ ಆವ ಯಾತನೆಯುಂಟಾಗುವುದೋ, ಅದೇ ಯಾತನೆಯುಂಟಾಯಿತು. ಉಳಿದವರೆಲ್ಲರೂ ಆಕೆಯ ಗಾನದಲ್ಲಿ ಬೆರಗಾಗಿ ಹೋಗಿದ್ದರೂ, ಮಹಾರಾಜಸಿಂಹನು ಮಾತ್ರ ಸ್ವರ್ಗಸುಖದಲ್ಲಿ ನರಕಯಾತನೆಯನ್ನೇ ಅನುಭವಿಸಲಾರಂಭಿಸಿದನು.

ಮಹಾರಾಜಸಿಂಹನ ಮನದಲ್ಲಿ ನಾನಾ ಭಾವಗಳು ಸ್ಫುರಿಸಲಾರಂಭಿಸಿದುವು. ಅವೆಂತೆನೆ :—

"ನಾನು ಆವ ದಿನ ಮಾರವಾಡದ ಮಹಾರಾಣಾ ಆಗಬೇಕೆಂದು ಸಂಕಲ್ಪಿಸಿ ಆವ ಕೆಲಸ ಮಾಡಬೇಕೆಂದು ಪ್ರತಿಜ್ಞೆ ಮಾಡಿದೆನೋ, ಅದೇ ದಿನವೇ ನನ್ನ ಭವಿಷ್ಯತ್ತನ್ನು ನನಗೆ ತಿಳಿಯ ಪಡಿಸುವುದಕ್ಕೋ ಎಂಬಂತೆ ಈ ಹುಚ್ಚಿಯು ನನ್ನೆದುರಿನಲ್ಲಿ ಬಂದು ಕುಳಿತಿರುವಳು. ಈಕೆಯು ನಾನು ಆ ದೇವತಾ ಮಂದಿರದಲ್ಲಿ ಮೊದಲು ನೋಡಿದ ಆಕೆಯಾಗಿರಬಹುದೇ? ಈಕೆಯ ವೇಷಕ್ಕೂ ಆಕೆಯ ವೇಷಕ್ಕೂ ಆವ ಸಂಬಂಧವೂ ಇರುವಂತೆ ಕಾಣಬರುವುದಿಲ್ಲ. ಈಕೆಯೋ ಬೇರೆ, ಆಕೆಯೋ ಬೇರೆ. ಈಕೆಯು ಹುಚ್ಚಿ, ಆಕೆಯು ಮಾಯಾವಿನಿ. ಆ ಮಾಯಾವಿನಿಯು ಇಷ್ಟು ದೂರ ಬರುವುದೆಂದರೇನು? ಒಂದು ವೇಳೆ ಬರಬಹುದಾದರೂ ಆಕೆಯು ಹುಚ್ಚಿಯಾದುದಾಹಾಗೆ? ಇಲ್ಲ, ಇಲ್ಲ; ಈಕೆಯೂ ಆಕೆಯಲ್ಲ, ಆಕೆಯೂ ಈಕೆಯಲ್ಲ. ಈಕೆಯು ಭಿಲ್ಲರ ಕಾತ್ಯಾಯನಿ ಯೆಂದು ಹೇಳಿಕೊಳ್ಳುತ್ತಿರುವಳು. ಇದರ ತತ್ತ್ವವನ್ನು ಪರಿಶೀಲಿಸಿ ನೋಡಬೇಕು."

ಮಹಾರಾಜಸಿಂಹನು ಹೀಗೆ ಆಲೋಚಿಸಿದ ಬಳಿಕ ಕಾತ್ಯಾಯನಿಯ ಮುಖವನ್ನಾದರೂ ಚೆನ್ನಾಗಿ ನೋಡಬೇಕೆಂದು ಮನದಲ್ಲಿ ಚಿಂತಿಸಿದನೇ ಹೊರತು ಪ್ರತ್ಯಕ್ಷವಾಗಿ ನೋಡುವುದಕ್ಕೆ ಸಾಹಸವುಳ್ಳವನಾಗಲಿಲ್ಲ.

ಮಹಾರಾಜಸಿಂಹನಿಗೆ ಕ್ರಮಕ್ರಮವಾಗಿ ಯಾತನೆಯು ಹೆಚ್ಚಿ ಅಲ್ಲ ಕುಳಿತಿರುವುದಕ್ಕೆ ಮನವೊಡಂಬಡಲಿಲ್ಲ. ಆತನು ಅಲ್ಲಿ ಕುಳಿತಿರುವಷ್ಟು ಹೊತ್ತೂ ಅವನ ಬುದ್ಧಿಯು ಅನಸದಾಗಿರಲಿಲ್ಲ. ಬಳಿಕ ಈ ಯಾತನೆಯನ್ನು ತಡೆಯಲಾರದೆ, ಮಹಾರಾಜಸಿಂಹನು ಎದ್ದು ನಿಂತು ಮಹಾರಾಣನನ್ನು ಕುರಿತು – ಮಹಾಸ್ವಾಮಿ! ನನಗೆ ತಟ್ಟನೆ ಶಿರೋವೇದನೆಯು ಒದಗಿ ಬಂದಿರುವುದು. ಅಪ್ಪಣೆಯಾದರೆ ನಾನು ಒಳಗೆ ಹೋಗಿ ಕೊಂಚ ಹೊಟ್ಟಗೆ ವಿಶ್ರಮಿಸಿಕೊಳ್ಳುವೆನು. ತಲೆಯು ಸುತ್ತುತ್ತಿರುವುದರಿಂದ, ನನಗೆ ಇಲ್ಲಿ ಕುಳಿತುಕೊಂಡಿರುವುದಕ್ಕಾಗಲಾರದು, ಎಂದು ಬಿಸಗೊಂಡನು. ಇದನ್ನು ಕೇಳಿ ಮಹಾರಾಣನು ಹೆದರಿದವನಾಗಿ ಚಿಂತಿಸಿದನು :––

"ನನ್ನ ಮಗನು ವಿಶೇಷವಾಗಿ ಶ್ರಮಪಟ್ಟು ಕಂಗೆಟ್ಟು ಹೋಗಿರುವನು. ಇದಕ್ಕಾಗಿ ಅವನಿಗೆ ತಲೆನೋವು ಬಂದಿದ್ದರೂ ಬಂದಿರಬಹುದು. ಕೊಂಚ ವಿಶ್ರಾಂತಿಯನ್ನು ತೆಗೆದುಕೊಂಡರೆ ತಲೆ ನೋವು ಹೋದರೂ ಹೋಗಬಹುದು."

ಮಹಾರಾಣನು ಹೀಗೆ ಚಿಂತಿಸಿದ ಬಳಿಕ ಮಗನನ್ನು ಕುರಿತು–– ಮಗು! ಈ ಸಂತೋಷ ಸಮಾರಂಭಕ್ಕಾಗಿ ನೀನು ಕೆಲವು ದಿನಗಳಿಂದಲೂ ವಿಶೇಷವಾಗಿ ಪರಿಶ್ರಮವನ್ನು ಹೊಂದಿರುವೆ. ಇಂದು ನೀನು ವಿಶ್ರಾಂತಿಯನ್ನು ತೆಗೆದುಕೊಂಡರೆ ನಿನ್ನ ರೋಗವೆಲ್ಲವೂ ದೂರ ತೊಲಗುವುವು. ಆದುದರಿಂದ ನೀನು ಬೇಗನೆಯೇ ಹೊರಡು, ಎಂದು ಅಪ್ಪಣೆ ಮಾಡಿದನು. ಅಪ್ಪಣೆಯನ್ನು ಪಡೆದ ಕೂಡಲೆ ಮಹಾರಾಜಸಿಂಹನು ಅಲ್ಲಿ ಮತ್ತೊಂದು ನಿಮಿಷ ಕೂಡ ನಿಲ್ಲದೆ ಒಂದೇ ಉಸಿರಿನಿಂದ ಓಡಿ ಹೋದನು. ಆಗ ಅನಿವಗೆ ಎಲ್ಲೆಲ್ಲಿಯೂ ಆ ಹುಚ್ಚಿಯೇ ಕಾ..ಸಿಕೊಳ್ಳಲಾರಂಭಿಸಿದಳು.

ಮಹಾರಾಜಸಿಂಹನು ಸಭೆಯನ್ನು ಬಿಟ್ಟು ಹೊರಟು ಹೋದ ಕೂಡಲೆ, ಹುಚ್ಚಿಯು ತಟ್ಟನೆ ನಿಟ್ಟು ಚಮತ್ಕಾರ ಮಾಡುತ್ತಾ ಸಭಾಮಂದಿರದಿಂದ ಪಾರಾದಳು. ಆಕೆಯು ಹೊರಟುಹೋದರೂ, 'ಮಾಡಬೇಡ,

ಮಾಡಬೇಡ, ಮಾಡಬೇಡ' ಎಂದು ಆಕೆಯು ಮಾಡಿದ ಚೀತ್ಕಾರ ಧ್ವನಿ ಮಟ್ಟಿಗೆ ಎಲ್ಲೆಲ್ಲಿಯೂ ಪ್ರತಿಧ್ವನಿತವಾಗಲಾರಂಭಿಸಿತು. ಈ ಧ್ವನಿಯು ಮಹಾರಾಜಸಿಂಹನ ಕಿವಿಗೂ ಬೀಳದೇ ಇರಲಿಲ್ಲ. ಈ ಧ್ವನಿಯನ್ನು ಕೇಳಿದ ಕೂಡಲೆ ಮಹಾರಾಜಸಿಂಹನು ಇದ್ದವನೂ ಅಲ್ಲ, ಸತ್ತವನೂ ಅಲ್ಲ.

ಹುಚ್ಚಿಯಾಡಿದ ಮಾತನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ನಡುಗಿ ಹೋದರು. ತರುವಾಯ ಸಂಗೀತವೂ ನಿಂತಿತು, ವಾದ್ಯವೂ ನಿಂತು ಹೋಯಿತು. ಅದರೊಡನೆಯೇ ಪ್ರಜೆಗಳ ಸಂತೋಷವೂ ಮಾಯವಾಗಿ ಬಿಟ್ಟಿತು. ಹೀಗಾದ ಕೂಡಲೆ ಎಲ್ಲರೂ ಎದ್ದು ನಿಂತರು. ಇದನ್ನು ನೋಡಿ ಮಹಾರಾಣನು ಇಂತೆಂದನು :--

"ಇಂದು ನಮಗೆ ಬೇಕಾದ ಹಾಗೆ ಸಂತೋಷವಾಯಿತು. ಇನ್ನು ನಾವು ವಿಶ್ರಾಂತಿಯನ್ನು ತೆಗೆದುಕೊಳ್ಳುವುದು ಅತ್ಯಾವಶ್ಯಕವಾಗಿ ತೋರಿ ಬರುತ್ತಿರುವುದು. ಇಂದಿನ ಸಭೆಯು ಪೂರ್ಣವಾಯಿತೆಂದೇ ನಮ್ಮ ಭಾವನೆಯು."

ಈ ಮಾತನ್ನು ಕೇಳಿದ ಕೂಡಲೆ, ಸಭಾ ಜನರೆಲ್ಲರೂ ರಾಜನ ಅಪ್ಪಣೆಯನ್ನು ತೆಗೆದುಕೊಂಡು ಸಭಾಮಂದಿರವನ್ನು ತ್ಯಾಗಮಾಡಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

---

## ಇಪ್ಪತ್ತ ನಾಲ್ಕನೆಯ ವಿಲಾಸ

ಮಹಾರಾಜಸಿಂಹನ ಅರಮನೆಯಲ್ಲಿ ಎರಡು ಮೂರು ದಿನಗಳ ವರೆಗೂ ಸಂತೋಷ ಸಮಾರಂಭವು ನಡೆಯಬೇಕಾಗಿದ್ದಿತಾದುದರಿಂದ, ಮಹಾರಾಣಾ ಅಮರಸಿಂಹನೂ ಯುವರಾಜ ಲಲಿತಸಿಂಹನೂ ರಾತ್ರಿಯನ್ನು ಅಲ್ಲಿಯೇ ಕಳೆಯಬೇಕಾಗಿ ನಿರ್ಧಾರವಾಗಿದ್ದಿತು. ಅದಕ್ಕನುಸಾರವಾಗಿಯೂ ಮಹಾರಾಣನೂ ಯುವರಾಜನೂ ಸಭೆಯನ್ನು ಮುಗಿಸಿಕೊಂಡು ಮಲಗುವುದಕ್ಕೆ ಏರ್ಪಡಿಸಲ್ಪಟ್ಟಿದ್ದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಒಂದೆ ಒಂದೆಯೇ ಕೆಲವು ಮಂದಿ ಅಂಗರಕ್ಷಕರೂ ಸೇವಕರೂ ತೆರಳಿದರು.

ಮಹಾರಾಣನೂ ಯುವರಾಜನೂ ತಮ್ಮ ತಮ್ಮ ಚಿಂತೆಯಲ್ಲಿ ಮಗ್ನರಾಗಿ ಮಲಗುವ ಮನೆಯ ಕಡೆಗೆ ತೆರಳಿದರು. ಮಹಾರಾಣನ ಹೃದಯದಲ್ಲಿ ಅನಿರ್ವಚನೀಯವಾದದೊಂದು ಭಯವೂ ಶೋಕವೂ ಪದಾರ್ಪಣ ಮಾಡಿ ಸಲ್ಲದ ಕಿರುಕುಳವನ್ನುಂಟುಮಾಡುತಿದ್ದುವು. ಯುವರಾಜನ ಚಿಂತೆಯಾದರೋ ನಮ್ಮ ಪಾಠಕ ಮಹಾಶಯರೆಲ್ಲರಿಗೂ ಗೊತ್ತೇ ಇರುವುದು. ಈ ರೀತಿಯಾಗಿ ಅವರವರು ಅವರವರ ಚಿಂತೆಯಲ್ಲಿ ಮಗ್ನರಾಗಿ ಹೋಗುತ್ತಿರುವಾಗ ಲಲಿತಸಿಂಹನು ಮಹಾರಾಣಾ ಸಾಹೇಬನನ್ನು ಕುರಿತು—ಮಹಾಸ್ವಾಮಿ! ಸನ್ನಿಧಾನದಿಂದ ಅಪ್ಪಣೆಯಾಗುವುದಾದರೆ, ನಾನು ನಮ್ಮ ಮನೆಗೇ ಹೋಗುವೆನು, ಎಂದು ಮೃದು ಸ್ವರದಿಂದ ನುಡಿದನು.

ಅಮರ—ಅದೇಕೆ?

ಲಲಿತ—ಸನ್ನಿಧಾನದಲ್ಲಿ ಮುಚ್ಚುಮರೆಯೇನೂ ಇಲ್ಲ. ಈ ಅರಮನೆಯಲ್ಲಿ ಈ ರಾತ್ರಿಯನ್ನು ಕಳೆಯುವುದು ಅಪಾಯಕರವೆಂದು ನನಗೆ ತೋರುತ್ತಿರುವುದು.

ಅಮರ—ಈ ಮಾತನ್ನು ಆರಾದರೂ ಕೇಳಿದರೆ ತಿರಸ್ಕಾರದ ನಗೆಯನ್ನು ನಗುವರು.

ಲಲಿತ—ನಾನು ಮನವನ್ನು ಎಷ್ಟೋ ಬಿಗಿ ಹಿಡಿದು ನೋಡಿದೆನು. ಆವುದರಿಂದಲೂ ನನ್ನ ಮನವು ಶಾಂತವಾಗಲೊಲ್ಲದು. ಅದು ಕಾರಣ ನಾನು ಹೋಗುವುದಕ್ಕೆ ಅಪ್ಪಣೆಯನ್ನು ದಯೆಪಾಲಿಸಬೇಕು.

ಅಮರ—ಮಗು! ನನ್ನ ಮನದಲ್ಲಿಯೂ ಅನಿರ್ವಚನೀಯವಾದದೊಂದು ವ್ಯಸನವು ತಲೆದೋರಿ ಸಂಕಟಪಡಿಸುತ್ತಿರುವುದು. ಇಷ್ಟಾದರೂ ನಾನು ಈ ಅರಮನೆಯನ್ನು ಬಿಟ್ಟು ಹೋಗಲಾರದವನಾಗಿರುವೆನು. ನಾವು ಹೊರಟು ಹೋಗುವುದಾದರೆ ಜನರೇನೆಂದಾರು! ಇದರಿಂದ ಮಹಾರಾಜಸಿಂಹನ ಮನದಲ್ಲಿ ಕ್ಲೇಶವುಂಟಾಗುವುದಿಲ್ಲವೇ? ಮಗು! ನಾವು ವೀರ ಕ್ಷತ್ರಿಯರೆನಿಸಿಕೊಂಡು ಭಯಕ್ಕೆ ಎಡೆಗುಡುವುದಾದರೆ,

ಅವಕ್ಕಿಂತಲೂ ಲಜ್ಜಾಕರವಾದುದು ಬೇರೊಂದಿಲ್ಲ. ಹಣೆಯಲ್ಲಿ ಬರೆದಂತೆ ಎಲ್ಲವೂ ನಡೆಯುವುದು. ಇವಕ್ಕಾಗಿ ನಾವು ಅದೇಕೆ ಕೆಟ್ಟ ಹೆಸರನ್ನು ಪಡೆದುಕೊಳ್ಳಬೇಕು?

ಲಲಿತಸಿಂಹನು ಈ ಮಾತನ್ನು ಕೇಳಿ ಮುಂದೆ ಮತ್ತಾವ ಮಾತನ್ನೂ ಆಡದೆ ಮಹಾರಾಣನ ಹಿಂದೆ ಹಿಂದೆಯೇ ಹೊರಟನು. ಅವರಿಬ್ಬರೂ ಮಲಗುವ ಮನೆಯ ಬಳಿಗೆ ಬಂದ ಕೂಡಲೆ, ಸೇವಕನೊಬ್ಬನು ಮುಂದೆ ಬಂದು ಕೈಮುಗಿದುಕೊಂಡು—ಮಹಾಸ್ವಾಮಿ! ಈ ಕೋಣೆಯು ಯುವರಾಜರಿಗಾಗಿ ಏರ್ಪಡಿಸಿರುವುದು, ಎಂದು ತಲೆವಾಗಿ ವಿಜ್ಞಾಪಿಸಿಕೊಂಡನು.

ಮಹಾರಾಣನು ಲಲಿತನನ್ನು ಕುರಿತು—ಮಗು! ನೀನು ತುಂಬಾ ಆಯಾಸಪಟ್ಟಿರುವೆ. ನಿನ್ನ ಹಾಸುಗೆಯಲ್ಲಿ ಮಲಗಿ ನಿದ್ರಿಸು, ಎಂದನು.

ಲಲಿತ—(ಮೃದುವಾಗಿ) ಮನೆಗೆ ಹಿಂದಿರುಗಿ ಹೋಗಲು ಅಪ್ಪಣೆ ಕೊಡೋಣವಾಗಲಿ.

ಅಮರ—ಅದಾಗಲಾರದು.

ಲಲಿತ—ಹಾಗಾದರೆ, ತಾವು ನನ್ನನ್ನು ಇಲ್ಲಿಯೇ ಮಲಗಬೇಕೆಂದು ನಿರ್ಬಂಧಪಡಿಸಲಾಗದು. ನಾನು ಮತ್ತೆಲ್ಲಿಯಾದರೂ ಹೋಗಿ ಮಲಗುವೆನು.

ಈ ಮಾತನ್ನು ಕೇಳಿ ಅಮರಸಿಂಹನು ನಕ್ಕು ಲಲಿತನ ತಲೆಯನ್ನೂ ಬೆನ್ನನ್ನೂ ಸವರುತ್ತಾ—ಮಗು! ಇಲ್ಲಿ ಮಲಗುವುದಕ್ಕೆ ನಿನಗೆ ಭಯವಾಗುವುದಾದರೆ, ನನ್ನ ಸ್ಥಳದಲ್ಲಿ ಮಲಗು. ನಾನು ನಿನ್ನ ಹಾಸುಗೆಯ ಮೇಲೆ ಮಲಗುವೆನು, ಎಂದನು.

ಲಲಿತ—(ಲಜ್ಜಿತನಾಗಿ) ಪ್ರಭೂ! ಇನ್ನು ನನಗೆ ಮತ್ತಾವ ಭಯವೂ ಇಲ್ಲ. ಭಯವೆಂಬುದು ನನ್ನಿಂದ ದೂರವಾಗಿ ತೊಲಗಿಹೋಯಿತು. ನನಗಾಗಿ ತಾವು ಇಲ್ಲಿ ಮಲಗಬೇಕಾದುದಿಲ್ಲ. ನಾನೇ ಇಲ್ಲಿ ಮಲಗಿಕೊಳ್ಳುವೆನು.

ಮಹಾರಾಣನು ಲಲಿತನ ಮಾತಿಗೆ ಆವ ಉತ್ತರವನ್ನೂ ಕೊಡದೆ, ಸೇವಕರನ್ನು ನೋಡಿ—ಇನ್ನು ನೀವುಗಳೆಲ್ಲರೂ ಹೊರಡಬಹುದು. ನಾವು ಕೊಂಚ ಹೊತ್ತು ಮಾತನಾಡುತ್ತಿದ್ದು ಬಳಿಕ ಮಲಗಿಕೊಳ್ಳುವೆವು. ಇನ್ನು ನೀವು ಇಲ್ಲಿರಬೇಕಾದ ಆವಶ್ಯಕತೆಯೇನೂ ಇರುವುದಿಲ್ಲ, ಎಂದು ಅಪ್ಪಣೆಮಾಡಲು, ಸೇವಕರು ಬೀಳ್ಕೊಂಡು ಬೇರೆಯ ಕಡೆಗೆ ತೆರಳಿದರು. ಬಳಿಕ ಅಮರಸಿಂಹನು ಲಲಿತನನ್ನು ಕುರಿತು—ಮಗು! ನೀನು ಹೋಗಿ ನಿನ್ನ ಸ್ಥಲದಲ್ಲಿ ಮಲಗಿಕೊಳ್ಳು, ಎಂದು ನುಡಿದನು.

ಲಲಿತ—ಪ್ರಭೂ! ಭಯವೇನೂ ಇಲ್ಲ; ನಾನು ಇಲ್ಲಿಯೇ ಮಲಗುವೆನು.

ಅಮರ—ಮಹಾರಾಣನು ಅಪ್ಪಣೆ ಮಾಡುವನು. ಇಂದಿನ ದಿನ ನೀನು ನನ್ನ ಹಾಸುಗೆಯ ಮೇಲೆಯೇ ಮಲಗಬೇಕು. ನಾನು ಇಲ್ಲಿಯೇ ಮಲಗುವೆನು.

ಲಲಿತಸಿಂಹನು ರಾಜನ ಅಪ್ಪಣೆಗೆ ಆವ ಪ್ರತ್ಯುತ್ತರವನ್ನೂ ಹೇಳಲಾರದವನಾಗಿ ರಾಜನಿಗೆ ನಿಶ್ಚಿತವಾಗಿದ್ದ ಮಲಗುವ ಮನೆಯ ಕಡೆಗೆ ತೆರಳಿದನು. ಮಹಾರಾಣನು ಮಲಗುವುದಕ್ಕೆ ಮೊದಲು ಕೋಣೆಯನ್ನು ಚೆನ್ನಾಗಿ ಪರೀಕ್ಷಿಸಿ ಭಯಕ್ಕೆ ಕಾರಣವೇನೂ ಇಲ್ಲವೆಂದು ಸಿದ್ಧಾಂತ ಮಾಡಿಕೊಂಡು ಲಲಿತಸಿಂಹನ ಹಾಸುಗೆಯ ಮೇಲೆ ಮಲಗಿದನು. ಬಳಿಕ ಅಮರಸಿಂಹನು ಪರಿಪರಿಯಾಗಿ ಚಿಂತಿಸಲಾರಂಭಿಸಿದನು:—

"ಇಲ್ಲಿ ಭಯಕ್ಕೆ ಆವ ಕಾರಣವೂ ಇಲ್ಲ, ಆದರೂ ಭಯವಾಗುವುದು. ಈ ರಾತ್ರಿಯಲ್ಲಿ ಇಲ್ಲಿ ಭಯಂಕರವಾದ ವಿಪತ್ತು ಸಂಭವಿಸಿದರೂ ಸಂಭವಿಸಬಹುದು. ಹಣೆಯ ಬರಹವನ್ನು ತಪ್ಪಿಸಬಲ್ಲವರಾರು? ಸಾಯುವುದಾದರೆ, ಮುದುಕನಾದ ನಾನು ಸಾಯುವುದು ಮೇಲು. ಇದರಿಂದ ಆರಿಗೂ ನಷ್ಟವಿಲ್ಲ. ಲಲಿತನೇನಾದರೂ ಸಾಯುವುದಾದರೆ, ರಾಜ್ಯವಲ್ಲ ಸರ್ವನಾಶವಾಗುವುದು. ಈಗ ಸಾಯುವ ಆಲೋಚನೆಗೆ ಕಾರಣ ತಾನೇ ಏನು? ಕೊಲ್ಲುವವರು ತಾನೇ ಆರು? ಈ

ಅರಮನೆಯಲ್ಲಿ ಇಷ್ಟು ಜನ ದಾಸದಾಸಿಯರಿರುವಾಗ, ಆರು ತಾನೇ ಧೈರ್ಯದಿಂದ ಕೊಲ್ಲುವುದಕ್ಕೆ ಬಂದಾರು?"

ಮಹಾರಾಣಾ ಅಮರಸಿಂಹನು ಹೀಗೆ ಚಿಂತಿಸುತ್ತಿರುವಾಗಲೇ ಮಲಗಿ ನಿದ್ರಿಸಿಬಿಟ್ಟನು.

---

## ಇಪ್ಪತ್ತೈದನೆಯ ವಿಲಾಸ

ಮಹಾರಾಜಸಿಂಹನು ಭಯದಿಂದ ನಡುಗಿದವನಾಗಿ ತಪ್ಪು ಹಜ್ಜೆಗಳನ್ನಿಡುತ್ತಲೂ, ಒಂದೊಂದು ವೇಳೆ ಬೆಚ್ಚಿ ಬೆದರಿ ಸುತ್ತಲೂ ನೋಡುತ್ತಲೂ ತನ್ನ ಮಲಗುವ ಮನೆಯ ಕಡೆಗೆ ತೆರಳುತ್ತಿದ್ದನು. ಆರೋ ಬೆನ್ನಟ್ಟಿ ಬರುತ್ತಿದ್ದಂತೆಯೇ ಅವನಿಗೆ ಅಡಿಗಡಿಗೂ ತೋರಿಬರುತ್ತಿದ್ದಿತು. ಅವನ ಕಿವಿಗಳಲ್ಲಿ ಆರೋ ನಡೆದು ಬರುತ್ತಿದ್ದ ಶಬ್ದವು ಮೇಲಿಂದ ಮೇಲೆ ಕೇಳಿ ಬರಲಾರಂಭಿಸಿತು. ಆರು ಹಿಂಬಾಲಿಸಿ ಬರುತ್ತಿರುವರೆಂಬುದನ್ನು ನೋಡುವುದಕ್ಕೆ ಕೂಡ ಅವನಿಗೆ ಸಾಹಸವುಂಟಾಗಲಿಲ್ಲ. ಮಹಾರಾಜಸಿಂಹನು ಆ ಅಂಧಕಾರದಲ್ಲಿ ದಿಕ್ಕು ತೋರದವನಾಗಿ ಮುಂದಕ್ಕೆ ಹೋಗುವುದಕ್ಕೆ ಕಾಲೇ ಬರದವನಾಗಿ ಅಲ್ಲಿಯೇ ನಿಂತು ಬಿಟ್ಟನು.

ಕಮಲಿನಿಯು ಹಠಾತ್ತಾಗಿ ಆತನ ಮುಂದೆ ಬಂದು ನಿಂತಳು. ಆಕೆಯು ಸ್ವಾಮಿಯನ್ನು ನೋಡಿದ ಕೂಡಲೆ—ಪ್ರಭೂ! ಇದೇನು ಇಷ್ಟು ಬೇಗನೆ ಹೊರಟು ಬರೋಣವಾಯಿತು? ಮಹಾರಾಣನೂ ಲಲಿತಸಿಂಹನೂ ಎಲ್ಲಿ? ಎಂದು ಕೇಳಿದಳು.

ಮಹಾ—(ಹೆದರಿದವನಾಗಿ) ಕಮಲಿನಿ! ಈ ಕೆಲಸವು ನನ್ನಿಂದಾಗಲಾರದು.

ಕಮಲಿನಿ—(ಕೋಪಗೊಂಡು) ಅದೇಕೆ?

ಮಹಾ—ಅದೇಕೆ! ನನ್ನ ಅಣ್ಣನ ಮಗನಾದ ಲಲಿತನು ನನ್ನನ್ನು ತಂದೆಯಿಂದೇ ಭಾವಿಸಿಕೊಂಡಿರುವನು. ಅವನು ಗುಣಾಢ್ಯನೇ

ಹೊರತು ದೋಷಿಯಲ್ಲ. ಆತನು ನಮ್ಮ ಮಾರವಾಡದ ಗೌರವ ಸ್ವರೂಪನು.

ಕಮಲಿನಿ—(ಹುಬ್ಬು ಗಂಟಿಕ್ಕಿ) ತಾವು ಮಾರವಾಡದ ಸೇನಾಪತಿಯಾಗಿರುವುದಕ್ಕೂ ತಕ್ಕವರಲ್ಲ. ಲಲಿತಸಿಂಹನೇ ಮಹಾರಾಣನಾಗಲಿ; ತಾವು ಭಿಕ್ಷಾಪಾತ್ರವನ್ನು ತೆಗೆದುಕೊಂಡು ಮನೆ ಮನೆಗೂ ಭಿಕ್ಷೆಗಾಗಿ ತೆರಳೋಣವಾಗಲಿ.

ಮಹಾ—ಕಮಲಿನಿ! ಕೋಪಮಾಡಬೇಡ. ನೀನೇ ಆಲೋಚಿಸಿ ನೋಡು; ಇಂದು ಆತನು ನಮ್ಮ ಮನೆಗೆ ಅತಿಥಿಯಾಗಿ ಬಂದಿರುವನಲ್ಲವೇ?

ಕಮಲಿನಿ—(ರೇಗಿ ರೇಗಿ ಬೀಳುತ್ತಾ) ತಮ್ಮ ಸುಟ್ಟ ಮೋರೆಯನ್ನು ನಾನು ನೋಡಲಾರೆನು. ತಮಗೆ ನನ್ನಂತಹ ಹೆಂಡತಿಯೇಕೆ? ಇಂತಹ ಅರಮನೆಯೇಕೆ? ಅಧಿಕಾರವೇಕೆ? ತಾವು ಎಲ್ಲಿಯಾದರೂ ಹೋಗಿ ಕೂಲಿ ನಾಲಿ ಮಾಡಿಕೊಂಡು ಜೀವಿಸಿರಿ. ತಮ್ಮಂತಹ ಹೆಣ್ಣಿಗರನ್ನು ಕಣ್ಣೆತ್ತಿಯೂ ನೋಡಬಾರದು.

ಈ ಮಾತನ್ನು ಹೇಳಿದ ಕೂಡಲೆ ಮಾನವತಿಯಾದ ಕಮಲಿನಿಯು ಕೋಪಾವೇಶಪರವಶೆಯಾಗಿ ಹಿಂದಕ್ಕೆ ಹೊರಟಳು. ಮಹಾರಾಜಸಿಂಹನು ಇದನ್ನು ಕಂಡು ಮತ್ತಷ್ಟು ಹೆದರಿದವನಾಗಿ ಕಮಲಿನಿಯ ಕೈಗಳನ್ನು ಹಿಡಿದುಕೊಂಡು—ಪ್ರಿಯೆ! ನನ್ನ ಅಭಿಪ್ರಾಯವು ನಿನಗೆ ಇನ್ನೂ ಗೊತ್ತಾಗಲೇ ಇಲ್ಲ. ಮಹಾರಾಣನಾಗುವುದಕ್ಕೆ ನನಗೆ ಇಷ್ಟವಿಲ್ಲವೆಂದು ನೀನು ಭಾವಿಸಿದಂತಿದೆ. ಅದು ತಪ್ಪಿನ ಅಭಿಪ್ರಾಯವು. ನನಗೆ ಮಹಾರಾಣನಾಗಲು ಇಷ್ಟವಿಲ್ಲವೆಂದರೇನು? ನನ್ನ ಭಯವೇನೆಂದರೆ—ನಾನು ಮಹಾರಾಣನಾದ ಕೂಡಲೆ, ಹೆಂಗುಸಿನಿಂದ ಮರಣವುಂಟಾಗುವುದೆಂದು ನನ್ನ ಹೆದರಿಕೆಯು. ಆ ಹೆಂಗುಸು ಇಲ್ಲಿಯೇ ಬಂದಂತಿದೆ. ಈಕೆಯೇ ನನ್ನನ್ನು ಕೊಂದರೂ ಕೊಲ್ಲಬಹುದು. ಇದಕ್ಕಾಗಿಯೇ ನಾನು ಹಿಂದೆ ಮುಂದೆ ನೋಡುತ್ತಿರುವೆನು, ಎಂದು ಮಾತನಾಡಿದನು.

ಕಮಲಿನಿ—ಭಿಲ್ಲರ ಕಾತ್ಯಾಯನಿ! ಈ ಹುಚ್ಚಿಗಾಗಿಯೇ ತಾವು ಇಷ್ಟು ಭಯಪಡುತ್ತಿರುವುದು? ಹಾ, ಹಾ, ಹಾ!

ಕಮಲಿನಿಯು ಹೀಗೆ ಹೇಳಿ ಗಟ್ಟಿಯಾಗಿ ನಗುತ್ತಾ ಹಿಂದಿರುಗಲಾರಂಭಿಸಿದಳು. ಮಹಾರಾಜಸಿಂಹನಿಗೆ ಕಷ್ಟಕ್ಕಿಟ್ಟಿತು. ಹೆಂಡಿತಿಯ ಮಾತಿಗೆ ಕಿವಿಗೊಟ್ಟು ಕೆಲಸಮಾಡುವುದಾದರೆ, ಆ ಹೆಂಗುಸಿನ ಕೈಯಿಂದ ಸಾಯಲೇ ಬೇಕಾಗುವುದು. ಹೆಂಡಿತಿಯ ಮಾತನ್ನು ಕೇಳದೇ ಹೋದರೆ, ಬದುಕಿರುವ ವರೆಗೂ ಅವಳಿಂದ ಕುಕ್ಕಿಸಿಕೊಳ್ಳುತ್ತಿರಬೇಕು. ಅಂತೂ ಹೆಂಗುಸರ ಕೈಯಲ್ಲಿ ಸಿಲುಕಿಕೊಂಡು ನರಳಾಡುವ ಹೊತ್ತು ಬಂದಿತು. ಹುಲಿಯ ಹಲ್ಲುಗಳಿಂದ ಪಾರಾಗಿ ಬರಬಹುದು, ಕರಡಿಯ ಕೈಯಿಂದ ತಪ್ಪಿಸಿಕೊಂಡು ಬರಬಹುದು, ಆದರೆ ಹೆಂಗುಸಿನ ಹಿಂಸೆಯಿಂದ ಮುಕ್ತನಾಗಿ ಬಾಳುವುದು ಅತಿ ಪ್ರಯಾಸದ ಕೆಲಸವಾಗಿರುವುದು. ಮಹಾರಾಜಸಿಂಹನು ಇತಿ ಕರ್ತವ್ಯತಾಮೂಢನಾಗಿ ಹೆಂಡಿತಿಯನ್ನು ಕುರಿತು— ಕಮಲಿನಿ! ನೀನು ಭಾವಿಸಿರುವಂತೆ ನಾನು ಎಂದಿಗೂ ಹೇಡಿಯಲ್ಲ. ಮಾನವನು ಆವ ಕೆಲಸವನ್ನು ಮಾಡುವುದಕ್ಕೆ ಸಮರ್ಥನಾಗಿರುವನೋ, ಆ ಕೆಲಸವನ್ನು ಮಾಡುವುದಕ್ಕೆ ನಾನೂ ಸಮರ್ಥನಾಗಿರುವೆನು, ಎಂದನು.

ಕಮಲಿನಿ—ನಿಜ! ತಾವು ಮಹಾ ಶೂರರು! ಇದು ನನಗೆ ಗೊತ್ತಿರಲಿಲ್ಲ. ಒಬ್ಬ ಹುಚ್ಚಿಗೆ ಹೆದರಿ ಹಿಂದೆ ಮುಂದೆ ನೋಡುತ್ತಾ ಭಯದಿಂದ ಗದಗದನೆ ನಡುಗುವರು ಮಹಾ ಶೂರರು, ಎಂಬುದನ್ನು ಅರಿಯದೇ ಇರುವುದು ನನ್ನ ಅಜ್ಞತಾದೋಷವು.

ಮಹಾ—ಹುಚ್ಚಿಯ ಕೈಯಿಂದ ಸಾಯುವುದು ನನಗೆ ಇಷ್ಟವಾದುದಲ್ಲ.

ಕಮಲಿನಿ—ಸಾಯುವುದಕ್ಕೆ ತಮಗೆ ಇಷ್ಟು ಭಯವೇ? ಹಾಗಾದರೆ ದೊಡ್ಡ ದೊಡ್ಡ ಯುದ್ಧಗಳನ್ನು ಮಾಡಿ ನೀವು ಜಯಿಸಿದ ಬಗೆ ಯಾದರೂ ಹೇಗೋ?

ಮಹಾ—ಪ್ರಿಯೆ! ನೀನು ನನಗೆ ಹುಚ್ಚನ್ನು ಹಿಡಿಸುವೆ.

ಕಮಲಿನಿ—ಅದು ಹೇಗೆ? ತಮ್ಮ ಹಾನಿವೃದ್ಧಿಗಳಿಗೆ ನಾನು ಹೇಗೆ ಕಾರಣ?

ಮಹಾರಾಜಸಿಂಹನು ತನ್ನ ಹೆಂಡಿತಿಯ ಮಾತನ್ನು ಕೇಳಿಯೂ ಕೇಳದವನಂತೆ ತನ್ನ ಕೋಣೆಗೆ ಹೊರಟನು. ಕಮಲಿನಿಯು ದೂರದಲ್ಲಿಯೇ ನಿಂತುಕೊಂಡು ತನ್ನ ಗಂಡನ ಹೇಡಿತನಕ್ಕಾಗಿ ಬಲುವಾಗಿ ಅಸಹ್ಯಪಟ್ಟುಕೊಂಡು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತಾ ಕೊಂಚ ಹೊತ್ತು ನೋಡುತ್ತಿದ್ದ ಬಳಿಕ ಗಂಡನ ಬಳಿಗೈತಂದು—ನಾಥ! ತಮಗೆ ಭಯವೇನೂ ಇಲ್ಲ. ತಾವು ಧೈರ್ಯವನ್ನು ತೆಗೆದುಕೊಳ್ಳುವುದಾದರೆ, ತಾವೇ ಮಾರವಾಡದ ಮಹಾರಾಣಾ ಸಾಹೇಬರಾಗುವಿರಿ. ತಾವು ಎದೆಯನ್ನು ಕಲ್ಲಾಗಿ ಮಾಡಿಕೊಳ್ಳೋಣವಾಗಲಿ; ನಮ್ಮ ದಾರಿಯು ನಿಮಿಷಮಾತ್ರದಲ್ಲಿ ನಿಷ್ಕಂಟಕವಾಗಿ ಬಿಡುವುದು. ಇದು ಸುಲಭವಾದ ಕೆಲಸವು. ಶೂರನಿಗೆ ಪ್ರಾಣವಧೆಯು ಅದೊಂದು ದೊಡ್ಡ ಕೆಲಸವಲ್ಲ. ತಾವು ಮಟ್ಟಿಗೆ ಅದಕ್ಕೆ ಅಂಜುವಿರಿ. ಹೆಂಗುಸಾದ ನಾನು ಒಂದು ದಿನವಾದರೂ ರಕ್ತಪಾತವೆಂಬುದನ್ನೇ ನೋಡಿ ಅರಿಯೆನು; ಆದರೂ ಅನಾಯಾಸವಾಗಿ ನಾನು ಈ ಕೆಲಸವನ್ನು ಮಾಡಲು ಹಿಂಜರಿಯೆನು, ಎಂದು ಧೈರ್ಯದಿಂದ ನುಡಿದಳು.

ಮಹಾರಾಜಸಿಂಹನು ಆವ ಮಾತನ್ನೂ ಆಡದೆ ತಲೆವಾಗಿ ನಿಂತಿರುವುದನ್ನು ನೋಡಿ, ಕಮಲಿನಿಯು ಆದರದಿಂದ ಗಂಡನ ಕೈಗಳನ್ನು ಹಿಡಿದುಕೊಂಡು—ಪ್ರಭೂ! ಆ ಹುಚ್ಚಿಗಾಗಿ ತಾವು ಇನ್ನು ಹೆದರಬೇಕಾದ ಕಾರಣವೇನೂ ಇರುವುದಿಲ್ಲ. ಆ ಹುಚ್ಚಿಯು ನಮ್ಮ ಅಂತಃಪುರಕ್ಕೆ ಬಂದಿದ್ದಳು. ಆಗ ನನ್ನ ಸಖಿಯರು ಆಕೆಯನ್ನು ನಾನೋಪಾಯಗಳಿಂದ ಓಡಿಹೋಗದ ಹಾಗೆ ನೋಡಿಕೊಂಡಿರುವರು. ಇಷ್ಟಾದರೂ ಆಕೆಯಿಂದ ತಮಗೆ ಭಯವಿದ್ದೇ ಇರುವುದೆಂದು ತಾವು ತಿಳಿದಿರುವುದಾದರೆ, ಆ ಹುಚ್ಚಿಯನ್ನು ಕೊಲ್ಲುವುದು ಎಷ್ಟು ಹೊತ್ತಿನ ಕೆಲಸ! ಎಂದಳು.

ಮಹಾರಾಜಸಿಂಹನು ಈ ಮಾತನ್ನು ಕೇಳಿ ತಲೆಯೆತ್ತಿ ಹೆಂಡತಿಯ ಮುಖವನ್ನು ನೋಡಿ—ಪ್ರಿಯೆ! ನೀನು ಹೇಳಿದುದೇನು? ಆ ಹುಚ್ಚಿಯು ನಿಮ್ಮ ಬಳಿಯಲ್ಲಿ ಬಂದಿಯಾಗಿರುವಳೇ? ಎಂದು ಆದರದಿಂದ ಪ್ರಶ್ನೆ ಮಾಡಿದನು.

ಕಮಲಿನಿ—(ನಗುತ್ತಾ) ಪ್ರಭೂ! ತಾವು ಕಿವುಡರಾದು ದಾವಾಗ?

ಮಹಾ—ಆಕೆಯು ಈ ರಾತ್ರಿಯೆಲ್ಲಾ ಇಲ್ಲಿಯೇ ಇರುವಳೇ?

ಕಮಲಿನಿ—ಇಲ್ಲದೇ ಎಲ್ಲಿಗೆ ಹಾಳಾಗಿ ಹೋದಾಳು?

ಮಹಾ—ಹಾಗಾದರೆ ಸರಿಹೋಯಿತು. ಆ ಹುಚ್ಚಿಯನ್ನು ಕೊಂದು ಬಿಟ್ಟರೆ, ನಮಗೆ ಮುಂದೆ ಆವ ಅಪಾಯವೂ ಬರುವಂತಿಲ್ಲ. ಬಳಿಕ ನಾನೇ ಮಾರವಾಡದ ಸಿಂಹಾಸನಾಧಿಪತಿಯಾಗುವುದರಲ್ಲಿ ಆವ ಸಂಶಯವೂ ಇರಲಾರದು, ಖಂಡಿತವಾಗಿಯೂ ಇರಲಾರದು. ಕಮಲಿನೀ!

ಕಮಲಿನಿ—ಅಪ್ಪಣೆ.

ಮಹಾ—ಕಮಲಿನಿ! ಈ ರಾತ್ರಿಯಲ್ಲಿ ಇವೆರಡು ಕೆಲಸಗಳೂ ಒಂದೇ ಕಾಲದಲ್ಲಿ ನಡೆಯುವುದು ಒಳ್ಳೆಯದಲ್ಲವೆ? ನೀನು ಈಗಳೇ ಹೋಗಿ ಆ ಹುಚ್ಚಿಯ ಯೋಗ ಕ್ಷೇಮವನ್ನು ವಿಚಾರಿಸಿಕೊಳ್ಳು. ನಾನು ಮತ್ತೊಂದನ್ನು ವಿಚಾರಿಸಿಕೊಳ್ಳುವೆನು.

ಕಮಲಿನಿ—ಆ ಹುಚ್ಚಿಯ ವಿಷಯವಾಗಿ ತಾವು ಚಿಂತಿಸಬೇಕಾದುದೇನೂ ಇಲ್ಲ.

ಮಹಾ—ಪ್ರಿಯೆ! ಹಾಗಾದರೆ ನೀನು ಹೊರಡು. ನಾನು ನನ್ನ ಕೆಲಸಕ್ಕೆ ತೆರಳುವೆನು. ಇಷ್ಟು ಹೊತ್ತಿಗೆ ಮಹಾರಾಣಿಯೂ ಯುವರಾಜನೂ ನೈಮಂತ್ಯ ನಿದ್ರಿಸುತ್ತಿರಬಹುದು.

ಕಮಲಿನಿ—ತಾವು ಹೊರಡೋಣವಾಗಲಿ. ಭಗವಂತನು ತಮ್ಮ ದೇಹದಲ್ಲಿ ಬಲವನ್ನುಂಟುಮಾಡಲಿ.

ಮಹಾ –ಪ್ರಿಯೆ! ಈಗ ನನಗೆ ಭಗವಂತನಿಂದ ಆಗಬೇಕಾದುದೇನೂ ಇಲ್ಲ. ಈಗ ನನಗೆ ಬೇಕಾದುದು ಪಿಶಾಚಗಳ ಆವಾಹನೆ.

ಮಹಾರಾಜಸಿಂಹನು ಹೀಗೆ ಹೇಳಿ ತನ್ನ ಕೋಣೆಗೆ ಹೊರಟನು. ಕಮಲಿನಿಯು ಅಲ್ಲಿಯೇ ನಿಂತುಕೊಂಡು ಈ ರೀತಿಯಾಗಿ ಚಿಂತಿಸಿದಳು :—

"ಈತನಲ್ಲಿ ನನಗೆ ಕೊಂಚವೂ ನಂಬುಗೆಯಿಲ್ಲ. ಕೆಲಸವಾಗುವವರೆಗೂ ನಾನು ಈತನ ಬಳಿಯಲ್ಲಿಯೇ ಇರಬೇಕು. ನಾನು ಇಲ್ಲದಿದ್ದರೆ ಈತನು ಮಗುವಿಗಿಂತಲೂ ಕಡೆ." ಹೀಗೆ ಚಿಂತಿಸಿ ಕಮಲಿನಿಯು ಮತ್ತೊಂದು ಕಡೆಗೆ ಹೊರಟಳು.

---

## ಇಪ್ಪತ್ತೆರನೆಯ ವಿಲಾಸ

ಅರ್ಧರಾತ್ರದ ಸಮಯ. ಅರಮನೆಯಲ್ಲಿ ಎಲ್ಲೆಲ್ಲಿಯೂ ಪ್ರಶಾಂತತೆಯು ತಾನೇ ತಾನಾಗಿ ಆಧಿಪತ್ಯಮಾಡುತ್ತಿರುವುದು. ಒಂದೊಂದು ವೇಳೆ ಗಾಳಿಯ ಸುಯ್ ಎಂಬ ಧ್ವನಿಯೂ, ಪಕ್ಷಿಗಳ ರಕ್ಕೆಗಳ ಧ್ವನಿಯೂ, ನಾಯಿಗಳ ಬಳ್ ಎಂಬ ಧ್ವನಿಯೂ, ಯಾಮಿಕರ (ಪೋಲೀಸಿನವರ) ಎಚ್ಚರಿಕೆಯೆಂಬ ಧ್ವನಿಯೂ ರಾತ್ರಿಯ ನಿಶ್ಶಬ್ದತೆಯನ್ನು ಭಂಗಪಡಿಸುತ್ತಿದ್ದುವು.

ಇಂತಹ ಅರ್ಧರಾತ್ರದ ಸಮಯದಲ್ಲಿ ಮಹಾರಾಜಸಿಂಹನು ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ತೆರಳುತ್ತಿದ್ದನು. ಕ್ಷುಧಾರ್ತವಾದ ಸಿಂಹದ ಕಣ್ಣುಗಳು ಅಂಧಕಾರದಲ್ಲಿ ಆವ ರೀತಿಯಾಗಿ ಕೆಂಡದಂತೆ ಪ್ರಜ್ವಲಿಸುವುವೋ ಅದೇ ರೀತಿಯಲ್ಲಿ ಮಹಾರಾಜಸಿಂಹನ ಕಣ್ಣುಗಳು ಪ್ರಜ್ವಲಿಸುತ್ತಿದ್ದುವು. ಆತನ ಕೈಯಲ್ಲಿ ಒಂದು ಹರಿತವಾದ ಚೂರಿಯಿದ್ದಿತು. ಅದೂ ಕತ್ತಲೆಯಲ್ಲಿ ತಳತಳನೆ ಹೊಳೆಯುತ್ತಿದ್ದಿತು.

ಆ ಸಮಯದಲ್ಲಿ ಆರಾದರೂ ಆತನನ್ನು ನೋಡಿದ್ದರೆ, ಆತನ ಮುಖ ವಲ್ಲಿ ನಾನಾ ಭಾವಗಳು ತುಂಬಿಕೊಂಡು ಒಂದಕ್ಕೊಂದು ಹೋರಾಡು ತ್ತಿದ್ದುವೆಂದು ಹೇಳಿಬಿಡುತ್ತಿದ್ದರು.

ಮಹಾರಾಜಸಿಂಹನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತಿದ್ದವನು ಮಧ್ಯದಲ್ಲಿ ತಟ್ಟನೆ ನಿಂತುಬಿಟ್ಟನು. ಆತನ ಶರೀರವು ಬಿರುಗಾಳಿಯಿಂದ ಹೊಡೆಯಲ್ಪಟ್ಟ ಅರಳಿಯೆಲೆಯಂತೆ ಥರಥರನೆ ನಡು ಗುತ್ತಿದ್ದಿತು. ಆತನ ಸರ್ವಾಂಗದ ಕೂದಲೂ ಹಲಸಿನ ಕಾಯಿಯ ಮೇಲಣ ಮುಳ್ಳುಗಳಂತಾಗಿ ಬಿಟ್ಟದ್ದಿತು. ಆತನ ಕಣ್ಣು ವಿಸ್ತಾರವಾಗಿ ಬಿರುನೋಟವನ್ನು ಬೀರಿತು; ರಕ್ತದ ಸಂಚಾರವು ವೇಗವಾಗಿ ಹೃದ ಯವು ಡವ್ ಡವ್ ಡವಾ ಡವ್ ಎಂದು ಹೊಡೆದು ಕೊಂಡಿತು; ಬಾಯಿ ಒಣಗಿ ಹೋಗಿ ಮಾತನಾಡುವ ಶಕ್ತಿಯು ಮಾಯವಾಯಿತು. ಈ ರೀತಿಯಾಗಿ ಕಾರಣವಿಲ್ಲದೆ ಅಧೀರನಾದ ಮಹಾರಾಜಸಿಂಹನು ಬಾಯಿಗೆ ಬಂದ ಹಾಗೆ ತೊದಲ್ನುಡಿಗಳಿಂದ ಮಾತನಾಡಿಕೊಂಡನು :—

“ ನನ್ನ ಕೈಯಲ್ಲಿ ಈ ಹರಿತವಾದ ಆಯುಧವಿರುವಾಗ, ನನಗೆ ಭಯವೆಂದರೇನು? ನನ್ನಂತಹ ನರಪಿಶಾಚನನ್ನು ಈಗ ಕೆಣಕಿ ಬದು ಕುವವರಾರು? ಈ ಚೂರಿಯೇ ನನಗೆ ಆಪದ್ಬಂಧುವು. ಈ ಚೂರಿ ಯಿಂದಲೇ ನಾನು ಇಷ್ಟಾರ್ಥವನ್ನು ಸಾಧಿಸಿಕೊಳ್ಳುವೆನು. ನನ್ನನ್ನು ಅಡ್ಡಗಿಸುವವರಾರು? ನನ್ನನ್ನು ಹಿಡಿಯುವವರಾರು? ನನ್ನನ್ನು ಹಿಡಿದು ಬದುಕುವವರಾರು? ಇಲ್ಲವೇ ಅವರು ಸಾಯಬೇಕು; ಇಲ್ಲವೇ ನಾನು ಸಾಯಬೇಕು. ಇದೇನು? ಎಲ್ಲೆಲ್ಲಿಯೂ ಭಯವು ರೂಪವನ್ನು ತಾಳಿ ಬಂದಂತೆ ತೋರುತ್ತಿರುವುದು. ಇದೇನು? ಹೇಡಿಯಂತೆ ನನ್ನ ಮನವು ಹಿಂಜರಿಯುತ್ತಿರುವುದು. ಈ ಭಯವು ಇನ್ನು ಮೇಲೆ ನನ್ನ ಮೇಲೆ ಎಂದಿಗೂ ಆಧಿಪತ್ಯಮಾಡಲಾರದು. ಕಾರಣವೇನೆಂದರೆ— ನಾನು ಈಗಿನ ಮಹಾರಾಜಸಿಂಹನಾಗಿರುವೆನು. ಇಂದು ಮಹಾರಾಜಸಿಂಹನು ಮನು ಷ್ಯನಲ್ಲ; ಇಂದು ಮಹಾರಾಜಸಿಂಹನು ರಾಕ್ಷಸನು. ಈ ರಾಕ್ಷಸ ನಾದ ಮಹಾರಾಜಸಿಂಹನೇ ಇಂದಿನಿಂದ ಮಾರವಾಡದ ಮಹಾರಾಣಾ

ಸಾಹೇಬನು. ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಹತ್ತು ಸಾವಿರ ಲಲಿತಸಿಂಹರನ್ನಾದರೂ ಇರಿದು ಕೊಂದುಬಿಡುವೆನು.''

ಈ ರೀತಿಯಾಗಿ ಹೇಳಿಕೊಂಡ ಮಹಾರಾಜಸಿಂಹನು ಲಲಿತ ಸಿಂಹನ ಮಲಗುವ ಮನೆಯ ಕಡೆಗೆ ದುಡುದುಡನೆ ಓಡಿದನು.

ಮುಂದುಗಡೆ ಒಂದು ದ್ವಾರವಿರುವುದು. ಅದನ್ನು ತೆರೆದ ಕೂಡಲೆ, ಲಲಿತಸಿಂಹನಿಗಾಗಿ ಏರ್ಪಡಿಸಿದ್ದ ಮಲಗುವ ಮನೆ; ಅಲ್ಲಿ ಲಲಿತ ಸಿಂಹನು ನಿಶ್ಚಿಂತನಾಗಿ ನಿದ್ರಿಸುತ್ತಿರುವನು. ಚಿಕ್ಕಪ್ಪನ ಮನೆಯಲ್ಲಿ ಲಲಿತನಿಗೆ ಭಯಕ್ಕೇನು ಕಾರಣವಿದ್ದೀತು? ಮಹಾರಾಜಸಿಂಹನು ಆ ಬಾಗಿಲ ಬಳಿಗೆ ಬಂದು ಕಿವಿಗೊಟ್ಟು ಕೇಳಿದನು. ಒಳಗಿನಿಂದ ಗೊರಿ ಕೆಯ ಶಬ್ದವು ಹೊರಗೆ ಸ್ಪಷ್ಟವಾಗಿ ಕೇಳಿಬರುತ್ತಿದ್ದಿತು.

ಮಹಾರಾಜಸಿಂಹನು ನಿಶ್ಶಬ್ದವಾಗಿ ಬಾಗಿಲನ್ನು ತೆರೆದನು. ಆ ಕೋಣೆಯಲ್ಲಿನ ದೀಪವು ನಿರ್ವಾಣೋನ್ಮುಖವಾಗುವುದರಲ್ಲಿದ್ದಿತು. ಇದರ ಅಸ್ಫುಟವಾದ ಬೆಳಕಿನಲ್ಲಿ ಮಹಾರಾಜಸಿಂಹನು ಸುತ್ತಲೂ ನೋಡಿ ದನು. ಮಂಚದ ಮೇಲೆ ಲಲಿತಸಿಂಹನು ಮುಸುಕನ್ನು ಹಾಕಿಕೊಂಡು ಸುಖವಾಗಿ ನಿದ್ರಿಸುತ್ತಿದ್ದನು.

ಮಹಾರಾಜಸಿಂಹನು ಧೈರ್ಯವನ್ನು ತಾಳಿ ತನ್ನ ಕಯ್ಯಲ್ಲಿದ್ದ ಚೂರಿಯನ್ನು ಬಲವಾಗಿ ಹಿಡಿದುಕೊಂಡು ಕಾಲನ್ನು ಮುಂದೆ ಮುಂದೆ ಎತ್ತಿಡಲಾರಂಭಿಸಿದನು. ಆದರೆ ಅವನ ಹೃದಯವು ಅವನನ್ನು ಹಿಂದೆ ಹಿಂದೆ ತಳ್ಳುತ್ತಿದ್ದಿತು. ಮಹಾರಾಜಸಿಂಹನು ಕ್ಷತ್ರಿಯನು, ಆತನು ಮಹಾವೀರನು, ಆತನು ಮಾರವಾಡದ ಪ್ರಧಾನ ಸೇನಾಪತಿ. ಇಂತಹ ಮಹಾರಾಜಸಿಂಹನು ಮೈಮರೆತು ನಿದ್ರಿಸುತ್ತಿರುವ ತನ್ನ ಅಣ್ಣನ ಮಗನಾದ ಲಲಿತಸಿಂಹನ ಹೃದಯವನ್ನು ಹೇಡಿಯಂತೆ ಚೂರಿಯಿಂದ ಹೇಗೆ ಇರಿದಾನು? ಕಟುಕನಂತೆ ಆತನು ಹೇಗೆ ಕೊಲೆ ಮಾಡಿಯಾನು?

"ಈ ಕೆಲಸವನ್ನು ಘಾತುಕರ ಕೈಯಿಂದಲೇ ಮಾಡಿಸಬಹುದಾ ಗಿದ್ದಿತು. ಹಾಗೆ ಮಾಡುವುದಾದರೆ ನಿಮಿಷಮಾತ್ರದಲ್ಲಿ ಗುಟ್ಟು ರಟ್ಟಾಗಿ

ಬಿಡುವುದು. ತಾನೇ ಮಾಡುವುದಾದರೆ ಆರೂ ಸಂಶಯ ಪಡುವುದಕ್ಕೆ ಆಸ್ಪದವೇ ಇರಲಾರದು. ಒಂದು ವೇಳೆ ಈ ಸುದ್ದಿಯು ಹೇಗೋ ಬಹಿರಂಗವಾಗುವುದಾದರೆ, ಪುರಪ್ರಮುಖರು ಕೊಲೆ ಮಾಡಿದವನನ್ನು ರಾಜನನ್ನಾಗಿ ಎಂದಿಗೂ ಒಪ್ಪಲಾರರು. ಹೀಗಾಗುವುದಾದರೆ ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲವಾಗಿ ಹೋಗುವುದರಲ್ಲಿ ಆವ ಸಂಶಯವೂ ಇರುವುದಿಲ್ಲ. ಆದುದರಿಂದ ಈ ಕೆಲಸವನ್ನು ಇತರರ ಕೈಯಿಂದ ಮಾಡಿಸುವುದಕ್ಕಿಂತಲೂ ಸ್ವಂತವಾಗಿ ಮಾಡುವುದೇ ಮೇಲು."

ಮಹಾರಾಜಸಿಂಹನು ಈ ರೀತಿಯಾಗಿ ಆಲೋಚಿಸಿ ತನ್ನ ಚೂರಿಯನ್ನು ದೃಢವಾಗಿ ಹಿಡಿದುಕೊಂಡು ದುರದುರನೆ ಲಲಿತಸಿಂಹನನ್ನು ನೋಡಿದನು. ಲಲಿತನು ತಾಯಿಯ ತೊಡೆಯ ಮೇಲೆ ಮಗು ಮಲಗಿರುವಂತೆ ನಿರಾತಂಕವಾಗಿ ನಿದ್ರಿಸುತ್ತಿರುವನು. ಆತನ ಗೊರಿಕೆಯು ಒಂದು ಸಲ ಗಟ್ಟಿಯಾಗಿಯೂ ಒಂದು ಸಲ ಮೃದುವಾಗಿಯೂ ಕೇಳಿಬರುತ್ತಿರುವುದು.

ಈ ಸಮಯದಲ್ಲಿ ಮಹಾರಾಜಸಿಂಹನು ಕೋಣೆಯೊಳಗೆ ಪ್ರವೇಶ ಮಾಡುವುದಕ್ಕೆ ಹೊರಟನು; ಆದರೆ ಮುಂದಕ್ಕೆ ಸರಿಯಲು ಅವನ ಕಾಲೇ ಬರಲಿಲ್ಲ. ಇದನ್ನು ನೋಡಿ ಮಹಾರಾಜಸಿಂಹನು 'ಈ ಕೆಲಸವು ನನ್ನಿಂದಾಗಲಾರದು. ಈ ಕೆಲಸಮಾಡಿ ನಾನು ಮಹಾರಾಣನಾಗಬೇಕಾದುದೇನೂ ಇಲ್ಲ. ಇದರ ಮೇಲೂ ನನಗೆ ರಾಜನಾಗಲು ಇಷ್ಟವೇ ಇಲ್ಲ,' ಎಂದುಕೊಂಡು ಹಿಂದಿರುಗಿ ಹೊರಟು ಹೋದನು.

---

## ಇಪ್ಪತ್ತೇಳನೆಯ ವಿಲಾಸ

ಮಹಾರಾಜಸಿಂಹನು ಚಕಿತಚಕಿತನಾಗಿ ಹಿಂದಿರುಗಿ ಬರುತ್ತಿರುವಾಗ, ಆರೋ ಬಂದು ಆತನನ್ನು ಹಿಡಿದಂತಾಗಲು, ಆತನ ದುರವಸ್ಥೆಯು ವರ್ಣನಾತೀತವಾದುದು. ಆತನು ಭಯದಿಂದ ಗಡಗಡನೆ ನಡುಗಿಹೋಗಿ ಅತಿ ಪ್ರಯಾಸದಿಂದ ಹಿಂದಿರುಗಿ ನೋಡಿದನು. ಕಮಲಿನಿಯು ಆತನನ್ನು ಹಿಡಿದು ನಿಂತಿದ್ದಳು. ಆಕೆಯನ್ನು ನೋಡಿದ ಕೂಡಲೆ ಅವನ

ಬಾಯಿಯು ಒಣಗಿ ಹೋಗಿ ಮಾತೇ ನಿಂತುಹೋಯಿತು. ಕಮಲಿನಿಯು, ಅಪ್ರತಿಭನಾಗಿ ನಿಂತಿರುವ ಗಂಡನನ್ನು ನೋಡಿ—ಪ್ರಭೂ! ಕೆಲಸವು ಸಾಂಗವಾಗಿ ನೆರವೇರಿದುದೇ ? ಎಂದು ಪ್ರಶ್ನೆಮಾಡಿದಳು.

ಮಹಾರಾಜಸಿಂಹನು ಇದನ್ನು ಕೇಳಿದ ಕೂಡಲೆ ಒಂದೆರಡು ಹಜ್ಜೆ ಹಿಂದಕ್ಕೆ ಸರಿದು ಮೇಲೂ ಕೆಳಗೂ ನೋಡಿದನು. ಗಂಡನ ದುರವಸ್ಥೆಯನ್ನು ನೋಡಿ ಅಸಹ್ಯಪಟ್ಟ ಕಮಲಿನಿಯು ಇಂತೆಂದಳು :—

"ನನ್ನ ಗಂಡನು ಎಂತಹ ಧೀರನೋ ನಾನು ಕಾಣೆನು! ನಿನ್ನ ಬಾಯಿಂದ ಅದೇಕೆ ಮಾತೇ ಹೊರಡುತ್ತಿಲ್ಲ? ನೀನೇನಾದರೂ ಮೂಕನಾಗಿಬಿಟ್ಟೆಯಾ? ನಿಜವಾಗಿಯೂ ನೀನೇ ಹೇಡಿಯು. ನಿನ್ನಂತಹ ಷಂಡ ಗಂಡನನ್ನು ನಾನೆಲ್ಲಿಯೂ ನೋಡಿಯೂ ಇಲ್ಲ, ಕೇಳಿಯೂ ಇಲ್ಲ. (ಕರ್ಕಶ ಧ್ವನಿಯಿಂದ) ನಿಜವಾಗಿ ಹೇಳು, ಕೆಲಸವು ನಡೆಯಿತೇ ಇಲ್ಲವೇ ? "

ಮೊದಲೇ ಮಾತನಾಡುವುದಕ್ಕೆ ಶಕ್ತಿಯಿಲ್ಲದವನಾಗಿದ್ದ ಮಹಾರಾಜಸಿಂಹನು ಈ ಮಾತನ್ನು ಕೇಳಿದ ಕೂಡಲೆ ಮತ್ತಷ್ಟು ದಿಗಿಲು ಬಿದ್ದವನಾಗಿ ಯತ್ನವಿಲ್ಲದೆ ಊಹೂ ಎಂದು ಗೊಣಗುಟ್ಟಿದನು.

ಊಹೂ ಶಬ್ದವನ್ನು ಕೇಳಿದ ಕೂಡಲೆ ಕಮಲಿನಿಗೆ ಕೋಪವು ತಲೆ ಮೀರಿ ಹೋಯಿತು. ಬಳಿಕ ಆಕೆಯ ಕಣ್ಣುಗಳಿಂದ ಬೆಂಕಿಯ ಕಿಡಿಗಳೇ ಉದುರಲಾರಂಭವಾದುವು. ಆಕೆಯ ಕಠಿನವಾದ ಹೃದಯವು ಕಠಿನತರವಾಗಿ ಹೋಯಿತು. ಆಕೆಯು ಇನ್ನು ತನ್ನ ಮನದ ಆವೇಗವನ್ನು ತಡೆಯಲಾರದವಳಾಗಿ ಮಹಾರಾಜಸಿಂಹನ ಕೈಯಿಂದ ಚೂರಿಯನ್ನು ಕಸಿದುಕೊಂಡು ಹುಚ್ಚಿಯಂತೆ ಲಲಿತಸಿಂಹನ ಕೋಣೆಯ ಕಡೆಗೆ ಓಡಿದಳು. ಆಗ ಕೇಶರಾಶಿಯು ಬಿಚ್ಚಿಕೊಂಡುದೂ, ಉಟ್ಟಿದ್ದ ಸೀರೆಯು ಸಡಲಿ ಹೋದುದೂ ಅವಳ ಗೋಚರಕ್ಕೆ ಬರಲೇ ಇಲ್ಲ. ಕಾರಣವೇನೆಂದರೆ—ಇಂದಿನ ಕಮಲಿನಿಯು ಹಿಂದಿನ ಕಮಲಿನಿಯಾಗಿರಲಿಲ್ಲ. ಇಂದಿನ ಕಮಲಿನಿಯು ಉನ್ಮತ್ತೆಯಾಗಿದ್ದಳು.

ಮಹಾರಾಜಸಿಂಹನು, ತನ್ನ ಹೆಂಡತಿಯು ಹುಚ್ಚಿಯಂತೆ ಓಡಿ ಹೋಗುವುದನ್ನು ನೋಡಿ ತಡೆಯಲಾರದೆ ತಾನೂ ಓಡಿ ಹೋಗಿ ಆಕೆಯನ್ನು ಹಿಡಿದುಕೊಂಡು—ಪ್ರಿಯೆ! ನಿನ್ನ ದೇವತಾಮೂರ್ತಿಯನ್ನು ರಾಕ್ಷಸಿಯನ್ನಾಗಿ ಮಾಡಲು ನನಗೆ ಇಷ್ಟವಿಲ್ಲ. ಅಲಕ್ತಕ (ಕೆಂಪರಗು) ದಿಂದ ಕೆಂಪಗಿರುವ ನಿನ್ನ ಕೈಗಳನ್ನು ಆ ರಕ್ತದ ಕಲೆಗಳಿಂದ ಮಲಿನವನ್ನಾಗಿ ಮಾಡಲಾರೆನು. ಪ್ರಿಯೆ! ರತ್ನಾಭರಣಗಳಿಗೆ ಆಶ್ರಯವಾದ ನಿನ್ನ ಕೈಯಲ್ಲಿ ಆ ಚೂರಿಗೆ ಆಶ್ರಯವು ದೊರೆಯಲಾರದು. ಚೂರಿಯನ್ನು ಬೇಗನೆ ಇತ್ತುಕೊಡು. ಇನ್ನು ನನಗೆ ಇದ್ದ ಅಲ್ಪಸ್ವಲ್ಪ ಭಯವೂ ಈಗ ಮಾಯವಾಗಿ ಹೋದುದು. ಈಗ ನಾನು ಸರ್ವಪಿಶಾಚಗಳ ಏಕಾವತಾರ, ಎಂದು ಹೇಳಿ ಆ ಚೂರಿಯನ್ನು ಆಕೆಯಿಂದ ತೆಗೆದುಕೊಂಡು ಮತ್ತೆ ಲಲಿತನ ಬಳಿಗೆ ಓಡಿದನು.

ಮಹಾರಾಜಸಿಂಹನು ಮೊದಲಿನಂತೆ ಹೆದರಿಕೆಯಿಂದ ಮತ್ತೆಲ್ಲಿಯೂ ನಿಲ್ಲದೆ ಲಲಿತನ ಮಂಚದ ಬಳಿಗೆ ಬಂದು ನಿಂತನು. ಲಲಿತನು ಮುಖವನ್ನು ಮುಚ್ಚಿಕೊಂಡು ಸುಖವಾಗಿ ನಿದ್ರಿಸುತ್ತಿರುವನು. ಇದೇ ಸರಿಯಾದ ಸಮಯವೆಂದು ತಿಳಿದು ಮಹಾರಾಜಸಿಂಹನು ತನ್ನ ಹರಿತವಾದ ಚೂರಿಯಿಂದ ಮಲಗಿದ್ದ ಆ ವ್ಯಕ್ತಿಯ ಎದೆಯನ್ನು ಒಂದೇ ಪೆಟ್ಟಿನಲ್ಲಿ ಇರಿದು ಬಿಟ್ಟನು ಆ ವ್ಯಕ್ತಿಯು ಅಯ್ಯೋ ಎಂದು ಕೂಗಿಕೊಂಡು ಹಾಗೆಯೇ ಸತ್ತು ಬಿದ್ದಿತು.

ತರುವಾಯ ಪಿಶಾಚನಂತಾಗಿದ್ದ ಆ ಮಹಾರಾಜಸಿಂಹನು ತನ್ನ ಚೂರಿಯನ್ನು ಆ ವ್ಯಕ್ತಿಯ ಎದೆಯಿಂದ ಹೊರಗೆ ತೆಗೆದು ನಿಂತ ಕೂಡಲೆ ರಕ್ತವು ಪಿಚಕಾರಿಯಿಂದ ಹೊರಡುವಂತೆ ಚಿಳ್ಳೆಂದು ಹೊರಹೊರಟಿತು. ಆ ರಕ್ತವು ಹತ್ತಿರದಲ್ಲಿಯೇ ನಿಂತಿದ್ದ ಮಹಾರಾಜಸಿಂಹನ ಸರ್ವಾಂಗವನ್ನೂ ತೋಯಿಸಿ ಬಿಟ್ಟಿತು. ಆಗ ಆತನ ಕಣ್ಣಿಗೆ ಎಲ್ಲೆಲ್ಲಿಯೂ ಬೆಂಕಿಯು ಪ್ರಜ್ವಲಿಸುತ್ತಿರುವಂತೆಯೂ, ಅದರ ಮಧ್ಯದಲ್ಲಿ ಮಾಯಾವಿನಿಯಾದ ಆ ಹೆಂಗುಸು ಕತ್ತಿಯನ್ನು ಹಿಡಿದುಕೊಂಡು ಇರಿಯುವುದಕ್ಕೆ ಬರುತ್ತಿರುವಂತೆಯೂ ಗೋಚರಿಸಲಾರಂಭವಾಯಿತು.

ಈ ಮನೋಭಾವನೆಯಿಂದ ಮಹಾರಾಜಸಿಂಹನು ಬದುಕಿರುವ ಹೆಣ ದಂತಾಗಿ, ಬಿಟ್ಟರೆ ಸಾಕೆಂದು ಹೊರಗೆ ಓಡಿಯೋಡಿ ಬಂದು ಬಿಟ್ಟನು.

ಆತನ ಹೆಂಡತಿಯು ಹೊರಗಡೆಯಲ್ಲಿಯೇ ಕಾದುಕೊಂಡಿರುತಿದ್ದಳು. ಆಕೆಯನ್ನು ನೋಡಿದೊಡನೆಯೇ ಮಹಾರಾಜಸಿಂಹನು ಭಯ ದಿಂದ ಚೀತ್ಕಾರಮಾಡುವುದಕ್ಕೆ ಸಿದ್ಧನಾದ ಕೂಡಲೆ, ಕಮಲಿನಿಯು ಅವನ ಬಾಯನ್ನು ಬಲವಾಗಿ ಹಿಡಿದುಕೊಂಡು—ಪ್ರಭೂ! ನೀನು ಹೀಗೆ ಹೆದರಲು ಕಾರಣವೇನು? ನಿಲ್ಲು ನಿಲ್ಲು, ಕೆಲಸವು ಪೂರ್ಣವಾಗಿ ನಡೆದಿರುವುದೋ ಇಲ್ಲವೋ ಎಂಬುದನ್ನು ನಾನೇ ಹೋಗಿ ತಿಳಿದುಕೊಂಡು ಬರುವೆನು, ಎಂದು ನುಡಿದಳು.

ಮಹಾ—ಕಮಲಿನಿ! ನೀನು ಹೋಗಬೇಡ, ಹೋಗಬೇಡ; ನನ್ನಾಣೆಗೂ ಹೋಗಬೇಡ.

ಕಮಲಿನಿ—ನೀನು ಅಧಮಾಧಮ.

ಕಮಲಿನಿಯು ಹೀಗೆ ಹೇಳಿ ಲಲಿತಸಿಂಹನ ಕೋಣೆಗೆ ಬಂದು ಕೊಲೆಯಾದವನು ಬದುಕಿರುವನೇ ಸತ್ತಿರುವನೇ ಎಂಬುವನ್ನು ಅರಿವುದ ಕ್ಕಾಗಿ ಆತನ ಮುಸುಕನ್ನು ತೆರೆದು ನೋಡಿದಳು. ನೋಡಿದ ಕೂಡಲೆ ಕಮಲಿನಿಯು ಹುಲಿಯನ್ನು ಕಂಡ ಹೆಣ್ಣು ಜಿಂಕೆಯಂತೆ ಹಾರಿ ಹಿಂದಕ್ಕೆ ಹೊರಟುಬಂದು, ಮರದ ಬೊಂಬೆಯಂತೆ ಅಲುಗಾಡದೇ ನಿಂತಿದ್ದ ಗಂಡನನ್ನು ಜತೆಯಲ್ಲಿ ಕರೆದುಕೊಂಡು ತನ್ನ ಕೋಣೆಗೆ ಬಂದಳು. ಅಲ್ಲಿ ಗಂಡನನ್ನು ನೋಡಿ—ಪ್ರಭೂ! ನಾವು ಮಾಡಿದ ಕೆಲಸವು ಸರಿ ಹೋಗಲಿಲ್ಲ, ಎಂದಳು.

ಮಹಾ—ಆ ಮುಚ್ಚಿಯನ್ನು ಕೊಂದಲ್ಲದೇ ಆವ ಕೆಲಸವೂ ಸರಿ ಹೋಗಲಾರದು.

ಕಮಲಿನಿ—ಕೆಲಸವೆಲ್ಲವನ್ನೂ ಹಾಳು ಮಾಡಿ ಬಿಟ್ಟಿರುವೆ, ಲಲಿತಸಿಂಹನು ಸಾಯಲಿಲ್ಲ.

ಮಹಾ—(ಬೆರಗಾಗಿ) ಲಲಿತನು ಸಾಯಲಿಲ್ಲ! ಹಾಗೆಂದರೇನು ಕಮಲಿನಿ?

ಕಮಲಿನಿ—ಹಾಗೆಂದರೆ—ಲಲಿತನು ಸಾಯಲಿಲ್ಲವೆಂದರ್ಥವು. ಆದುದರಿಂದ ಈ ರಾತ್ರಿಯಲ್ಲಿಯೇ ಲಲಿತಸಿಂಹನನ್ನು ಕೊಲೆ ಮಾಡಿ ಬಿಡಬೇಕು. ಆತನನ್ನು ಕೊಲೆ ಮಾಡಿದ ಮೇಲೆಯೇ ತಾವು ಮಹಾ ರಾಣಾ ಸಾಹೇಬರಾಗುವಿರಿ.

ಮಹಾ—ಲಲಿತನು ಸಾಯಲಿಲ್ಲವೇ? ಹಾಗಾದರೆ ನಾನು ಆರನ್ನು ಕೊಲೆ ಮಾಡಿದುದು;

ಕಮಲಿನಿ—ಮಹಾರಾಣಾ ಸಾಹೇಬನನ್ನು.

ಮಹಾ—(ನಿಟ್ಟುಸಿರು ಬಿಡುತ್ತಾ) ಸರ್ವನಾಶ ಸರ್ವನಾಶ! ಪಿತೃಹತ್ಯೆ ಪಿತೃಹತ್ಯೆ!

ಮಹಾರಾಜಸಿಂಹನು ಹೀಗೆ ಹೇಳಿ ಆರ್ತನಾದ ಮಾಡುತ್ತಾ ಮೂರ್ಛೆಗೊಂಡು ನೆಲದ ಮೇಲೆ ಬಿದ್ದು ಬಿಟ್ಟನು. ಬಳಿಕ ಕಮಲಿನಿಯು ಆ ಚೂರಿಯನ್ನು ತಾನೇ ತೆಗೆದುಕೊಂಡು ಗಂಡನನ್ನು ನೋಡಿ ತಿರಸ್ಕಾರ ಭಾವದಿಂದ—ನೀನೆಂತಹ ಗಂಡಸು? ನಿನ್ನನ್ನು ನೋಡಿದರೆ ನನಗೆ ಪಶ್ಚಾತ್ತಾಪವೇ ಆಗುತ್ತಿರುವುದು. ನಾನೇ ಈ ಕೆಲಸವನ್ನಾದರೂ ಮಾಡಿ ಬಿಡುವೆನು. ನಾನು ಹೆಂಗುಸಾಗಿರುವುದಕ್ಕಿಂತಲೂ ಗಂಡಸಾಗಿದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿದ್ದಿತು. ನಾನು ಗಂಡಸಾಗಿದ್ದಿದ್ದರೆ ಇಷ್ಟು ಹೊತ್ತಿಗೆ ಮಾರವಾಡದ ಮಹಾರಾಣಾ ಸಾಹೇಬನಾಗಿ ಬಿಡುತ್ತಿದ್ದೆನು. ದೈವೇಚ್ಛೆಯಲ್ಲಿ ನಾನು ಹೆಂಗುಸಾಗಿ ಹುಟ್ಟಬೇಕಾಯಿತು. ಈಗ ಪಶ್ಚಾತ್ತಾಪ ಪಡುವುದರಿಂದ ಪ್ರಯೋಜನವೇನು? ಎಂದು ಹೇಳುತ್ತಾ ಹೊರಗೆ ಹೊರಟಳು.

## ಇಪ್ಪತ್ತೆಂಟನೆಯ ವಿಲಾಸ

ಪಾಠಕ ಮಹಾಶಯ! ನಿದ್ರಿಸುತ್ತಿದ್ದ ಕುಮುದಿನಿಯನ್ನು ಲಲಿತ ಸಿಂಹನು ಬಿಟ್ಟು ಹೊರಟಾಗ, ನಾವೂ ಆತನೊಡನೆಯೇ ಹೊರಟು ಬಂದು ಬಿಟ್ಟೆವು. ಈಗ ಕುಮುದಿನಿಯು ನಿದ್ರೆಯಿಂದ ಎಚ್ಚತ್ತಿರುವಳು. ಅಲ್ಲಿನ ವಿದ್ಯಮಾನಗಳನ್ನು ತಿಳಿಯುವುದಕ್ಕೆ ಈಗ ಒಳ್ಳೆಯ ಸಮಯ ವಾಗಿರುವುದರಿಂದ ನಾವುಗಳೆಲ್ಲರೂ ಅಲ್ಲಿಗೆ ತೆರಳುವ.

ಲಲಿತಸಿಂಹನು ಹೊರಟುಹೋದ ಕೊಂಚ ಹೊತ್ತಿನ ಮೇಲೆ ಕುಮುದಿನಿಯು ಎಚ್ಚತ್ತು ಸುತ್ತಲೂ ನೋಡಿದಳು. ಲಲಿತಸಿಂಹನು ಹತ್ತಿರದಲ್ಲಿ ಎಲ್ಲಿಯೂ ಕಾಣಿಸಲಿಲ್ಲ. ಲಲಿತನು ಎಲ್ಲಿರುವನೆಂಬುದನ್ನು ತಿಳಿಯುವುದಕ್ಕಾಗಿ ಆಕೆಯು ಅರಮನೆಯೆಲ್ಲವನ್ನೂ ಹುಡುಕಿ ನೋಡಿದಳು. ಎಲ್ಲಿಯೂ ಲಲಿತನು ದೃಷ್ಟಿಗೋಚರನಾಗಲಿಲ್ಲ. ತರುವಾಯ ಕುಮುದಿನಿಯು ಧಾರಾಕಾರವಾಗಿ ಕಣ್ಣೀರ ಸುರಿಸುತ್ತಾ ಮಗುವಿನಂತೆ ಅಳಲಾರಂಭಿಸಿದಳು. ಸಖಿಯರು ಎಷ್ಟು ಸಮಾಧಾನ ಮಾಡಿದರೂ ಪ್ರಯೋಜನವಾಗಲಿಲ್ಲ.

ಕುಮುದಿನಿಯು ಮಾಲತಿಯ ಕುತ್ತಿಗೆಯಲ್ಲಿ ಕೈಗಳನ್ನು ಹಾಕಿಕೊಂಡು ದುಃಖಿಸುತ್ತಾ—ಸಖಿ! ನನ್ನ ಅಕ್ಕನು ಸಂತೋಷ ಸಮಾರಂಭಕ್ಕೆ ನನ್ನನ್ನು ಕರೆಯಲಿಲ್ಲವೆಂದು ನನಗೆ ವ್ಯಸನವಿಲ್ಲ. ಆದರೂ ಮೇಲೆ ಮೇಲೆ ಉಕ್ಕಿ ಬರುತ್ತಿರುವ ಈ ಶೋಕಕ್ಕೆ ಕಾರಣವೇನೆಂಬುದೇ ನನಗೆ ತಿಳಿಯದು. ಸಖಿ! ನನಗೇನಾಗುವುದು? ನೀನಾದರೂ ಹೇಳು, ಎಂದು ಅಂಗಲಾಚಿದಳು.

ಮಾಲತಿ—ಇಷ್ಟು ವ್ಯಸನ ಪಡಲು ಕಾರಣವೇನು, ತಾಯೆ? ಯುವರಾಜರು ಇಷ್ಟರಲ್ಲಿಯೇ ಇಲ್ಲಿಗೆ ಬಂದು ಬಿಡುವರು. ಇದಕ್ಕಾಗಿ ಇಷ್ಟೇಕೆ ಅಳಬೇಕು?

ಕುಮುದಿನಿ—ಸಖಿ, ಸಖಿ! ನನ್ನ ಯಜಮಾನರನ್ನು ನಾನು ಮತ್ತೆ ನೋಡುವ ಹಾಗಿಲ್ಲವೆಂದು ನನಗೆ ಹೊಳೆಯುತ್ತಿರುವುದು. ಅವರು ಅಲ್ಲಿಗೆ ಹೋದುದೇಕೆ?

ಮಾಲತಿ—ಅವರು ನಿತ್ಯವೂ ಎಲ್ಲೆಲ್ಲಿಗೋ ಹೋಗುವರು, ಆವಾಪ ಕೆಲಸಗಳನ್ನೋ ಮಾಡುವರು. ಆಗೆಲ್ಲಾ ಅಳದೇ ಇರುವುದೇನು? ಈಗ ಮಟ್ಟಿಗೆ ಅಳಲು ಕಾರಣವೇನು, ತಾಯೀ?

ಕುಮುದಿನಿ—ಈಗೇಕಾದರೋ ನನ್ನ ಮನದಲ್ಲಿ ಅನಿರ್ವಚನೀಯವಾದ ಭಯವೊಂದು ಆವರಿಸಿಕೊಂಡು ನನ್ನನ್ನು ಸುಟ್ಟು ಬೂದಿ ಮಾಡುತ್ತಿರುವುದು. ಅವರು ಅಲ್ಲಿಗೆ ಹೋಗದಿದ್ದರೆ ಚೆನ್ನಾಗಿರುತ್ತಿದ್ದಿತು.

ಮಾಲತಿ—ವ್ಯರ್ಥವಾಗಿ ವ್ಯಸನಪಡಬೇಡವಮ್ಮಾ? ಅವರು ಈಗಳೆಯೋ ಬಂದುಬಿಡುವರು.

ಸಂಭಾಷಣೆಯು ಈ ರೀತಿಯಾಗಿ ನಡೆಯುತ್ತಿರುವಾಗ, ದಾಸಿಯೊಬ್ಬಳು ಬಂದು—ತಾಯಿ! ತಮ್ಮ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಹುಡುಗಿಯೊಬ್ಬಳು ಬಾಗಿಲಲ್ಲಿ ಬಂದು ನಿಂತಿರುವಳು, ಎಂದು ತಿಳಿಸಿದಳು.

ಕುಮುದಿನಿಗೆ ದಾಸಿಯಾಡಿದ ಮಾತು ಕೇಳಿಸದೆ ಸುಮ್ಮನೇ ನೋಡುತ್ತಾ ಕುಳಿತಿರಲು, ಮಾಲತಿಯು ದಾಸಿಯನ್ನು ಕುರಿತು— ಆಕೆ ಯಾರು? ಇಷ್ಟು ಹೊತ್ತಿನಲ್ಲಿ ರಾಜಕುಮಾರಿಯನ್ನು ನೋಡುವುದರಿಂದ ಆಕೆಗೆ ಪ್ರಯೋಜನವೇನು? ಎಂದು ಪ್ರಶ್ನೆ ಮಾಡಿದಳು.

ದಾಸಿ—ನಾನೂ ಆಕೆಗೆ ಈ ಪ್ರಶ್ನೆಯನ್ನೇ ಹಾಕಿದೆನು. ಅದಕ್ಕೆ ಆಕೆಯು ಹೇಳಿದುದೇನೆಂದರೆ—"ಕಾರ್ಯವು ಗುರುತರವಾಗಿರುವುದರಿಂದ, ರಾಜಕುಮಾರಿಯನ್ನು ಅವಶ್ಯವಾಗಿಯೂ ನೋಡಬೇಕು." ಬಳಿಕ ನಾನು "ರಾಜಕುಮಾರಿಗೆ ದೇಹದಲ್ಲಿ ನೆಮ್ಮದಿಯಿಲ್ಲ" ಎಂದು ತಿಳಿಸಿದೆನು. ಅದಕ್ಕೆ ಆಕೆಯು—ರಾಜಕುಮಾರಿಗೆ ಆರೋಗ್ಯವಿರಲಿ, ಇಲ್ಲದಿರಲಿ, ಈ ಸಮಯದಲ್ಲಿ ನಾನು ಆಕೆಯನ್ನು ನೋಡಲೇಬೇಕು. ಇಲ್ಲವಾದರೆ ತುಂಬಾ ಅನರ್ಥವುಂಟಾದೀತು, ಎಂದು ನುಡಿಯುತ್ತಿರುವಳು.

ಕುಮುದಿನಿಯು ಈ ಮಾತನ್ನು ಕೇಳಿದ ಕೂಡಲೆ—ಆಕೆಯನ್ನು ಇಲ್ಲಿಗೆ ಕರೆದುಕೊಂಡು ಬಾ, ಎಂದು ಅಪ್ಪಣೆ ಮಾಡಿದಳು.

ದಾಸಿಯು ಹೊರಟಳು. ಕುಮುದಿನಿಯು ಮತ್ತೆ ಮಾಲತಿಯನ್ನು ಅಪ್ಪಿಕೊಂಡು—ಸಖಿ! ಈ ರಾತ್ರಿಯಲ್ಲಿ ನಮಗೆ ವಿಪತ್ತು ತಪ್ಪದೆ ಕಾದಿರುವುದು. ನನ್ನ ಪ್ರಾಣಪಾದರೋ ಹಾರಿ ಹೋಗುವುದಕ್ಕೆ ತುಟುಗುಟ್ಟುತ್ತಿರುವುದು. ಮಾಲತೀ! ಮಾಲತೀ! ನಾನು ಬದುಕಲಾರೆನಮ್ಮಾ, ಎಂದು ಹೇಳುತ್ತಿರುವಷ್ಟರಲ್ಲಿಯೇ ಆರೋ ಬರುತ್ತಿರುವುದನ್ನು ನೋಡಿ ಸುಮ್ಮನಾದಳು. ಕುಮುದಿನಿಯು ನೋಡುತ್ತಿದ್ದ ಹಾಗೆಯೇ ಆ ಬಾಲಕೆಯು ರಾಜಕುಮಾರಿಯ ಇದಿರಿನಲ್ಲಿ ಬಂದು ನಿಂತಳು. ಆ ಬಾಲಕೆಯು ದಿವ್ಯಸುಂದರ ರೂಪವುಳ್ಳವಳಾಗಿದ್ದಳು. ಆಕೆಯ ವೇಷವೂ ರೂಪಕ್ಕೆ ಅನುರೂಪವಾಗಿಯೇ ಇದ್ದಿತು. ಆಕೆಯ ಆಜಾನುಲಂಬಿತವಾದ ಕೃಷ್ಣಕೇಶರಾಶಿಯು ಆ ಬಾಲಕೆಯ ಶೋಭಾರಾಶಿಯನ್ನು ಇಮ್ಮಡಿಸುವಂತೆ ಚಲಿಸುತ್ತಿದ್ದಿತು. ಆಕೆಯು ಕಾಷಾಯವಸ್ತ್ರವನ್ನುಟ್ಟು ಕುತ್ತಿಗೆಯಲ್ಲಿ ರುದ್ರಾಕ್ಷ ಮಾಲೆಯನ್ನು ಧರಿಸಿದವಳಾಗಿದ್ದರೂ, ಹಣೆಯಲ್ಲಿ ಕುಂಕುಮವನ್ನು ಧಾರಣಮಾಡಿದ್ದಳು. ಆಕೆಯ ಎಡದ ಕೈಯಲ್ಲಿ ಕಮಂಡಲುವೂ, ಬಲದ ಕೈಯಲ್ಲಿ ತ್ರಿಶೂಲವೂ ವಿರಾಜಿಸುತ್ತಿದ್ದುವು. ಆಕೆಯನ್ನು ನೋಡಿದ ಕೂಡಲೆ ಕೈಲಾಸವಾಸಿನಿಯಾದ ಪಾರ್ವತಿಯು ಭೂಮಂಡಲದಲ್ಲಿ ಅವತರಿಸಿ ಪ್ರತ್ಯಕ್ಷವಾಗಿ ಬಂದಿರುವಳೋ ಎಂಬಂತೆ ನೋಟಕರಿಗೆ ಬೋಧನಾಗುತ್ತಿದ್ದಿತು.

ಈ ದಿವ್ಯ ಮೂರ್ತಿಯನ್ನು ನೋಡಿದ ಕ್ಷಣವೇ ಕುಮುದಿನಿಯು ಬೆರಗಾಗಿ ಕುಳಿತು ಬಿಟ್ಟಳು; ಅವಳ ಕಣ್ಣುಗಳು ಸ್ಪಂದಹೀನವಾದುವು; ಅಂಗಾಂಗಗಳು ಸ್ವಾಧೀನ ತಪ್ಪಿದುವು: ನಿಶ್ವಾಸ ಪ್ರಶ್ವಾಸಗಳು ಕಡಮೆಯಾಗುತ್ತಾ ಬಂದುವು.

ಸನ್ಯಾಸಿನಿಯಾದ ಹುಡುಗಿಯು ಮೆಲ್ಲ ಮೆಲ್ಲನೆ ಕುಮುದಿನಿಯ ಬಳಿಗೆ ಬಂದು ನಿಂತುಕೊಂಡು ಮಾತನಾಡುವುದರಲ್ಲಿದ್ದಳು. ಆಗ ಕುಮುದಿನಿಯು ಮಾಲತಿಯನ್ನು ಅಪ್ಪಿಕೊಂಡು—ಸಖಿ ಮಾಲತಿ!

ನನ್ನನ್ನು ಹಿಡಿದುಕೊಳ್ಳು, ನನ್ನನ್ನು ಹಿಡಿದುಕೊಳ್ಳು, ಈಕೆಯನ್ನು ನೋಡಿದರೆ, ನನಗೆ ಅದೇ ಸ್ವಪ್ನವು ಜ್ಞಾಪಕಕ್ಕೆ ಬರುತ್ತಿರುವುದು, ಎಂದು ಹೇಳಿ ಹುಡುಗಿಯನ್ನು ನೋಡಿ ಎದ್ದು ನಿಂತುಕೊಂಡು—ತಾಯೇ! ನಾನು ಮಾರವಾಡದ ಮಹಾರಾಣಿಯಾಗುವುದಿಲ್ಲ, ಖಂಡಿತವಾಗಿಯೂ ಆಗುವುದಿಲ್ಲ. ನೀನೇ ಮಹಾರಾಣಿಯಾಗುವೆ. ಇದು ಸತ್ಯ, ಇದು ಸತ್ಯ, ಇದು ಸತ್ಯ ಎಂದು ಹೇಳುತ್ತಾ ಸನ್ಯಾಸಿನಿಯ ಕಾಲುಗಳ ಮೇಲೆ ಬಿದ್ದು ಮತ್ತೆ ಮಾತನಾಡಿದಳು:—

"ತಾಯೆ! ನಾನು ಎಂದಿಗೂ ಮಹಾರಾಣಿಯಾಗೆನು. ನೀನೇ ಮಹಾರಾಣಿಯಾಗು. ಇದರಿಂದ ನನಗೆ ಕೊಂಚವೂ ವ್ಯಸನವಿಲ್ಲ. ಆದರೆ ಗಂಡನನ್ನು ಮಟ್ಟಿಗೆ ನನ್ನಿಂದ ಬೇರ್ಪಡಿಸ ಬೇಡ. ನಾನು ಗಂಡನನ್ನು ಕ್ಷಣಕಾಲವಾದರೂ ಬಿಟ್ಟಿರಲಾರೆನು, ಬಿಟ್ಟಿರಲಾರೆನು, ಬಿಟ್ಟಿರಲಾರೆನು."

ಸನ್ಯಾಸಿನಿಯೂ ಮಾಲತಿಯೂ ಕುಮುದಿನಿಯನ್ನು ಮೇಲಕ್ಕೆತ್ತುವುದಕ್ಕೆ ಯತ್ನಮಾಡಿದರು. ಆದರೆ, ಕುಮುದಿನಿಯು ಮೇಲೆ ಹೇಳಿದಂತೆ ಅಂಗಲಾಚಿದ ಕೂಡಲೆ ಮೂರ್ಛಿತೆಯಾಗಿ ನೆಲದ ಮೇಲೆ ಬಿದ್ದು ಬಿಟ್ಟಳು.

---

## ಇಪ್ಪತ್ತೊಂಬತ್ತನೆಯ ವಿಲಾಸ

ಮಾಲತೀ ಸನ್ಯಾಸಿನಿಯರು ಕುಮುದಿನಿಯನ್ನು ಎತ್ತಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದರು. ಬಳಿಕ ಮಾಲತಿಯು ಕುಮುದಿನಿಗೆ ಪರಿಪರಿಯಾಗಿ ಶೈತ್ಯೋಪಚಾರ ಮಾಡಿದಳು. ಸನ್ಯಾಸಿನಿಯೂ ತನ್ನ ಕಮಂಡಲುವಿನಲ್ಲಿದ್ದ ತೀರ್ಥೋದಕದಿಂದ ಕುಮುದಿನಿಗೆ ಪ್ರೋಕ್ಷಣೆ ಮಾಡಿದಳು. ಮಾಲತಿಯು ದಾಸಿಯರನ್ನು ಕರೆಯುವುದಕ್ಕೆಂದು ಹೊರ ಹೊರಡುವಾಗ, ಸನ್ಯಾಸಿನಿಯು ಮಾಲತಿಯನ್ನು ಅಡ್ಡಗಿಸಿ — ಈಕೆಗೆ ಈಗಳೇ ಜ್ಞಾನೋದಯವಾಗುವುದು, ಇದಕ್ಕಾಗಿ ಗಲಭೆಗೆ ಆಸ್ಪದ ಮಾಡಿಕೊಡಬೇಡ, ಎಂದು ನುಡಿದಳು.

ಕೊಂಚ ಹೊತ್ತಿನೊಳಗಾಗಿ ಕುಮುದಿನಿಯು ಚೇತರಿಸಿಕೊಂಡು ಸುತ್ತಲೂ ನೋಡಲಾರಂಭಿಸಿದಳು. ಆಗ ಸನ್ಯಾಸಿನಿಯು ಇಂತೆಂದಳು:—

“ ರಾಜಕುಮಾರಿ ! ನಾನು ಸತ್ಯವಾಗಿಯೂ ನಿನ್ನ ಸ್ವಾಮಿಯನ್ನು ಅಪಹರಿಸಿಕೊಂಡು ಹೋಗಲು ಬಂದವಳಲ್ಲ. ನಿನ್ನ ಸ್ವಾಮಿಯನ್ನು ನಿನಗೆ ಕೊಟ್ಟುಹೋಗಲು ನಾನು ಬಂದಿರುವೆನು. ಕೇಳು ; ಈ ರಾತ್ರಿಯಲ್ಲಿ ನಿನ್ನ ಸ್ವಾಮಿಗೆ ತುಂಬಾ ವಿಪತ್ತು ಕಾದಿರುವುದು, ಪಾಪಾತ್ಮನೊಬ್ಬನು ಲಲಿತಸಿಂಹನ ಪ್ರಾಣವನ್ನು ತೆಗೆಯುವುದಕ್ಕೆ ಕಾದಿರುವನು. ಹೇಗಾದರೂ ಮಾಡಿ ಆತನನ್ನು ರಕ್ಷಿಸುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವುದು. ”

ಈ ಮಾತನ್ನು ಕೇಳಿದ ಕೂಡಲೆ ಕುಮುದಿನಿಯು ಸನ್ಯಾಸಿನಿಯ ಕೈಗಳನ್ನು ಹಿಡಿದುಕೊಂಡು—ತಾಯೆ ! ಅವರಿಗ ಇಷ್ಟು ಹೊತ್ತಿನೊಳಗಾಗಿ ಏನಾಗಿ ಹೋಗಿರುವುದೋ ಬಲ್ಲವರಾರು ? ನಾನೂ ಅಲ್ಲಿಗೆ ಈಗಳೇ ಹೋಗುವೆನು, ಎಂದುಸುರಿದಳು.

ಸನ್ಯಾಸಿನಿ—ನೀನು ಹೊರಟ ಮಾತ್ರಕ್ಕೆ ಆತನ ಪ್ರಾಣವುಳಿವುದೆಂತು ?

ಕುಮುದಿನಿ—ಹಾಗಾದರೆ ನಾನು ಮಾಡಬೇಕಾದುದೇನು ?

ಸನ್ಯಾ—ಹೇಗಾದರೂ ಮಾಡಿ ಲಲಿತಸಿಂಹನನ್ನು ಮಹಾರಾಜಸಿಂಹನ ಮನೆಯಿಂದ ಹೊರಡಿಸಿಕೊಂಡು ಬರಬೇಕು.

ಕುಮು—ನಾನೇ ಹೋಗಿ ಅವರಿಗೆ ಈ ಮಾತನ್ನು ತಿಳಿಸುವೆನು. ಅವರು ನನ್ನ ಮಾತನ್ನು ತೆಗೆದುಹಾಕಲಾರರು.

ಸನ್ಯಾ—ಆತನು ಕ್ಷತ್ರಿಯನು, ಆತನು ಮಾರವಾಡದ ಯುವರಾಜನು. ಆತನು ಮೃತ್ಯುವೆಂಬುದನ್ನು ಬಲ್ಲವನಾದರೂ, ಹೇಡಿಯಂತೆ ಓಡಿ ಹೋಗಲು ಇಷ್ಟಪಡನು. ಇದರ ಮೇಲೂ ಆತನು ಇಂತಹ ವಿಷಯಗಳಲ್ಲಿ ಹೆಂಡತಿಯ ಮಾತನ್ನು ಕೇಳತಕ್ಕವನಲ್ಲ.

ಕುಮುದಿನಿಯು ಈ ಮಾತನ್ನು ಕೇಳಿದ ಕೂಡಲೆ ಭಯಭ್ರಾಂತೆಯಾಗಿ ಮಾಲತಿಯನ್ನು ಅಪ್ಪಿಕೊಂಡು—ಮಾಲತೀ! ಅವರಿಗೇನಾಗುವುದೋ ಕಾಣೆನಲ್ಲಾ! ಹಾ ಭಗವಂತ! ಅವರಿಗೆ ಮಂಗಳವನ್ನುಂಟುಮಾಡು, ಎಂದು ಪ್ರಲಾಪಿಸಿದಳು.

ಸನ್ಯಾ—ರಾಜಕುಮಾರಿ! ನೀನು ಇಷ್ಟಪಡುವುದಾದರೆ, ನಾನೇ ನಿನಗೆ ಪ್ರತಿನಿಧಿಯಾಗಿ ಹೋಗಿ ಆತನನ್ನು ನೋಡಬೇಕೆಂದಿರುವೆನು. ಪ್ರಾಣಾಪತ್ತು ಸಂಭವಿಸುವುದಕ್ಕಿಂತ ಮೊದಲೇ ಆತನು ಮಹಾರಾಜಸಿಂಹನ ಅರಮನೆಯನ್ನು ತ್ಯಾಗಮಾಡಿ ಬರುವ ಹಾಗೆ ತಕ್ಕ ಪ್ರಯತ್ನ ಮಾಡಿ ನೋಡುವೆನು. ಆದರೆ, ನಾನು ನಿನಗೆ ಪ್ರತಿನಿಧಿಯಾಗಿ ಹೋದುದಕ್ಕೆ ಆತನಿಗೆ ಗುರುತೇನಾದರೂ ಬೇಕಾಗಬಹುದು. ನೀನು ಅದನ್ನು ಸಲ್ಲಿಸಬಲ್ಲೆಯಾ?

ಕುಮು—ತಾಯೆ! ನೀನು ಕೇಳುವುದಾದರೆ, ನಾನು ಏನ ಬೇಕಾದರೂ ಕೊಡುವೆನು.

ಸನ್ಯಾ—ನಿನ್ನ ಬೆರಳಿನಲ್ಲಿರುವ ಆವುಂಗುರವನ್ನಾದರೂ ಕೊಡು. ಆತನು ಅದನ್ನು ಅಡಿಗಡಿಗೂ ನೋಡುತ್ತಿರುವುದರಿಂದ, ನಾನು ಅದನ್ನು ಆತನಿಗೆ ತೋರಿದ ಕೂಡಲೆ, ಆತನು ನನ್ನನ್ನು ನಿನ್ನ ಪ್ರತಿನಿಧಿಯನ್ನಾಗಿ ಅರಿತುಕೊಂಡು ನನ್ನ ಮಾತನ್ನು ನೆರವೇರಿಸಿ ಕೊಡುವನು.

ಕುಮುದಿನಿಯು ಆ ಮಾತಿಗೆ ಪ್ರತಿಯಾಡದೆ ತನ್ನ ಬೆರಳಲ್ಲಿದ್ದ ಉಂಗುರವನ್ನು ಸನ್ಯಾಸಿನಿಯ ಕೈಗೆ ಕೊಟ್ಟಳು. ಸನ್ಯಾಸಿನಿಯು ಅದನ್ನು ತೆಗೆದುಕೊಂಡು ಕೂಡಲೆಯೇ ಅಂತಃಪುರದಿಂದ ಹೊರ ಹೊರಟಳು.

ಅರಮನೆಯ ಹೊರಗೆ ಅಂಧಕಾರದಲ್ಲಿ ಒಂದು ದಾರಿಯ ಪಕ್ಕದಲ್ಲಿ ಪುರುಷನೊಬ್ಬನು ನಿಂತುಕೊಂಡು ಆರನ್ನೋ ನಿರೀಕ್ಷಿಸುತ್ತಿದ್ದನು. ಸನ್ಯಾಸಿನಿಯು ಆತನ ಬಳಿಗೆ ಬಂದು ನಿಲ್ಲಲು, ಆತನು—ಆಯಿತೇ? ಎಂದು ಪ್ರಶ್ನೆಮಾಡಿದನು.

ಸನ್ಯಾ—ಆಯಿತು (ಉಂಗುರವನ್ನು ತೋರಿ) ಇದನ್ನು ತೆಗೆದು ಕೊಳ್ಳು.

ಪುರುಷ—ನನ್ನ ಉದ್ದೇಶವೇನಾದುದು?

ಸನ್ಯಾ—ತಂದೆಯೇ! ಮಾರವಾಡದ ಮಹಾರಾಣಿಯಾಗಲು ನನಗೆ ಇಷ್ಟವಿಲ್ಲ.

ಪುರುಷ—ಅದೇಕೆ?

ಸನ್ಯಾ—ಕುಮುದಿನಿಯನ್ನು ನೋಡಿದ ಕೂಡಲೆ, ನನ್ನ ಆಸೆಯು ದೂರ ಸರಿದು ಹೋದುದು. ನಾನು ಇಂದಿನ ವರೆಗೂ ತಮ್ಮ ಆಜ್ಞೆ ಯನ್ನು ಪಾಲನೆ ಮಾಡಿಕೊಂಡು ಬಂದೆನು. ಇನ್ನು ಮೇಲೆ ನಾನು ಅದನ್ನು ನೆರವೇರಿಸಲಾರದವಳಾಗಿರುವೆನು.

ಪುರುಷ—ಹಾಗಾದರೆ ನೀನು ನನ್ನ ಉದ್ದೇಶವನ್ನು ಹಾಳು ಮಾಡಿದೆ. ಮಗು! ಇದೇ ಅಲ್ಲವೆ ನಿನ್ನ ಕರ್ತವ್ಯ ಪರಾಯಣತೆಯು?

ಸನ್ಯಾ—ತಾವು ನನಗೆ ಮತ್ತಾವ ಕೆಲಸವನ್ನು ಹೇಳಿದರೂ, ನಾನು ಅದನ್ನು ಮನದಣಿಯೆ ನೆರವೇರಿಸಲುಳ್ಳವಳು. ಆದರೆ ಕುಮುದಿ ನಿಯ ಹೃದಯದಿಂದ ಮಟ್ಟಿಗೆ ಲಲಿತಸಿಂಹನನ್ನು ಬೇರ್ಪಡಿಸಲಾರದವ ಳಾಗಿರುವೆನು.

ಪುರುಷ—ಇತರರಿಗಾಗಿಯೂ, ದೇಶಕ್ಕಾಗಿಯೂ, ಸ್ವಸುಖಕ್ಕಾ ಗಿಯೂ ಆವ ಕೆಲಸವನ್ನಾದರೂ ಮಾಡಬಹುದು.

ಸನ್ಯಾ—ತಂದೆಯೇ! ನನ್ನನ್ನು ವ್ಯರ್ಥವಾಗಿ ಮರುಳುಗೊಳಿಸ ಲಾಗದು. ಪ್ರೀತಿಗೂ, ರಾಜ್ಯ ಸುಖಕ್ಕೂ ಸಂಬಂಧವೇನಿರುವುದು? ತಮ್ಮಲ್ಲಿ ಮುಚ್ಚುಮರೆಯಿಲ್ಲದೆ ಅರಿಕೆ ಮಾಡಿಕೊಳ್ಳುವೆನು, ಕ್ಷೇಮೋಣ ವಾಗಲಿ. ಮೂರು ವರ್ಷಗಳ ಹಿಂದೆ ತಾವು ನನಗೆ ಲಲಿತಸಿಂಹನನ್ನು ತೋರಿ, ಆತನೇ ಮಾರವಾಡದ ಮಹಾರಾಣನಾಗುವನೆಂದು ತಿಳಿಸೋಣ ವಾಗಿದ್ದಿತು. ಅಂದು ಮೊದಲು ನಾನು ಆತನ ಮೂರ್ತಿಯನ್ನು ಹೃದಯ

ವಲ್ಲಿ ಧಾರಣಮಾಡಿ ಪೂಜೆಮಾಡುತ್ತಾ ಬಂದೆನು. ನಾನು ಮಾರ ವಾಡದ ಮಹಾರಾಣಿಯಾಗುವ ವಿಷಯವನ್ನು ತಾವು ನನಗೆ ಇಂದಿನ ವರೆಗೂ ತಿಳಿಸಿದವರಲ್ಲ. ಈ ವಿಷಯವನ್ನು ಕೇಳಿ ತಿಳಿದುಕೊಳ್ಳಲು ಆಗ ನನಗೆ ಇಷ್ಟು ಬುದ್ಧಿಯೂ ಇರಲಿಲ್ಲ. ಈಗ ನನಗೆ ಯುಕ್ತಾ ಯುಕ್ತ ಪರಿಶೀಲನೆಯ ಜ್ಞಾನವುಂಟಾಗಿರುವುದರಿಂದ, ನಾನು ಆ ವಿಷ ಯವನ್ನೇ ಹೃದಯದಿಂದ ದೂರಮಾಡಿ ಬಿಟ್ಟಿರುವೆನು. ತಾವು ಈ ವಿಷಯದಲ್ಲಿ ಇನ್ನು ಮೇಲೆ ನನ್ನನ್ನು ನಿರ್ಬಂಧ ಪಡಿಸಲಾಗದು. ತಾವು ಈ ಯುಂಗುರವನ್ನು ತೆಗೆದುಕೊಳ್ಳೋಣವಾಗಲಿ. ಮಾರವಾಡದ ಸಿಂಹಾ ಸನದ ಮೇಲೆ ನನಗಿಂತಲೂ ಯೋಗ್ಯವಾದ ಪಾತ್ರವನ್ನು ಕುಳ್ಳಿರಿಸು ವುದಕ್ಕೆ ತಕ್ಕ ಪ್ರಯತ್ನವನ್ನು ಈಗಳಿಂದಲೂ ಮಾಡೋಣವಾಗಲಿ.

ಆ ಪುರುಷನು ಬಾಯಿ ಮುಚ್ಚಿಕೊಂಡು ಸನ್ಯಾಸಿನಿಯಾಡಿದ ಮಾತೆಲ್ಲವನ್ನೂ ಕೇಳಿ—ಮಗು! ನೀನು ಬುದ್ಧಿ ತಿಳಿದ ಹುಡುಗಿ, ನಿನ್ನನ್ನು ನಾನು ನಿರ್ಬಂಧ ಪಡಿಸುವುದಿಲ್ಲ. ನಿನಗೆ ತೋರಿಬಂದಂತೆ ಮಾಡು. ಈಗ ಲಲಿತಸಿಂಹನ ಉದ್ಧಾರವಾಗ ಬೇಕಾದುದು ಅತ್ಯಾ ವಶ್ಯಕವು, ಎಂದು ನುಡಿದನು.

ಸನ್ಯಾ—ತಂದೆಯೇ! ಲಲಿತನನ್ನು ಉದ್ಧಾರಮಾಡುವುದಾಗಿ ನಾನು ಕುಮುದಿನಿಯ ಬಳಿಯಲ್ಲಿ ಮಾತ ಕೊಟ್ಟು ಬಂದಿರುವೆನು.

ಪುರುಷ—ಹಾಗಾದರೆ ತಡವೇಕೆ?

ಹೀಗೆ ಮಾತನಾಡಿಕೊಂಡ ಬಳಿಕ ಇಬ್ಬರೂ ಮಹಾರಾಜಸಿಂಹನ ಅರಮನೆಯ ಕಡೆಗೆ ತೆರಳಿದರು.

---

## ಮೂವತ್ತನೆಯ ವಿಲಾಸ

ಲಲಿತಸಿಂಹನು ಮಹಾರಾಜನ ಕೋಣೆಯೊಳಗೆ ಮಲಗುವುದಕ್ಕೆ ಹೋದನೆಂಬುದು ಇದಕ್ಕೆ ಮೊದಲೇ ನಮ್ಮ ವಾಚಕ ಮಹಾಶಯರ ತಿಳಿ ವಿಗೆ ಬಂದಿರುವುದು. ನಮ್ಮ ಲಲಿತಸಿಂಹನು ಹಾಸುಗೆಯ ಮೇಲೆ

ಮಲಗಿಕೊಂಡು ಎಷ್ಟೋ ಹೊತ್ತು ಹೊರಳಾಡಿ ನೋಡಿದನು. ಇಷ್ಟಾದರೂ ಅವನ ಕಣ್ಣಿಗೆ ನಿದ್ರೆಯೇ ಹತ್ತಲಿಲ್ಲ. ಇದರ ಕಾರಣವನ್ನು ಮಟ್ಟಿಗೆ ಅವನು ಅರಿಯದವನಾಗಿದ್ದನು. ಬಲು ಹೊತ್ತಿನ ವರೆಗೂ ಆತನಿಗೆ ನಿದ್ರೆ ಬಾರದುದರಿಂದ, ಆತನು ಆ ಕೋಣೆಯಲ್ಲಿಯೇ, ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ, ತಿರುಗಾಡಲಾರಂಭಿಸಿದನು. ಅದರಲ್ಲಿಯೂ ಬೇಸರವುಂಟಾಗಲು, ಆತನು ಮತ್ತೆ ಹಾಸುಗೆಯ ಮೇಲೆ ಮಲಗಿದನು.

ಎಷ್ಟೋ ಹೊತ್ತಿನ ಮೇಲೆ ಅವನ ಕಣ್ಣುಗಳಿಗೆ ಮೊಬ್ಬು ಹತ್ತಿತು. ಕೂಡಲೆಯೇ ಕಿಟಕಿಯು ತೆರೆದ ಶಬ್ದವಾಗಲು, ಲಲಿತನು ತಟ್ಟನೆದ್ದು ಕತ್ತಿಯನ್ನು ಕೈಗೆ ತೆಗೆದುಕೊಳ್ಳುವುದರಲ್ಲಿದ್ದನು. ಅಷ್ಟರೊಳಗಾಗಿ ಆರೋ ಬಂದು ಲಲಿತನ ಕೈಗಳನ್ನು ಹಿಡಿದುಕೊಂಡರು. ಲಲಿತನು ಹೆದರಿಯೂ ಹೆದರದವನಾಗಿಯೂ ತನ್ನನ್ನು ಹಿಡಿದವನಾರೆಂಬುದನ್ನು ಕಣ್ಣುಬಿಟ್ಟು ನೋಡಿದನು.

ಆತನನ್ನು ಹಿಡಿದಿದ್ದವನು ಒಬ್ಬ ಯುವಕನು. ಆ ಯುವಕನು ಇನ್ನೂ ಹದಿಮೂರು ವರ್ಷದವನಾಗಿದ್ದುದರಿಂದ, ಆತನನ್ನು ಬಾಲಕನೆಂದೇ ಹೇಳಬಹುದಾಗಿದ್ದಿತು. ಆತನ ರೂಪವು ಅನ್ಯಾದೃಶವಾಗಿದ್ದಿತು. ಅದಕ್ಕೆ ಸರಿಯಾಗಿಯೇ ಆತನು ತನ್ನ ವೇಷವನ್ನೂ ಕಲ್ಪಿಸಿಕೊಂಡಿದ್ದನು. ಇಂತಹ ಬಾಲಕನನ್ನು ನೋಡಿ ಹೆದರಿದುದಕ್ಕಾಗಿ, ಲಲಿತನು ನಾಚುಗೆಯಿಂದ ತಲೆವಾಗಿ ನಿಂತನು. ಇದನ್ನು ಕಂಡು ಯುವಕನು ಇಂತೆಂದನು :—

"ಯುವರಾಜ! ನಿನ್ನನ್ನು ಕೊಲ್ಲುವುದಕ್ಕಾಗಿ ಈ ಅರಮನೆಯಲ್ಲಿ ಯತ್ನವು ನಡೆಯುತ್ತಿರುವುದು. ಬದುಕಬೇಕೆಂಬ ಆಸೆಯು ನಿನಗಿರುವುದಾದರೆ, ಕೂಡಲೆಯೇ ಇಲ್ಲಿಂದ ಪಲಾಯನವಾಗು."

ಲಲಿತ—ನೀನಾರು? ನಿನಗೆ ಇದು ತಿಳಿದ ಬಗೆ ಹೇಗೆ? ನನಗೆ ನನ್ನ ಚಿಕ್ಕ ತಂದೆಯ ಮನೆಯಲ್ಲಿಯೂ ಭಯವೇ? ನನ್ನನ್ನು ಕೊಲ್ಲುವವರಾರು? ನಾನು ಇನ್ನೂ ಹುಡುಗನಲ್ಲ; ನಾನು ಹೆಂಗುಸು ಮೊದಲೇ ಅಲ್ಲ. ನಾನಾವರೋ ಯುದ್ಧಮಾಡದೆಯೇ ಸಾಯಲಾರೆನು.

ಯುವಕ—ಯುವರಾಜ ! ನಾನು ನಿನ್ನ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಡುವೆನು. ನನ್ನ ಹೆಸರು ಜುಮೋಲಿಯಾ. ನಾನು ತಮ್ಮ ಹೆಂಡಿತಿ ಕುಮುದಿನಿಯ ಅಪ್ಪಣೆಯ ಪ್ರಕಾರ ಇಲ್ಲಿಗೆ ಬಂದಿರುವೆನು. ಆಕೆಗೆ ಈ ಮೋಸದ ಕೃತ್ಯವು ಹೇಗೆ ಗೊತ್ತ್ತೋ ಅದು ಮಟ್ಟಿಗೆ ನನಗೆ ತಿಳಿಯದು. ನಿನ್ನ ಚಿಕ್ಕ ತಂದೆಯೇ ನಿನ್ನನ್ನು ಕೊಲೆಮಾಡಲು ಸಿದ್ಧನಾಗಿ ನಿಂತಿರುವನು. ನೀನು ಹುಡುಗನಲ್ಲವೆಂಬುದನ್ನೂ, ಹೆಂಗುಸಲ್ಲವೆಂಬುದನ್ನೂ ನಾನು ಚೆನ್ನಾಗಿಯೂ ಬಲ್ಲೆನು. ಮಹಾರಾಜಸಿಂಹನೊಡನೆ ನೀನು ಯುದ್ಧಕ್ಕೆ ನಿಲ್ಲುವುದಾದರೆ, ನೀನು ಜಯಿಸುವೆಯೋ, ಆತನು ಜಯಿಸುವನೋ ಅದನ್ನು ಪ್ರತ್ಯಕ್ಷವಾಗಿ ತಿಳಿಯತಕ್ಕದಾಗಿರುವುದು.

ಲಲಿತ—ಜುಮೋಲಿಯಾ ಎಂಬ ಹೆಸರನ್ನು ನಾನು ಕೇಳಿರುವೆನು. ಜುಮೋಲಿಯನು ಭಿಲ್ಲರ ರಾಜನು. ನಿನ್ನನ್ನು ನೋಡಿದರೆ ಆ ಜುಮೋಲಿಯನ ಜ್ಞಾಪಕ ಬರುತ್ತಿರುವುದು. ನೀನು ನನ್ನ ಹೆಂಡಿತಿಯ ಕಡೆಯಿಂದ ಬಂದಿರುವುದನ್ನು ನಾನು ಹೇಗೆ ನಂಬಲಿ?

ಜುಮೋಲಿಯಾ—ನಿನಗೆ ಈ ಸಂಶಯವುಂಟಾಗುವುದೆಂದೇ ನಾನು ಆಕೆಯನ್ನು ಕೇಳಿ ಈ ಯುಂಗುರವನ್ನು ತಂದಿರುವೆನು. (ಉಂಗುರವನ್ನು ತೋರಿ) ಇದಾರ ಉಂಗುರ, ಯುವರಾಜ?

ಯುವರಾಜನು ಆ ಉಂಗುರವನ್ನು ನೋಡಿದ ಕೂಡಲೆ, ಆತನ ಮುಖವು ಸಂಶಯದಿಂದ ಕಪ್ಪಾಯಿತು. ಬಳಿಕ ಆತನು, " ಇದೇನು, ನಾಚುಗೇಡು! ಭಿಲ್ಲರಾಜನಾದ ಜುಮೋಲಿಯನೊಡನೆ ನನ್ನ ಹೆಂಡಿತಿಗೆ ಪರಿಚಯವೇ! ಹೆಂಗುಸರು ಮಾಯಾವಿನಿಯರು; ಇವರನ್ನು ನಂಬಿಕೊಂಡು ಹಿಗ್ಗುವಾತನಿಗಿಂತಲೂ ಅವಿವೇಕಿಯು ಬೇರೊಬ್ಬನಿರಲಾರನು, " ಎಂದು ಕಳವಳಗೊಂಡನು. ಲೋಕದಲ್ಲಿ ಇಂತಹ ದುರಭಿಪ್ರಾಯವು ಹುಟ್ಟುವುದೇ ಅಡ್ಡಿ, ಹುಟ್ಟಿತೆಂದರೆ, ಎಂತಹ ವಿವೇಕಿಗೂ ಬುದ್ಧಿಯು ವಿಕಲ್ಪವಾಗಿ ಹೋಗುವುದು. ಇದಕ್ಕನುಗುಣವಾಗಿಯೇ ನಮ್ಮ ಲಲಿತಸಿಂಹನಿಗೂ ಬುದ್ಧಿಯಲ್ಲಿ ವಿಕಲ್ಪವುಂಟಾಗಿ ಮುಖದಲ್ಲಿ

ಕೆಂಪೇರಿತು. ಅನುಭವಶಾಲಿಯಾದ ಜುಮೋಲಿಯನು ಲಲಿತನ ಈ ಮನೋಭಾವವನ್ನು ಅರಿತುಕೊಂಡು—ಯುವರಾಜ! ತಮ್ಮ ಸಂಶಯವು ನನಗೆ ಗೊತ್ತಾಯಿತು. ನಾನು ಸಾಕ್ಷಾತ್ತಾಗಿ ಆಕೆಯ ಬಾಯಿಂದಲೇ ತಮ್ಮ ವಿಪತ್ತನ್ನು ಕೇಳಿದವನಲ್ಲ, ಹಾಗೂ ಆಕೆಯಿಂದ ಸಾಕ್ಷಾತ್ತಾಗಿ ಈ ಯುಂಗುರವೂ ನನಗೆ ಬರಲಿಲ್ಲ. ಆಕೆಯ ಸಖಿಯಾದ ಮಾಲತಿಯೊಡನೆ ನನಗೆ ಬಾಂಧವ್ಯವೂ ಪರಿಚಯವೂ ಇರುವುದರಿಂದ, ನಾನು ಆಕೆಯಿಂದ ಎಲ್ಲವನ್ನೂ ತಿಳಿದುಕೊಂಡು ಇಲ್ಲಿಗೆ ಬಂದಿರುವೆನು. ನನ್ನ ಮಾತಿನಲ್ಲಿ ತಮಗೆ ವಿಶ್ವಾಸವಿರುವುದಾದರೆ, ತಾವು ತಡ ಮಾಡದೆ ಇಲ್ಲಿಂದ ಓಡಿ ಹೋಗೋಣವಾಗಲಿ. ಇಗೋ, ನಾನು ಹೊರಟೆನು, ಎಂದು ನುಡಿದನು.

ಲಲಿತ—ಕೊಂಚ ನಿಧಾನಿಸಬೇಕು. (ಪರಿಪರಿಯಾಗಿ ಚಿಂತಿಸಿ) ಮಿತ್ರನೇ! ಆಗ ಆಕೆಯ ಮಾತಿಗೆ ವಿರೋಧವಾಗಿ ನಡೆದುದರಿಂದ, ನನಗೆ ಈ ದುರ್ಯೋಗವುಂಟಾಗಿರುವುದು. ಆದುದರಿಂದ ಈಗಲೂ ಆಕೆಯ ಮಾತಿಗೆ ವಿರೋಧವಾಗಿ ನಡೆದು ಪ್ರಾಣಬಿಡುವುದು ನನಗೆ ಇಷ್ಟವಿಲ್ಲ. ನೀನು ಮುಂದೆ ಮುಂದೆ ತೆರಳು, ನಾನು ನಿನ್ನ ಹಿಂದೆ ಹಿಂದೆಯೇ ಬರುವೆನು.

ಲಲಿತಸಿಂಹನು ಹೀಗೆ ಹೇಳಿ ಒಂದೆರಡು ಹಜ್ಜೆಗಳು ಮುಂದೆ ಸರಿದ ಬಳಿಕ—ಮಿತ್ರನೇ! ನಾನು ಹೊರಟು ಬರಲಾರೆನು. ಕ್ಷತ್ರಿಯನಾಗಿ ಹೇಡಿಯಂತೆ ಪಲಾಯನ ಮಾಡುವುದು ಧರ್ಮವಲ್ಲ, ಎಂದನು.

ಜುಮೋ—ಯುವರಾಜ, ರಾಜಕುಮಾರ! ನಾನೂ ಭಿಲ್ಲರಾಜನೆಂಬುದು ನಿನಗೆ ಗೊತ್ತಿರುವುದು. ನಾನಾವಿಧ ಯುದ್ಧ ವಿದ್ಯೆಯಲ್ಲಿ ವಿಶಾರದನೇ ಆಗಿರುವೆನು. ಹೀಗಿರುವಲ್ಲಿ ಆರೂ ನನ್ನನ್ನು ಕಾಪುರುಷನೆಂದು ಹೇಳುವುದಕ್ಕೆ ಧೈರ್ಯಗೊಳ್ಳರು. ಇಂತಹ ಮೋಸದ ಸಂದರ್ಭಗಳಲ್ಲಿ ನಾನು ಓಡಿಹೋಗಿ ಪ್ರಾಣವನ್ನು ರಕ್ಷಿಸಿಕೊಳ್ಳುವೆನು. ತಲೆ ಗಟ್ಟಿಯೆಂದು ಕಲ್ಲ ಹಾಯುವುದು ವೀರನ ಲಕ್ಷಣವಲ್ಲ. ಕ್ಷತ್ರಿಯನು ಧರ್ಮ ಯುದ್ಧದಲ್ಲಿ ಹೇಡಿಯ ಲಕ್ಷಣವನ್ನು ತೋರಬಾರದು. ಇಂತಹ ಕಾಲಗಳಲ್ಲಿ ಮೋಸಕ್ಕೆ ಮೋಸವೇ ತಕ್ಕ ಉಪಾಯವು.

ಲಲಿತ—ಮಿತ್ರ ಮಹಾಶಯ! ಈಗ ಸಂಶಯವು ಪರಿಹಾರ ವಾದುದು. ನಾವಾದರೋ ಈ ಕಿಟಕಿಯ ಮೂಲಕವಾಗಿಯೇ ಪಲಾಯನ ಮಾಡುವುದು ಕಾಲೋಚಿತವಾದ ಉಪಾಯವೆಂದು ತೋರುವುದು.

ಜುಮೋ—ಯುವರಾಜ! ನಾವು ಆವಾಗಲೂ ಬೆಟ್ಟಗುಡ್ಡಗಳಲ್ಲಿಯೂ ಕಾಡುಮೇಡುಗಳಲ್ಲಿಯೂ ಸಂಚರಿಸತಕ್ಕವರು. ನಮಗೆ ಬಾಗಿಲಾವದೇನು, ಕಿಟಕಿಯಾವದೇನು ; ಎಲ್ಲವೂ ಒಂದೇ ಆಗಿರುವುದು. ಕಿಟಕಿಯಿಂದಲೇ ತೆರಳುವ.

ಹೀಗೆ ಹೇಳಿ ಜುಮೋಲಿಯನು ಲಲಿತಸಿಂಹನನ್ನು ಕರೆದುಕೊಂಡು ಕಿಟಕಿಯ ಮೂಲಕವಾಗಿ ಅರಮನೆಯನ್ನು ದಾಟಿ ಘೋರಾಂಧಕಾರದ ಮಧ್ಯದಲ್ಲಿ ಎಲ್ಲಿಯೋ ಮಾಯವಾಗಿಬಿಟ್ಟನು.

## ಮೂವತ್ತೊಂದನೆಯ ವಿಲಾಸ

ಜುಮೋಲಿಯನೂ ಲಲಿತಸಿಂಹನೂ ಅರಮನೆಯನ್ನು ತ್ಯಾಗಮಾಡಿ ಬೇಗ ಬೇಗನೆ ರಾಜಪ್ರಾಸಾದದ ಬಳಿಗೆ ಬಂದು ಸೇರಿದರು. ಅಷ್ಟು ಹೊತ್ತಿನ ವರೆಗೂ ಆರೂ ಆವ ಮಾತನ್ನೂ ಆಡಲಿಲ್ಲ. ಅರಮನೆಯು ಸಮೀಪಿಸಿದೊಡನೆಯೇ ಲಲಿತನು ಜುಮೋಲಿಯನನ್ನು ಕುರಿತು—ಭಿಲ್ಲರಾಜ! ಇಂದು ನೀನು ನನಗೆ ತುಂಬಾ ಉಪಕಾರಮಾಡಿರುವೆ. ಈ ಯುಪಕಾರಕ್ಕಾಗಿ ನಾನು ನಿನಗೆ ಸಾಯುವ ವರೆಗೂ ಕೃತಜ್ಞನಾಗಿರುವೆನು. ನನ್ನಿಂದ ನಿನಗೆ ಆವ ಕೆಲಸವಾಗಬೇಕಾದರೂ ನಿರಾತಂಕವಾಗಿ ತಿಳಿಸುವವನಾಗು. ನಾನು ಅದನ್ನು ಪ್ರತಿಯಾಡದೆಯೇ ನಡೆಯಿಸಿ ಕೊಡುವೆನು, ಎಂದು ಸಂತೋಷದಿಂದ ಮಾತನಾಡಿದನು.

ಜುಮೋ—(ನಗುತ್ತಾ) ಯುವರಾಜ! ಈ ಯುಂಗುರವನ್ನು ರಾಜಕುಮಾರಿಗಾಗಲಿ, ಮಾಲತಿಗಾಗಲಿ ಕೊಟ್ಟು ಬಿಡೋಣವಾಗಲಿ. ಮುಂದೆ ತಮ್ಮ ಸಾಹಾಯ್ಯವು ಬೇಕಾಗುವ ಕಾಲದಲ್ಲಿ ಅದನ್ನು ತಮ್ಮಿಂದಲೇ ಪಡೆದುಕೊಳ್ಳುವೆನು. ನಮಗೆ ತಾವಲ್ಲದೆ ಮತ್ತಾರಿರುವರು?

ಇದೇ ಸಂದರ್ಭದಲ್ಲಿ ನಾನು ತಮಗೆ ಮತ್ತೊಂದು ವಿಷಯವನ್ನು ತಿಳಿಸಬೇಕೆಂದಿರುವೆನು. ನನ್ನಿಂದ ತಮಗೆ ಸಾಹಾಯ್ಯವು ಬೇಕಾಗ ಬಹುದಾದರೆ, ನಾನೂ ಅದನ್ನು ನೆರವೇರಿಸಿ ಕೊಡುವವನಾಗಿರುವೆನು. ಜುಮೋಲಿಯನು ತನ್ನ ಪ್ರಾಣವನ್ನಾದರೂ ಒತ್ತೆಯಿಟ್ಟು ಪರಕಾರ್ಯ ವನ್ನು ಸಾಧಿಸತಕ್ಕವನೆಂಬುದನ್ನು ನೀವು ಚೆನ್ನಾಗಿಯೂ ಜ್ಞಾಪಕದಲ್ಲಿಟ್ಟಿರ ತಕ್ಕದು.

ಲಲಿತ—ಭಿಲ್ಲರಾಜ! ಇಂದು ನೀನು ನನಗೆ ಮಹೋಪಕಾರ ವನ್ನೆಸಗಿರುವೆ. ಉತ್ತರೋತ್ತರ ಕಾಲಗಳಲ್ಲಿ ನಿನ್ನಿಂದ ನನಗೆ ಉಪಕಾರ ವಾಗಬೇಕಾದರೆ, ನಾನು ನಿನ್ನನ್ನು ಎಲ್ಲಿ ನೋಡಲು ಸಾಧ್ಯವಹುದು?

ಜುಮೋ—ನಾನು ಭಿಲ್ಲರಾಜ್ಯದಲ್ಲಿ ಎಲ್ಲೆಲ್ಲಿಯೂ ಇರುವೆನು. ಈಗ ನಾನು ತಮ್ಮ ಅನುಕೂಲತೆಗಾಗಿ ಅದೊಂದೇರ್ಪಾಡನ್ನು ಮಾಡಿ ಕೊಡುವೆನು. ಈ ನಗರದ ದಕ್ಷಿಣದಿಕ್ಕಿನಲ್ಲಿ ಒಂದು ಶಿವ ದೇವಸ್ಥಾನ ವಿರುವುದು. ಅಲ್ಲಿ ಒಬ್ಬ ಹುಡುಗನು ಒಂದು ಕುದುರೆಯನ್ನು ಇಟ್ಟು ಕೊಂಡು ತಮಗಾಗಿ ಆವಾಗಲೂ ಕಾದಿರುವನು. ತಾವು ನನ್ನನ್ನು ನೋಡಬೇಕೆಂದು ಇಷ್ಟಪಡುವುದಾದರೆ, ಆ ದೇವಸ್ಥಾನಕ್ಕೆ ತೆರಳೋಣ ವಾಗಲಿ. ಮುಂದಣ ಕೆಲಸವೆಲ್ಲವೂ ತಾನಾಗಿಯೇ ನಡೆದು ಹೋಗು ವುದು. ಇದಕ್ಕಾಗಿ ತಾವು ಚಿಂತಿಸಬೇಕಾದುದಿಲ್ಲ.

ಜುಮೋಲಿಯನು ಹೀಗೆ ಹೇಳಿ ಆ ಕತ್ತಲೆಯಲ್ಲಿ ಮಾಯವಾಗಿ ಬಿಟ್ಟನು. ಲಲಿತನೂ ಚಿಂತಾಕ್ರಾಂತ ಹೃದಯನಾಗಿ ತನ್ನ ಅಂತಃಪುರಕ್ಕೆ ತೆರಳಿದನು.

ಕುಮುದಿನಿಯು ಹಾಸುಗೆಯ ಮೇಲೆ ಮಲಗಿರುವಳು. ಚಿಂತೆ ಯಿಂದ ಅವಳ ಕಣ್ಣಿಗೆ ಇನ್ನೂ ನಿದ್ರೆ ಹತ್ತಿರಲಿಲ್ಲ. ಆಕೆಯು ಹಾಸುಗೆ ಯಲ್ಲಿ ಮಲಗಿ ಮನೋವೇದನೆಯಿಂದ ಹೊರಳಾಡುತ್ತಿದ್ದಳು. ಆಗ ಲಲಿತನು ತಟ್ಟನೆ ಹತ್ತಿರಕ್ಕೆ ಬಂದುದನ್ನು ನೋಡಿ ಕುಮುದಿನಿಯು ಎದ್ದು ಬಂದು ಗಂಡನನ್ನು ಅಪ್ಪಿಕೊಂಡು ಗಳಗಳನೆ ಅತ್ತುಬಿಟ್ಟಳು.

ಲಲಿತನು ಕುಮುದಿನಿಯನ್ನು ಮಂಚದ ಮೇಲೆ ಕುಳ್ಳಿರಿಸಿ ಕೊಂಡು ಇಂತೆಂದನು :—

" ಕುಮುದಿನಿ ! ನೀನು ಇಷ್ಟು ಅಧೀರೆಯಾಗಲು ಕಾರಣವೇನು ? ಇಂದು ನನಗೆ ವಿಪತ್ತು ಸಂಭವಿಸುವುದರಲ್ಲಿದ್ದಿತು. ನಿನ್ನ ಪ್ರಯತ್ನ ಬಲದಿಂದ ನನ್ನ ಪ್ರಾಣರಕ್ಷಣೆಯಾಯಿತು. ನೀನು ನಿನ್ನ ಉಂಗುರವನ್ನು ಮಾಲತಿಗೆ ಕೊಟ್ಟು, ವಿಪತ್ತಿದೆಯೆಂಬುದನ್ನು ನನಗೆ ತಿಳಿಯ ಪಡಿಸಿದೆ. ಮಾಲತಿಯು ಭಿಲ್ಲರಾಜನಾದ ಜುಮೋಲಿಯನ ಕೈಗೆ ಆ ಉಂಗುರವನ್ನು ಕೊಟ್ಟಳು. ಜುಮೋಲಿಯನು ತನ್ನ ಪ್ರಾಣವನ್ನು ಲೆಕ್ಕಿಸದೆ ನನ್ನನ್ನು ಉದ್ಧಾರಮಾಡಿದನು. ಇಲ್ಲದಿದ್ದರೆ ನಾನು ಇಷ್ಟು ಹೊತ್ತಿಗೆ ಪ್ರಾಣ ಬಿಡಬೇಕಾಗಿದ್ದಿತು. ಪ್ರಿಯೆ ! ಜುಮೋಲಿಯನು ನನ್ನ ಕೈಗೆ ಕೊಟ್ಟಿರುವ ಉಂಗುರವನ್ನು ತೆಗೆದುಕೊಳ್ಳು. "

ಕುಮುದಿನಿ —ಜುಮೋಲಿಯಾ ! ಆತನಾರು ? ನಾನು ನನ್ನ ಉಂಗುರವನ್ನು ಒಬ್ಬ ಸನ್ಯಾಸಿನಿಯ ಕೈಗೆ ಕೊಟ್ಟದುಂಟು. ನಾನು ಅದನ್ನು ಮತ್ತಾರ ಕೈಗೂ ಕೊಡಲಿಲ್ಲವಲ್ಲಾ !

ಲಲಿತ—ಸನ್ಯಾಸಿನಿಯೇ ! ಆ ಸನ್ಯಾಸಿನಿಯಾರು ? ಕುಮುದಿನಿಯು ನಡೆದುದನ್ನು ನಡೆದ ಹಾಗೆಯೇ ತಿಳಿಸಿದ ಬಳಿಕ, ಲಲಿತಸಿಂಹನು—ಪ್ರಿಯೆ ! ಆತನು ಮಾಲತಿಗೆ ಗೊತ್ತಿಲ್ಲವೇ ? ಆಕೆಯು ನಿನ್ನುಂಗುರವನ್ನು ಜುಮೋಲಿಯನ ಕೈಗೆ ಕೊಡಲಿಲ್ಲವೇ ? ಎಂದು ಪ್ರಶ್ನೆ ಮಾಡಿದನು.

ಕುಮುದಿನಿ—ನಾಥ ! ಜುಮೋಲಿಯನಾರೋ ನನಗೆ ಗೊತ್ತೇ ಇಲ್ಲ. ನನ್ನ ಉಂಗುರವನ್ನು ಸನ್ಯಾಸಿನಿಯ ಕೈಗೆ ನಾನೇ ಕೊಟ್ಟೆನು. (ಕಿವಿಗೊಟ್ಟು ಕೇಳಿ) ಅದೇನು, ಪ್ರಾಣನಾಥ ?

ಲಲಿತ—ಅದೇನು, ಪ್ರಿಯೆ ?

ಕುಮುದಿನಿ—ಪ್ರಭೂ ! ಕುದುರೆಗಳ ನಡಗೆಯ ಶಬ್ದವು ಕೇಳಿ ಬರುವಂತಿದೆ.

ಲಲಿತ—ಅದೆಲ್ಲಿ, ಕುಮುದಿನಿ ?

ಲಲಿತಸಿಂಹನು ಹೀಗೆ ಹೇಳಿ ಕಿವಿಗೊಟ್ಟು ಕುದುರೆಗಳ ಶಬ್ದವನ್ನು ಕೇಳುವುದರಲ್ಲಿದ್ದನು. ಆಗ ದಾಸಿಯೊಬ್ಬಳು ಬಂದು—ಮಹಾಸ್ವಾಮಿ! ಕುಮಾರ ವೀರೇಂದ್ರಸಿಂಹ ಮಹಾಶಯನು ಬಂದು ರಾಜಕಾರ್ಯಕ್ಕಾಗಿ ತಮ್ಮನ್ನು ನೋಡಬೇಕೆಂದು ಬಯಸಿ ಬಾಗಿಲಲ್ಲಿ ನಿಂತಿರುವನು, ಎಂದು ಅರಿಕೆಮಾಡಿದಳು.

ಲಲಿತನು ಅನಿರ್ವಚನೀಯವಾದ ಭಯದಿಂದ ಹೆದರಿದವನಾಗಿ—ಬೇಗನೆಯೇ ಆತನನ್ನು ಒಳಗೆ ಕರೆದುಕೊಂಡು ಬಾ, ಎಂದಪ್ಪಣೆ ಮಾಡಿದನು.

ದಾಸಿಯು ಹೊರಟು ಹೋದಳು. ಬಳಿಕ ಕುಮುದಿನಿಯು ಗಂಡನನ್ನು ಅಪ್ಪಿಕೊಂಡು—ಪ್ರಭೂ! ನನ್ನನ್ನು ಬಿಟ್ಟು ಹೋಗಬೇಡ. ನೀನು ಹೊರಟು ಹೋಗುವುದಾದರೆ, ನಾನೂ ಈ ಲೋಕದಿಂದ ಹೊರಟೇ ಹೋಗುವೆನು, ಎಂದು ನುಡಿದಳು.

ಲಲಿತ—ಕುಮುದಿನಿ! ನಿನ್ನ ಪ್ರಾಣವಿರುವ ವರೆಗೂ ನಾನು ನಿನ್ನನ್ನು ಬಿಟ್ಟು ಹೋಗುವುದೆಂದರೇನು ?

ಕುಮುದಿನಿ—ನನಗೇನೋ ಭಯವಾಗುತ್ತಿರುವುದು.

ಲಲಿತ—ಭಯಕ್ಕೆ ಕಾರಣವೇನು? ಜೀವಮಾನದಲ್ಲಿ ಸಂಪದಾಪತ್ತುಗಳು ಇದ್ದೇ ಇರುವುವು. ಇವಕ್ಕಾಗಿ ಹೆದರಲೇಕೆ?

ಕುಮುದಿನಿ—ಆದರೂ ನನ್ನ ಮನವು ಹೆದರುತ್ತಿರುವುದು, ಪ್ರಭೂ !

ಲಲಿತ—ನೀನು ಹೆದರಬೇಡ, ಕುಮುದಿನಿ! ಸೈರಿಸು ಸೈರಿಸು. ನಾನು ಹೋಗಿ ವೀರೇಂದ್ರನನ್ನು ನೋಡಿ ಮಾತನಾಡಿಕೊಂಡು ಬರುವೆನು.

ಲಲಿತನು ವೀರೇಂದ್ರನನ್ನು ನೋಡುವುದಕ್ಕೆ ಹೊರಟನು.

---

## ಮೂವತ್ತೆರಡನೆಯ ವಿಲಾಸ

ಕುಮಾರ ವೀರೇಂದ್ರಸಿಂಹನು ಲಲಿತಸಿಂಹನಿಗೆ ದೂರದ ಸಹೋದರನು. ಇವರಿಬ್ಬರೂ ಸಮಾನ ವಯಸ್ಕರಾಗಿದ್ದುದರಿಂದ, ಪರಮ ಮಿತ್ರರಾಗಿದ್ದರು. ವೀರೇಂದ್ರನೂ ಲಲಿತನೂ ಆವಾಗಲೂ ಜತೆಯಲ್ಲಿಯೇ ಇದ್ದುಕೊಂಡು ಆನಂದದಿಂದ ಕಾಲವನ್ನು ಕಳೆಯುತ್ತಿದ್ದರು. ಇವರಿಬ್ಬರೂ ಒಬ್ಬರನ್ನೊಬ್ಬರು ಅಗಲಿ ಆವ ಕೆಲಸವನ್ನೂ ಮಾಡುತ್ತಿರಲಿಲ್ಲ.

ಮಹಾರಾಜಸಿಂಹನ ಮನೆಯಲ್ಲಿ ನಡೆದ ಕೊಲೆಯನ್ನು ವೀರೇಂದ್ರಸಿಂಹನೇ ಮೊದಲು ಅರಿತುಕೊಂಡುದು. ಅದು ಆತನಿಗೆ ಗೊತ್ತಾದ ಬಗೆ ಈ ರೀತಿಯಾಗಿದ್ದಿತು :—ಕಮಲಿನಿಗೆ ಮಾಧವಿಯೆಂಬ ಸಖಿಯೊಬ್ಬಳಿರುವಳು. ಆಕೆಯನ್ನು ವೀರೇಂದ್ರಸಿಂಹನು ಮೊದಲಿನಿಂದಲೂ ಪ್ರೀತಿಸುತ್ತಿರುವನು. ಇವರಿಬ್ಬರಿಗೂ ವಿವಾಹವಾಗುವ ಸುದ್ದಿಯು ಒಂದೆರಡು ಕಡೆಗಳಲ್ಲಿ ಉತ್ಪಾದಿತವಾಗಿದ್ದಿತು. ಮಾಧವಿಯು ಆವಾಗಲೂ ಕಮಲಿನಿಯ ಪಕ್ಕದ ಕೋಣೆಯಲ್ಲಿಯೇ ಇದ್ದುಕೊಂಡಿರುವಳು. ಕೊಲೆಯಾದ ರಾತ್ರಿಯಲ್ಲಿ ಕಮಲನಿಯೂ ಮಹಾರಾಜಸಿಂಹನೂ ಏಕಾಂತವಾಗಿ ಮಾತನಾಡುತಿದ್ದುದನ್ನು ಕೇಳಿ ಮಾಧವಿಗೆ ನಿದ್ರಾಭಂಗವಾಯಿತು. ಇಷ್ಟು ಹೊತ್ತಿನಲ್ಲಿ ಇವರಿಬ್ಬರೂ ಮಾತನಾಡುತ್ತಿರುವುದಕ್ಕೆ ಕಾರಣವೇನೆಂಬುದನ್ನು ಅರಿಯುವುದಕ್ಕಾಗಿ ಆಕೆಯು ಕೌತೂಹಲದಿಂದ ಮರೆಯಲ್ಲಿ ನಿಂತು ಕೇಳಲಾರಂಭಿಸಿದಳು. ಅವರಾಡಿಕೊಂಡ ಮಾತುಗಳನ್ನು ಕೇಳಿದ ಕೂಡಲೆ ಮಾಧವಿಯ ತಲೆಯು ತಿರುಗಿದಂತಾಗಿ ಆಕೆಯು ಕೊಂಚ ಹೊತ್ತು ವಿಶ್ರಮಿಸಿಕೊಂಡ ಬಳಿಕ ವೀರೇಂದ್ರನು ಎಲ್ಲಿ ಮಲಗಿದ್ದನೋ ಅಲ್ಲಿಗೆ ನಿಶ್ಶಬ್ದವಾಗಿ ಹೊರಟಳು.

ವೀರೇಂದ್ರನ ಕೋಣೆಯ ಬಾಗಿಲು ದೈವಯೋಗದಿಂದ ಬದ್ಧವಾಗಿದ್ದಿತೇ ಹೊರತು ರುದ್ಧವಾಗಿರಲಿಲ್ಲ. ಮಾಧವಿಯು ಈ ಸುಯೋಗವನ್ನು ಅವಲಂಬಿಸಿಕೊಂಡು ಕೋಣೆಯೊಳಗೆ ಪ್ರವೇಶಮಾಡಿ ಮಂಚದ ಬಳಿಗೈತಂದು ನೋಡಿದಳು. ವೀರೇಂದ್ರನು ಮೈಮರೆತು ನಿದ್ರಿಸು

ತ್ತಿದ್ದನು. ಮಾಧವಿಯು ಸುತ್ತಲೂ ನೋಡಿದವಳಾಗಿ, ವೀರೇಂದ್ರನ ತಲೆಯನ್ನು ಅಲುಗಾಡಿಸಿದಳು. ವೀರೇಂದ್ರನು ಬೆಚ್ಚಿ ಬೆದರಿದವನಾಗಿ ಎದ್ದು ಕುಳಿತು ಸುತ್ತಲೂ ನೋಡಿ—ಮಾಧವಿ! ಇದೇನು, ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ನೀನೊಬ್ಬಳೇ ಬಂದೆ? ಎಂದನು.

ಮಾಧವಿ—ಪ್ರಭೂ! ನಾನು ವ್ಯಭಿಚಾರಿಣಿಯೆಂದು ಭಾವಿಸೋಣವಾಯಿತೇನು? ನಾನು ಕರ್ತವ್ಯಕ್ಕಾಗಿ ನಾಚುಗೆಗೆ ಜಲಾಂಜಲಿಯನ್ನು ಕೊಟ್ಟು ನಿನ್ನ ಬಳಿಗೆ ಬಂದಿರುವೆನು. ಈಗ ಈ ಅರಮನೆಯಲ್ಲಿ ಸರ್ವನಾಶವಾಗಿ ಹೋಗಿರುವುದು. ಮಹಾರಾಜಸಿಂಹನು ಮಹಾರಾಣಾ ಸಾಹೇಬನನ್ನು ಕೊಲೆಮಾಡಿರುವನು. ಇನ್ನು ಲಲಿತಸಿಂಹನನ್ನು ಕೊಲೆಮಾಡುವುದೊಂದೇ ಉಳಿದಿರುವುದು. ಇಲ್ಲಿಯ ಪರಿಸ್ಥಿತಿಯು ಹೀಗಿರುವುದರಿಂದ, ನೀನು ಆತನನ್ನು ಹೇಗಾದರೂ ಮಾಡಿ ಈ ಅರಮನೆಯಿಂದ ದೂರ ಸಾಗಿಸು, ಇಲ್ಲವೆ, ಆತನನ್ನು ಬದುಕಿಸುವುದಕ್ಕೆ ಆವ ಕೆಲಸ ಮಾಡಬೇಕೋ ಅದನ್ನು ತಡಮಾಡದೆಯೇ ನೆರವೇರಿಸು. ಇಲ್ಲಿ ಕಾಲಹರಣಕ್ಕೆ ಕೊಂಚವಾದರೂ ಅವಕಾಶವಿರಲಾರದು. ಇನ್ನು ನಾನು ತೆರಳುವೆನು.

ಮಾಧವಿಯು ಹೀಗೆ ಹೇಳಿ ಅಲ್ಲಿಂದ ಬೇರೆಯ ಕಡೆಗೆ ಹೊರಟು ಹೋದಳು. ಕೂಡಲೆಯೇ ವೀರೇಂದ್ರನೂ, ಮಹಾರಾಣನು ಮಲಗಿ ನಿದ್ರಿಸುತ್ತಿದ್ದ ಕೋಣೆಗೆ ಬಂದು ನೋಡಿದನು. ಆ ಘೋರಕೃತ್ಯದ ದೃಶ್ಯವನ್ನು ನೋಡಿದೊಡನೆಯೇ ವೀರೇಂದ್ರನ ತಲೆಯು ಗಿರ್ರನೆ ತಿರುಗಿ ಹೋಯಿತು. ಬಳಿಕ ಆತನು ಕೊಂಚ ಹೊತ್ತಿನ ಮೇಲೆ ಚೇತರಿಸಿಕೊಂಡು ಮತ್ತೆ ರಕ್ತದ ಪ್ರವಾಹವನ್ನು ನೋಡಲಾರದವನಾಗಿ ಲಲಿತಸಿಂಹನು ಮಲಗಿದ್ದ ಕೋಣೆಗೆ ಬಂದು ನೋಡಿದನು. ಅಲ್ಲಿಯೂ ರಕ್ತದ ಕಲೆಗಳು ಬೇಕಾದ ಹಾಗೆ ಚೆಲ್ಲಾಡಿದ್ದುವೇ ಹೊರತು ಲಲಿತನ ಸುಳಿವೇ ಇರಲಿಲ್ಲ. ಇದನ್ನು ನೋಡಿ ಭಯಚಕಿತನಾಗಿ ವೀರೇಂದ್ರನು ಆಲೋಚಿಸಿದನೇನೆಂದರೆ:—

“ ನಾನು ಈ ಸಮಯದಲ್ಲಿ ಮಹಾದ್ವಾರದಿಂದ ಹೊರಗೆ ಹೋಗುವುದಾದರೆ, ಪ್ರಹರಿಗಳು ನನ್ನ ಮೇಲೆ ಸಂಶಯಪಡುವರು. ಬಳಿಕ ಮಹಾರಾಣನನ್ನು ಕೊಂದವನು ನಾನೇ ಎಂದು ಅವರು ನಿರ್ಧರಮಾಡುವುದಕ್ಕೂ ಸಾಕು. ಆದುದರಿಂದ ನಾನು ಕಿಟಕಿಯಿಂದ ಪಾರಾಗುವುದೇ ಮೇಲಾದ ಉಪಾಯವು. ಲಲಿತಸಿಂಹನು ಮೊದಲೇ ವಿಪತ್ತನ್ನು ಶಂಕಿಸಿ ಪ್ರಾಯಿಕವಾಗಿ ಈ ಕಿಟಕಿಯಿಂದಲೇ ಓಡಿ ಹೋಗಿರಬೇಕು. ನಾನೂ ಈ ದ್ವಾರದಿಂದಲೇ ಓಡಿ ಹೋಗಿ ಲಲಿತನಿಗೆ ಈ ಸಮಾಚಾರವನ್ನು ಮೊದಲು ತಿಳಿಸಿ ಆತನನ್ನು ರಕ್ಷಿಸುವೆನು. ತಂದೆಯನ್ನೇ ಕೊಂದ ಮಹಾರಾಜಸಿಂಹನು ಯುವರಾಜನನ್ನು ಕೊಲ್ಲುವುದಿಲ್ಲವೆಂಬುದು ಅದಾವ ನಂಬುಗೆ? ಆದುದರಿಂದ ಆ ನರಘಾತುಕನು ಲಲಿತನನ್ನು ಕೊಲ್ಲುವುದಕ್ಕೆ ರಾಜನ ಅರಮನೆಗೆ ಹೋದರೂ ಹೋಗಬಹುದು. ಇದರಲ್ಲಿ ಆಶ್ಚರ್ಯವೂ ಅಸಾಧ್ಯವೂ ಏನೂ ಇಲ್ಲ. ”

ವೀರೇಂದ್ರನು ಹೀಗೆ ಆಲೋಚಿಸಿ ಕಾಲಹರಣಕ್ಕೆಡೆಗೊಡದೆ, ಕಿಟಕಿಯಿಂದ ಇಳಿಯುಬಿದ್ದು ಅರಮನೆಯಿಂದ ಪಾರಾದನು. ತರುವಾಯ ಒಂದೇ ಉಸಿರಿನಿಂದ ಲಲಿತಸಿಂಹನ ಬಳಿಗೆ ಓಡಿ ಬಂದು ಎಲ್ಲವನ್ನೂ ತಿಳಿಸಿದನು.

ಮಹಾರಾಣನು ಕೊಲೆಯಾದುದನ್ನು ಕೇಳಿ ಲಲಿತನು ಮೊದಮೊದಲು ನಂಬಲಾರದವನಾಗಿ ವೀರೇಂದ್ರನನ್ನು ಕುರಿತು—ವೀರೇಂದ್ರ! ನೀನು ಹೇಳುವುದು ನಿಜವೇ? ನಿದ್ರೆಯಿಂದ ನೀನು ಇನ್ನೂ ಎಚ್ಚತ್ತಿಲ್ಲವೆಂದು ತೋರುವುದು, ಎಂದನು.

ವೀರೇಂದ್ರ—ಲಲಿತ! ನಾನು ಈಗ ತಾನೇ ಅದನ್ನು ಕಣ್ಣಾರೆ ನೋಡಿಕೊಂಡು ಬಂದಿರುವೆನು. ಯುವರಾಜ! ಈಗ ನಮ್ಮ ಮಾರವಾಡದಲ್ಲಿ ಸರ್ವನಾಶವಾಗಿ ಹೋಗಿರುವುದು.

ಲಲಿತಸಿಂಹನು ಮಹಾರಾಣನನ್ನು ತಂದೆಗಿಂತಲೂ ಅತಿಶಯವಾಗಿ ಪ್ರೀತಿಸುತ್ತಿದ್ದುದರಿಂದ, ವೀರೇಂದ್ರನ ಮಾತನ್ನು ಕೇಳಿ ಮಗುವಿನಂತೆ ಗಳಗಳನೆ ಅಳತೊಡಗಿದನು.

ಇದನ್ನು ಕಂಡು ವೀರೇಂದ್ರನು—ಲಲಿತ! ಈಗ ಅಳುವುದಕ್ಕೆ ಕಾಲವಲ್ಲ. ಈಗ, ನಿನಗಾಗಿ ಅಲ್ಲ, ಎಲ್ಲಾ ಮಾರವಾಡದವರ ಪರವಾಗಿಯೂ ನೀನು ನಿನ್ನ ಪ್ರಾಣವನ್ನು ರಕ್ಷಿಸಿಕೊಳ್ಳಬೇಕಾದುದು ಅತ್ಯಾವಶ್ಯಕವಾಗಿರುವುದು, ಎಂದು ನುಡಿದನು.

ಲಲಿತ—ವೀರೇಂದ್ರ! ಈಗ ನಾನೇನ ಮಾಡಲಿ?

ವೀರೇಂದ್ರ—ನೀನು ಇಲ್ಲಿರುವುದಾದರೆ, ನಿನ್ನ ಪ್ರಾಣವುಳಿವುದು ಅಸಾಧ್ಯವಾಗುವುದು. ಆವಾತನು ನಿನ್ನ ತಾತನನ್ನು ಕೊಂದನೋ, ಆತನು ಮಗನನ್ನು ಕೊಲ್ಲುವುದಕ್ಕೂ ಹೇಸನು.

ಲಲಿತ—ಹೇಡಿಯಂತೆ ಓಡಿ ಹೋಗಲೇ?

ವೀರೇಂದ್ರ—ಸೈನ್ಯವೆಲ್ಲವೂ ಮಹಾರಾಜಸಿಂಹನ ಅಧೀನವಾಗಿರುವುದು. ಅದು ಕಾರಣ ಕೆಲವು ಕಾಲದ ವರೆಗಾದರೂ ತಲೆಯನ್ನು ತಪ್ಪಿಸಿಕೊಂಡು ಬದುಕಿರುವುದು ಸರ್ವೋತ್ತಮವಾದುದು. ಪ್ರಜೆಗಳ ಹಾಗೂ ಸೈನ್ಯದವರ ಅಭಿಪ್ರಾಯವನ್ನು ತೆಗೆದುಕೊಂಡು, ಬಳಿಕ ನಾನು ನಿನಗೆ ಮುಂದಣ ವಿಷಯವನ್ನು ತಿಳಿಯಪಡಿಸಿಕೊಳ್ಳುವೆನು.

ಲಲಿತ—ಎಲ್ಲಿಗೆ ಹೋಗಲಿ? (ಜ್ಞಾಪಿಸಿಕೊಂಡು) ಗೊತ್ತಾಯಿತು, ಹೊರಡುವೆನು. ಭಿಲ್ಲರಾಜನನ್ನು ಕಂಡುಕೊಂಡು, ಆತನೊಡನೆ ವಾಸಮಾಡಿಕೊಂಡಿರುವೆನು. ನೀನು ಮುಂದಣ ಸಮಾಚಾರಗಳನ್ನು ಆಗಿಂದಾಗ ಅಲ್ಲಿಗೆ ತಿಳಿಸುತ್ತಿರು.

ವೀರೇಂದ್ರ—ಲಲಿತಸಿಂಹ! ಇಂದಿನಿಂದ ನೀನೇ ಮಾರವಾಡದ ಮಹಾರಾಣನು. ನಿನ್ನ ಅನುಪಸ್ಥಿತಿ (ಇಲ್ಲದಿರುವಿಕೆ) ಯಲ್ಲಿ ಈ ರಾಜ್ಯವನ್ನು ಆಳುವವರಾರು? ನೀನು ಹೊರಡುವುದಕ್ಕೆ ಮೊದಲು ದೊಡ್ಡ ದೊಡ್ಡ ಅಧಿಕಾರಿಗಳನ್ನು ಆಯಾ ಸ್ಥಾನಗಳಲ್ಲಿ ನಿಯಮಿಸಿ ಹೊರಡುವುದು ಯುಕ್ತಾಯುಕ್ತವಾಗಿರುವುದು.

ಲಲಿತ—ವೀರೇಂದ್ರ! ನೀನು ಮಹಾರಾಣಿಯನ್ನು ರಕ್ಷಿಸುವ ಭಾರವನ್ನು ವಹಿಸಿರತಕ್ಕುದು. ಅಘೋರಸಿಂಹನು ಸೇನಾಪತಿಯಾ

ಗಿರಲಿ. ಘನಮಲ್ಲನು ಮಂತ್ರಿಪದವಿಯಿಂದ ನಿವೃತ್ತನಾಗುವುದಾದರೆ, ಅವನ ಮಗನಾದ ರಣಮಲ್ಲನು ಮಂತ್ರಿಯಾಗಿ ನಿಯಮಿಸಲ್ಪಡಬೇಕು. ಕುಮಾರ ಸುರೇಶಸಿಂಹನು ಕೋಶಾಧ್ಯಕ್ಷನಾಗಿರಲಿ. ಇವರೆಲ್ಲರೂ ಏಕಾಭಿಪ್ರಾಯದಿಂದ, ನಾನು ಬರುವ ವರೆಗೂ, ರಾಜ್ಯಭಾರಮಾಡಿಕೊಂಡಿರಲಿ. ನೀನು ಈ ಯಪ್ಪಣೆಯನ್ನು ಮೇಲೆ ಹೇಳಿದವರೆಲ್ಲರಿಗೂ ಬೆಳಗಾದ ಕೂಡಲೆ ತಿಳಿಸು.

ವೀರೇಂದ್ರ—ಅಪ್ಪಣೆಯಾದಂತೆ ತಿಳಿಸುವೆನು.

ಲಲಿತ—ನನಗೆ ನಿತ್ಯವೂ ಇಲ್ಲಿಯ ವಿದ್ಯಮಾನಗಳನ್ನು ತಿಳಿಸುತ್ತಿರಬೇಕು. ಸೈನ್ಯದವರೂ ಪುರಪ್ರಮುಖರೂ ನನ್ನನ್ನು ತ್ಯಾಗಮಾಡಲಾರರೆಂದು ನನಗೆ ನಂಬುಗೆಯುಂಟು.

ವೀರೇಂದ್ರ—ಎಲ್ಲರೂ ನಮ್ಮ ಪಕ್ಷವನ್ನು ಅವಲಂಬಿಸುವಂತೆ ನಾನು ತಕ್ಕ ಏರ್ಪಾಡುಮಾಡುವೆನು.

ಲಲಿತ—ವೀರೇಂದ್ರ ! ನಮ್ಮ ಕುಮುದಿನಿಯು ಇನ್ನೂ ಏನನ್ನೂ ಅರಿಯದ ಬಾಲೆ. ನೀನು ಅವಳ ವಿಷಯದಲ್ಲಿ ತುಂಬಾ ಜಾಗರೂಕನಾಗಿರಬೇಕು.

ವೀರೇಂದ್ರ—ಲಲಿತ ! ನೀನು ಆಕೆಗಾಗಿ ಚಿಂತಿಸಬೇಕಾದುದಿಲ್ಲ. ನಾನು ಆಕೆಯನ್ನು ನನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಕಾಪಿಡುವೆನು.

ಲಲಿತ—ಇನ್ನು ನಾನು ಹೊರಡುವೆನು.

ವೀರೇಂದ್ರ—ಬೇಗನೆಯೇ ಹೊರಡೋಣವಾಗಲಿ. ಇನ್ನು ಕಾಲಹರಣಕ್ಕೆ ಕೊಂಚವೂ ಅವಕಾಶವಿರಲಾರದು.

ಲಲಿತ—ನಾನು ಈಗಳೆಯೇ ಹೊರಡುವೆನು. ನಾನು ಹೊರಟುಹೋಗುವುದಕ್ಕೆ ಮೊದಲು ಒಂದು ಸಲ ಕುಮುದಿನಿಯನ್ನು ನೋಡಿಕೊಂಡು ಹೊರಟೇ ಹೋಗುವೆನು.

---

## ಮೂವತ್ತ ಮೂರನೆಯ ವಿಲಾಸ

ಕುಮುದಿನಿಯು ಬಾಗಿಲ ಬಳಿಯಲ್ಲಿ ನಿಂತುಕೊಂಡು, ಮೇಲೆ ಹೇಳಿದ ಸಂವಾದವೆಲ್ಲವನ್ನೂ ಕಿವಿಯಾರೆ ಕೇಳಿದಳು. ಬಳಿಕ ಆಕೆಯ ಹೃದಯದಲ್ಲಿ ಉಂಟಾದ ಸಂಕಟವನ್ನು ವರ್ಣಿಸಿ ತೀರದು. ಪತಿ ಪ್ರಾಣೆಯಾದವಳು ಆವಾಗಲೂ ಗಂಡನಿಗಾಗಿ ತನ್ನ ಪ್ರಾಣವನ್ನಿಟ್ಟು ಕೊಂಡಿರುವಳು. ಗಂಡನಿಗೆ ವಿಪತ್ತು ಸಂಭವಿಸುವುದಾದರೆ, ಆ ವಿಪತ್ತು ಆತನಿಗಲ್ಲ; ಅದು ಆಕೆಯದೇ ಆಗಿರುವುದು. ನಮ್ಮ ಕುಮುದಿನಿಯೂ ಪತಿಪರಾಯಣೆಯಾಗಿದ್ದುದರಿಂದ, ಆಕೆಯು ಗಂಡನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಆವ ಕೆಲಸವನ್ನಾದರೂ ಮಾಡುವುದಕ್ಕೆ ಹಿಂಜರಿಯತಕ್ಕವಳಾಗಿರಲಿಲ್ಲ. ವಿಪತ್ತು ಬಂದಾಗ, ಧೈರ್ಯವನ್ನು ಅವಲಂಬಿಸಿ ಕೆಲಸಮಾಡುವುದಾದರೆ, ದೈವದ ಸಾಹಾಯ್ಯ ವುಂಟೆಂದು ಆಕೆಯು, ಚೆನ್ನಾಗಿಯೂ ಅರಿತುಕೊಂಡಿದ್ದಳು. ಅದು ಕಾರಣ ಆಕೆಯು, ಗಂಡನು ತನ್ನ ಬಳಿಗೆ ಬರುವುದರೊಳಗಾಗಿ ಕಣ್ಣೀ ರನ್ನು ತೊಡೆದುಕೊಂಡು ಏನೂ ಅರಿಯದವಳಂತೆ ನಿಂತಿದ್ದಳು. ಲಲಿ ತನು ತನ್ನ ಹತ್ತಿರಕ್ಕೆ ಬಂದ ಕೂಡಲೆ ಕುಮುದಿನಿಯು—ನಾಥ! ಇನ್ನು ತಡಮಾಡಲಾಗದು. ಈ ಪಾಪಭೂಮಿಯಲ್ಲಿ ಇನ್ನಿರುವುದು ಮಂಗಳಕರವಲ್ಲ. ತಾವು ಬೇಗನೆ ಎಲ್ಲಿಗಾದರೂ ಹೋಗಿ ಪ್ರಾಣವನ್ನು ಉಳಿಸಿಕೊಳ್ಳೋಣವಾಗಲಿ. 'ಜೀವನ್ ಭದ್ರಾಣಿ ಪಶ್ಯತಿ' ಎಂದು ಬಲ್ಲ ವರು ನುಡಿದಿರುವರು, ಎಂದು ನುಡಿದಳು.

ಕುಮುದಿನಿಯು ಈ ರೀತಿಯಾಗಿ ನುಡಿದ ನುಡಿಯನ್ನು ಕೇಳಿ ಲಲಿತಸಿಂಹನು ಬೆರಗಾಗಿ ಹೋದನು. ಸಂಕಟ ಬಂದಾಗ ತನ್ನ ಹೆಂಡಿ ತಿಯು ಹೀಗೆ ಮಾತನಾಡುವಳೆಂದು ಅವನು ಎಂದಿಗೂ ತಿಳಿದಿರಲಿಲ್ಲ. ಆಕೆಯು ಇಷ್ಟು ಹೊತ್ತಿಗೆ ಎಷ್ಟೋ ಸಲ ಅತ್ತಿರಬೇಕು, ಎಷ್ಟೋ ಸಲ ಸಂಕಟ ಪಟ್ಟಿರಬೇಕು, ಎಷ್ಟೋ ಸಲ ಗಂಡನನ್ನು ಅಪ್ಪಗಿಸಿರಬೇಕು, ಎಷ್ಟೋ ಸಲ ಗಂಡನನ್ನು ಅಪ್ಪಿಕೊಂಡು ಮೂರ್ಛೆಗೊಳ್ಳಬೇಕು. ಇದನ್ನು ನೋಡಿದರೆ ಎಂಥವನಿಗಾದರೂ ಎದೆಯು ಒಡೆದು ಹೋಗದೇ ಇರದು, ಎಂಥವನಿಗಾದರೂ ಅಂತಹ ಹೆಂಡತಿಯನ್ನು ಪರಿತ್ಯಾಗಮಾಡಿ ಹೋಗು

ವುದಕ್ಕೆ ಮನವೇ ಬಾರದು. ಈಗೆ ನೋಡಿದರೆ ಆಕೆಯ ಆ ಭಾವನೆಗಳೆಲ್ಲವೂ ವಿಪರೀತವಾಗಿ ಹೋಗಿರುವುವು. ಇದನ್ನು ಕಂಡು ಲಲಿತನು ಆಶ್ಚರಿಗೊಂಡವನಾಗಿ—ಪ್ರಿಯೆ! ನಿನಗೆ ಇದೆಲ್ಲವೂ ಗೊತ್ತಾಯಿತೇನು? ಎಂದನು.

ಕುಮುದಿನಿ—ನಾಥ! ನಾನು ಎಲ್ಲವನ್ನೂ ಕೇಳಿದೆನು. ತಾವು ಮುಟ್ಟಿಗೆ ತಡಮಾಡಲಾಗದು. ದೂರದಲ್ಲಿ ಆವುದೋ ಕುದುರೆಗಳ ಪದಧ್ವನಿಯು ಕೇಳಿ ಬರುವಂತಿದೆ.

ಲಲಿತ—ಅಷ್ಟು ಭಯಕ್ಕೇನೂ ಕಾರಣವಿರಲಾರದು. ಪ್ರಿಯೆ! ಈಗ ನಾನು ಹೊರಟು ಹೋದರೂ, ಶೀಘ್ರದಲ್ಲಿಯೇ ಇಲ್ಲಿಗೆ ಬಂದು ಬಿಡುವೆನು. ಇದಕ್ಕಾಗಿ ನೀನು ಅಧೀರೆಯಾಗಬೇಕಾದುದಿಲ್ಲ. ದೈವಯೋಗದಿಂದ ಈ ವಿಪತ್ತೆಲ್ಲವೂ ಬೇಗನೆಯೇ ನಿವಾರಣೆಯಾಗಬಹುದು.

ಕುಮುದಿನಿ—ತಮ್ಮ ವಿಪತ್ತಿನಲ್ಲಿ ನಾನು ಅಧೀರೆಯಾಗಬಾರದೆಂದರೇನು?

ಲಲಿತ—ನಮ್ಮ ಪ್ರಿಯ ಬಂಧುವಾದ ವೀರೇಂದ್ರನು ನಿನ್ನನ್ನು ರಕ್ಷಿಸುವುದಾಗಿ ಮಾತ ಕೊಟ್ಟಿರುವನು. ಆತನಂತಹ ಅಕೃತ್ರಿಮನೆನಿಸಿದ ಆಪದ್ಬಾಂಧವನು ಈ ಪ್ರಪಂಚದಲ್ಲಿ ಮತ್ತಾರೂ ಇರಲಿಕ್ಕಿಲ್ಲ.

ಕುಮುದಿನಿ—ಹಾಗಾದರೆ ಸರಿ. ತಾವು ತೆರಳೋಣವಾಗಲಿ. ಅಗೋ! ಅಲ್ಲಿ ಕೇಳಿ ಬರುವ ಶಬ್ದವಾವುದು, ಪ್ರಭೂ?

ಲಲಿತ—ಪ್ರಿಯೆ! ಆವ ಶಬ್ದವೂ ಕೇಳಿ ಬರುತ್ತಿಲ್ಲ. ನೀನು ಭಯಭೀತೆಯಾಗಿರುವುದರಿಂದ, ನಿನಗೆ ಹೀಗೆಲ್ಲಾ ಕೇಳಿ ಬರುತ್ತಿರುವುದು. ನೀನು ಸದರದೆ ಧೈರ್ಯವಾಗಿರು; ನಾನು ಹೋಗಿ ಬರುವೆನು.

ಇಲ್ಲಿಯ ವರೆಗೂ ಉಕ್ಕಿ ಬರುತ್ತಿದ್ದ ದುಃಖದ ವೇಗವನ್ನು ಅತಿ ಪ್ರಯಾಸದಿಂದ ತಡೆದಿದ್ದ ಕುಮುದಿನಿಯು ಇನ್ನು ತಡೆಯಲಾರದವಳಾಗಿ ಗಂಡನನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಲಲಿತ ಸಿಂಹನು ತನ್ನ ಹೆಂಡತಿಯನ್ನು ನಾನೋಪಾಯಗಳಿಂದ ಸಂತೈಸಿದ ಬಳಿಕ

ಆಕೆಯ ಗಲ್ಲವನ್ನು ಚುಂಬಿಸಿ ಅಲ್ಲಿಂದ ಮುಂದಕ್ಕೆ ತೆರಳಿದನು. ಲಲಿತನು ಅಂತಃಪುರವನ್ನು ಬಿಟ್ಟು ಹೋಗುವುದರೊಳಗಾಗಿ ಕುಮುದಿನಿಯು ಹುಚ್ಚಿಯಂತಾಗಿ ಓಡಿ ಬಂದು ಗಂಡನ ಕೈಗಳನ್ನು ಹಿಡಿದುಕೊಂಡು— ಪ್ರಭೂ! ತಮ್ಮಲ್ಲಿ ಮತ್ತೊಂದು ಮಾತನಾಡಬೇಕೆಂದಿರುವೆನು. ತಮ್ಮ ದರ್ಶನವು ಮತ್ತೆ ನನಗೆ ಆಗುವಂತೆ ಕಂಡು ಬರುತ್ತಿಲ್ಲ. ನಾನು ಮಹಾರಾಣಿಯಾಗುವ ಯೋಗವೂ ನನ್ನ ಹಣೆಯಲ್ಲಿ ಬರೆದಿಲ್ಲ. ಮಹಾರಾಣಿಯಾಗತಕ್ಕವಳು ಇಲ್ಲಿಗೆ ಬಂದಿದ್ದಳು. ನಾನು ಅವಳ ಕೈಯಲ್ಲಿಯೇ ಉಂಗುರವನ್ನು ಕೊಟ್ಟೆನು. ನಾನು ಮಹಾರಾಣಿಯಾಗಲಿಲ್ಲವೆಂಬ ದುಃಖವು ನನಗಿಲ್ಲ. ಪ್ರಭೂ! ಆದರೆ, ಆದರೆ, ಆದರೆ—

ಈ ಮಾತನ್ನು ಕೇಳಿದ ಕೂಡಲೆ ಲಲಿತನು ಕಣ್ಣುಗಳಲ್ಲಿ ನೀರ ತಂದುಕೊಂಡನು. ಆತನ ಕಂಠವೂ ದುಃಖದಿಂದ ರುದ್ಧವಾಗಿ ಹೋಯಿತು. ಆದರೂ ಆತನು ಅತಿ ಪ್ರಯಾಸದಿಂದ ಆತ್ಮಾವಲಂಬನೆಮಾಡಿಕೊಂಡು—ಪ್ರಿಯೆ! ನನ್ನಲ್ಲಿ ಮುಚ್ಚುಮರೆಯೇತಕೆ? ಹೇಳಬೇಕಾದುದೆಲ್ಲವನ್ನೂ ನಿರ್ಭಯನಾಗಿ ಹೇಳಿಬಿಡು. ನಿನ್ನ ಬಳಿಯಲ್ಲಿ ರಾಜ್ಯವಾಗಲಿ, ಅಧಿಕಾರವಾಗಲಿ, ಮಾನಾಪಮಾನಗಳೇ ಆಗಲಿ ಒಂದೂ ಇಲ್ಲ. ಅದು ಕಾರಣ ಧೈರ್ಯವಾಗಿ ಹೇಳು, ಎಂದನು.

ಇದನ್ನು ಕೇಳಿ ಕುಮುದಿನಿಯು ಗದ್ಗದ ಸ್ವರದಿಂದ—ನಾಥ! ತಾವು ಆರನ್ನು ಬೇಕಾದರೂ ಮಹಾರಾಣಿಯನ್ನಾಗಿ ಮಾಡಿಕೊಳ್ಳಬಹುದು. ಇದಕ್ಕಾಗಿ ನನಗೆ ಕಿಂಚಿತ್ತಾದರೂ ವ್ಯಸನವಿಲ್ಲ. ಆದರೆ ನಮ್ಮ ಮಗು—ಎಂದು ಅರ್ಧದಲ್ಲಿ ಮಾತನ್ನು ನಿಲ್ಲಿಸಿದಳು.

ಲಲಿತ—ಪ್ರಿಯ ತಮೆ! ಹೇಳುವೆನು, ಕೇಳು. ನಿನ್ನ ಗರ್ಭದಲ್ಲಿ ಗಂಡು ಹುಟ್ಟಲಿ, ಹೆಣ್ಣೇ ಹುಟ್ಟಲಿ, ಅದು ಮಾರವಾಡದ ಸಿಂಹಾಸನದ ಮೇಲೆ ಕುಳಿತುಕೊಳ್ಳುವುದು. ಭಗವಂತನ ಇದಿರಿನಲ್ಲಿ ನಾನು ಈ ಪ್ರತಿಜ್ಞೆಯನ್ನು ಮಾಡುವೆನು. ಬಲು ಮಾತಿನಿಂದೇನು? ನಾನು ಒಂದು ವೇಳೆ ನಿರ್ಬಂಧಕ್ಕೆ ಬದ್ಧನನಾಗಿ ಮತ್ತೆ ಮದುವೆಯಾದರೂ, ನೀನೇ ನನ್ನ ಮಹಾರಾಣಿಯು.

ಕುಮುದಿನಿ—ನಾಥ! ಹೊತ್ತಾಯಿತು, ಇನ್ನು ತಾವು ತೆರಳೋಣವಾಗಲಿ. ಆರೋ ಬರುವಂತಿದೆ. ಆತನೇ ಬಂದರೂ ಬರಬಹುದು

ಲಲಿತ—ಪ್ರಿಯೆ! ಆತನು ಬರುವುದಕ್ಕೆ ಮೊದಲೆಯೇ ನಾನು ಇಲ್ಲಿಂದ ಪಲಾಯನ ಮಾಡಿರುವೆನು. ನಾನು ಆಗಿಂದಾಗೆ ನಿನ್ನ ಯೋಗಕ್ಷೇಮವನ್ನೂ ತೆಗೆದುಕೊಳ್ಳುವೆನು.

ಈ ಸಮಯದಲ್ಲಿ ಹೊರಗೆ ನಿಂತಿದ್ದ ವೀರೇಂದ್ರನು—ಮಹಾರಾಣಾ ಲಲಿತಸಿಂಹ! ಇನ್ನು ತಡಮಾಡುವುದು ಅಪಾಯವು, ಎಂದು ಕೂಗಿದನು. ಈ ಮಾತನ್ನು ಕೇಳಿದ ಕೂಡಲೆ ಲಲಿತಸಿಂಹನು ಹೊರಗೆ ಬಂದು ಬಿಟ್ಟನು. ಬಳಿಕ ಅವರಿಬ್ಬರೂ ಸೇರಿಕೊಂಡು ಅರಮನೆಯನ್ನು ತ್ಯಾಗಮಾಡಿದರು. ಬಾಗಿಲಲ್ಲಿ ಒಂದು ಕುದುರೆಯು ಸಿದ್ಧವಾಗಿ ನಿಲ್ಲಿಸಲ್ಪಟ್ಟದ್ದಿತು. ಲಲಿತಸಿಂಹನು ಕುದುರೆಯನ್ನೇರಿ ನಗರದ ದಕ್ಷಿಣದಿಕ್ಕಿನಲ್ಲಿದ್ದ ಶಿವಾಲಯದ ಕಡೆಗೆ ತೆರಳಿದನು.

ಲಲಿತನು ಹೊರಟು ಹೋದ ಮೇಲೆ ಸಖಿಯರು ಕುಮುದಿನಿಯ ಬಳಿಗೆ ಬಂದು ನೋಡಲಾಗಿ, ಕುಮುದಿನಿಯು ಮೂರ್ಛೆಗೊಂಡಿದ್ದಳು. ಸಖಿಯರು ಆಕೆಗೆ ಎಷ್ಟೋ ಶೈತ್ಯೋಪಚಾರ ಮಾಡಿ ನೋಡಿದರು. ಅದರಿಂದ ಏನೂ ಪ್ರಯೋಜನವಾಗದಿರಲು, ಅವರೆಲ್ಲರೂ ಕುಮುದಿನಿಯ ಸುತ್ತಲೂ ಕುಳಿತುಕೊಂಡು ಅಳುವುದಕ್ಕೆ ಮೊದಲು ಮಾಡಿದರು. ತರುವಾಯ ದಾಸಿಯರು ವೈದ್ಯನನ್ನು ಕರೆದುಕೊಂಡು ಬರುವುದಕ್ಕೆ ದಡಬಡನೆ ತೆರಳಿದರು.

---

## ಮೂವತ್ತನಾಲ್ಕನೆಯ ವಿಲಾಸ

ಯುವರಾಜನು ಮಲಗಿದ್ದ ಕೋಣೆಯ ಹೊರಗಡೆ ಇಬ್ಬರು ಪ್ರಹರಿಗಳು ಬಾಗಿಲನ್ನು ಕಾಯುತ್ತಾ ನಿಂತಿದ್ದರು. ರಾತ್ರಿಯು ಇನ್ನೂ ಬೆಳಗಾಗಿರಲಿಲ್ಲವಾಗಿ, ಆ ಘೋರಾಂಧಕಾರವು ಆ ಪಹರೆಯವರನ್ನು

ಅಧೀರರನ್ನಾಗಿ ಮಾಡಿಬಿಟ್ಟಿತು. ಇಂತಹ ಭಯಂಕರ ರಾತ್ರಿಯನು ಅವರು ಎಂದೆಂದಿಗೂ ನೋಡಿರಲಿಲ್ಲ. ಅಡಿಗಡಿಗೂ ಈ ಘೋರ ರಾತ್ರಿಯು ಭಯಂಕರ ಮೂರ್ತಿಯನ್ನು ತಾಳಿಕೊಂಡು ಅವರ ಮುಂದೆ ನಲಿದಾಡು ತ್ತಿದ್ದಂತೆ ಅವರಿಗೆ ಬೋಧವಾಗಲಾರಂಭವಾಯಿತು.

ರಾತ್ರಿಯ ಪ್ರಕೃತಿಯು ನಿಶ್ಶಬ್ದವಾಗಿರುವುದು. ಪ್ರಪಂಚವೇನಾದರೂ ತನ್ನ ಸ್ಥಾನದಿಂದ ಕಳಚಿ ಬಿದ್ದು ಹೋಯಿತೋ ಎಂಬಂತೆ ಎಲ್ಲೆಲ್ಲಿ ನೋಡಿದರೂ ನಿಶ್ಶಬ್ದತೆಯು ತಾನೇ ತಾನಾಗಿರುವುದು. ಈ ನಿಶ್ಶಬ್ದತೆಯ ಮಧ್ಯದಲ್ಲಿ ಪಿಶಾಚಗಳು ಘೋರ ರೂಪಗಳನ್ನು ತಾಳಿ ಸಂಚರಿಸುತ್ತವೆಯೋ ಎಂಬಂತೆ ಪ್ರಹರಿಗಳು ಭಾವಿಸಿಕೊಂಡು ಬೆಳಗಾದರೆ ಸಾಕೆಂದು ದೇವರಿಗೆ ಬೇಡಿಕೊಳ್ಳುತ್ತಿದ್ದರು. ಒಬ್ಬರಿಗೊಬ್ಬರು ಮಾತನಾಡಿಕೊಳ್ಳುವುದಕ್ಕೆ ಕೂಡ ಅವರಿಗೆ ಧೈರ್ಯವಿಲ್ಲದೇ ಹೋಯಿತು. ಗಟ್ಟಿಯಾಗಿ ಉಸಿರು ಬಿಟ್ಟರೆ ಪಿಶಾಚಗಳು ಎಲ್ಲಿ ಓಡಿ ಬಂದು ಹೆಗಲೇರುವುವೋ ಎಂದು ಪ್ರಹರಿಗಳು ಗದಗದನೆ ನಡುಗಿಹೋದರು. ಅವರಿಗೆ ಅಲುಗಾಡುವುದಕ್ಕೆ ಕೂಡ ಶಕ್ತಿಯಿರಲಿಲ್ಲ. ಇಷ್ಟಾದರೂ ಬೆಳಗಾಗುವ ಸೂಚನೆಯೋ ಕಂಡು ಬರಲಿಲ್ಲ.

ಇಂತಹ ಭಯಂಕರ ಸಮಯದಲ್ಲಿ ಪ್ರಹರಿಗಳ ಇದಿರಿನಲ್ಲಿ ಕರಿಯ ರೂಪವೊಂದು ಬಂದು ನಿಂತಂತಾಯಿತು. ಆ ಕರಾಳ ಮೂರ್ತಿಯ ಕಣ್ಣುಗಳು ಕೆಂಡಗಳಂತೆ ಹೊಳೆಯುತ್ತಿದ್ದುವು. ಇದನ್ನು ನೋಡಿದ ಕೂಡಲೆ ಪ್ರಹರಿಗಳು ಪಿಶಾಚವು ಬಂದಿತೆಂದು ಬೆಚ್ಚಿ ಬೆದರಿದವರಾಗಿ ಕಾಲಿಗೆ ಬುದ್ಧಿ ಹೇಳಿ ಬಿಟ್ಟರು.

ಪ್ರಹರಿಗಳ ಕಣ್ಣಿಗೆ ಬಿದ್ದ ಆ ಕರಾಳ ಮೂರ್ತಿಯು ಪಿಶಾಚವಾಗಿರಲಿಲ್ಲ. ಆ ಮೂರ್ತಿಯೇ ಕಮಲಿನಿಯು. ಆಗಣ ಕಮಲಿನಿಯು ಪಿಶಾಚಗಳಿಗಿಂತಲೂ ಅತಿ ಭಯಂಕರಿಯಾದ ಪಿಶಾಚಿಯಾಗಿದ್ದಳು. ಕಾರಣವೇನೆಂದರೆ—ಲಲಿತಸಿಂಹನನ್ನು ಸಂಹರಿಸಿ ಆತನ ರಕ್ತವನ್ನು ಕಂಠಪೂರ್ತಿಯಾಗಿ ಪಾನಮಾಡಬೇಕೆಂದು ಆಕೆಯು ಉನ್ಮತ್ತೆಯಾಗಿ ಬರುತ್ತಿದ್ದಳು. ಒಂದು ಸಲ ಆರು ಕೊಲೆಮಾಡುವರೋ, ಒಂದು ಸಲ ಆರು

ರಕ್ತದ ಸ್ರಾವವನ್ನು ಕಣ್ಣಾರೆ ನೋಡುವರೋ, ಅವರಿಗೆ ಆ ಭಯವು ಮೂರ ತೊಲಗಿ ಹೋಗುವುದೆಂಬುದು ಲೋಕದೃಷ್ಟವಾಗಿರುವುದು. ಅದ ರಂತೆಯೇ ಕಮಲಿನಿಯು ಶೋಣಿತ ಪಿಪಾಸೆಯಿಂದ ಹಿತಾಹಿತ ಜ್ಞಾನ ಶೂನ್ಯೆಯಾಗಿ ಹುಚ್ಚಿಯಂತಾಗಿಬಿಟ್ಟಿರುವಳು.

ಕಮಲಿನಿಯು ಬಂದೊಡನೆಯೇ ಪ್ರಹರಿಗಳಿಬ್ಬರೂ ದಿಕ್ಕೆಟ್ಟು ಓಡಿ ಹೋದರು. ಬಳಿಕ ಕಮಲಿನಿಯು ಬಾಗಿಲ ಬಳಿಗೆ ಬಂದು ಅದನ್ನು ತಳ್ಳಿ ನೋಡಿದಳು. ಬಾಗಿಲು ಒಳಗಡೆಯಿಂದ ರುದ್ಧವಾಗಿದ್ದಿತಾದ ಕಾರಣ, ಒಳಗೆ ಪ್ರವೇಶಮಾಡಲು ಅವಕಾಶವಾಗಲಿಲ್ಲ. ಆದುದರಿಂದ ಮಹಾ ರಾಣಿಯು ಮಲಗಿದ್ದ ಕೋಣೆಯಿಂದ ಲಲಿತನ ಕೋಣೆಗೆ ಬೇರೊಂದು ಮಾರ್ಗವಿದ್ದುದರಿಂದ, ಆ ಮಾರ್ಗದಿಂದಲೇ ಹೋಗಬೇಕಾಗಿದ್ದಿತು. ಆ ಕೋಣೆಯಿಂದಲೇ ಹೋಗುವುದಕ್ಕೆ ಕಮಲಿನಿಗೆ ಮೊದಲು ಮೊದಲು ಭಯವಾಯಿತು. ಬಳಿಕ ಆಕೆಯು ತನ್ನ ಹೃದಯವನ್ನು ಕಲ್ಲಾಗಿ ಮಾಡಿ ಕೊಂಡು ಭಯಂಕರವಾದ ಆ ಕೋಣೆಯಿಂದಲೇ ಹೊರಟು ಲಲಿತನ ಕೋಣೆಗೆ ಬಂದು ನೋಡಿದಳು.

ಆದರೆ ಪಕ್ಷಿಯು ಪಂಜರದಿಂದ ಹಾರಿ ಹೋಗಿದ್ದಿತು. ಲಲಿತ ಸಿಂಹನು ಅಲ್ಲಿಲ್ಲದಿರುವುದನ್ನು ನೋಡಿದ ಕೂಡಲೆ, ಕಮಲಿನಿಯು ಕ್ಷಣ ಕಾಲ ಬೆಪ್ಪಾಗಿ ಹೋದಳು. ಆಕೆಯ ತಲೆಯು ಸುತ್ತಿ ಕಣ್ಣುಗಳಲ್ಲಿ ಕತ್ತಲೆಯು ಕವಿತುಕೊಂಡು ಬಂದಿತು. ತರುವಾಯ ತಲೆ ಏರಿ ಸುರಾ ಪಾನ ಮಾಡಿದವರು ಆವ ರೀತಿಯಲ್ಲಿ ಹುಚ್ಚು ಹುಚ್ಚಾಗಿ ಆಡುವರೋ, ಕಮಲಿನಿಯೂ ಅದರಂತೆಯೇ ಆದಳೆಂದು ಹೇಳಿದರೂ ಅದು ಸುಳ್ಳಾಗ ಲಾರದು.

ಕಮಲಿನಿಯು ಕೊಂಚ ಹೊತ್ತು ಈ ಯವಸ್ಥೆಯಲ್ಲಿದ್ದು, ಬಳಿಕ ಚಿಂತಿಸಿದಳೇನೆಂದರೆ—

"ಹೇಗಾಗಬೇಕೋ ಹಾಗೆಯೇ ಆಗಿ ಹೋಯಿತು. ಲಲಿತನು ಇಲ್ಲಿಯ ವಿದ್ಯಮಾನವನ್ನು ಹೇಗೋ ತಿಳಿದುಕೊಂಡು ಓಡಿ ಹೋಗಿರುವನು. ಅವನು ಹೇಡಿಯಾದುದರಿಂದ, ಇಷ್ಟು ಹೊತ್ತಿಗೆ ರಾಜಧಾನಿಯನ್ನೇ

ತ್ಯಾಗಮಾಡಿ ದೂರವಾಗಿ ಓಡಿ ಹೋಗಿರಬೇಕು. ಆತನು ಓಡಿ ಹೋದುದು ನಮಗೆ ಅನುಕೂಲವೇ ಆಯಿತು. ಈಗ ನಾವು ಈ ಕೊಲೆಯನ್ನು ಆತನ ತಲೆಯ ಮೇಲೆ ಅನಾಯಾಸವಾಗಿ ಒರಗಿಸಬಹುದು. ಇದೇ ಸರಿಯಾದ ಉಪಾಯವು. ಈಗ ನಾನು ಲಲಿತನ ಹಾಸುಗೆಯಲ್ಲಿ ರಕ್ತವನ್ನು ಅಲ್ಲಲ್ಲಿ ಚಿಮುಕಿಸಿ, ಈ ಚೂರಿಯನ್ನೂ ಅದರ ಮೇಲೆ ಬೀಸಾಡಿರುವೆನು. ಇದನ್ನು ನೋಡಿದ ಕೂಡಲೆ, ಎಲ್ಲರಿಗೂ ಲಲಿತನ ಮೇಲೆಯೇ ಸಂದೇಹವುಂಟಾಗುವುದು. ಹೀಗಾಗುವುದಾದರೆ, ನನ್ನ ದೊಟ್ಟ ಜಾರಿ ತುಪ್ಪದಲ್ಲಿ ಬಿದ್ದಂತಾಗುವುದು. ಇನ್ನು ಮೇಲೆ ನಾನೇ ಪಾರವಾಡದ ಮಹಾರಾಣಿ.''

ಕಮಲಿನಿಯು ಹೀಗೆ ಆಲೋಚಿಸಿದ ಬಳಿಕ, ಮಹಾರಾಣಿಯ ಕೋಣೆಗೆ ಬಂದು ತನ್ನ ಕೈಗಳಿಂದ ರಕ್ತವನ್ನೆತ್ತಿ ದಾರಿಯುದ್ದಕ್ಕೂ ಅದನ್ನು ಸುರಿಸಿಕೊಂಡು ಬಂದು ಉಳಿದುದನ್ನು ಲಲಿತನ ಹಾಸುಗೆಯ ಮೇಲೆ ಚಲ್ಲಾಡಿದಳು. ಇದನ್ನು ನೋಡಿ ಕೃತಕೃತ್ಯೆಯಾದ ಕಮಲಿನಿಯು ಅಲ್ಲಿ ಒಂದು ಕ್ಷಣಕಾಲವೂ ನಿಲ್ಲದೆ ತನ್ನ ಕೋಣೆಗೆ ಹೊರಟು ಬಂದುಬಿಟ್ಟಳು.

---

## ಮೂವತ್ತೈದನೆಯ ವಿಲಾಸ

ಕಮಲಿನಿಯು ತನ್ನ ಕೋಣೆಗೆ ಬಂದು ನೋಡಿದಳು. ಅಲ್ಲಿ ಮಹಾರಾಜಸಿಂಹನು ತನ್ನ ಕೈಕಾಲುಗಳನ್ನು ತೊಳೆದುಕೊಳ್ಳುತ್ತಿದ್ದನು. ಆತನು ಒಂದು ಗಂಟೆಯಿಂದಲೂ ನೀರು ಹಾಕಿ ಎಷ್ಟು ತೊಳೆದರೂ, ಆ ರಕ್ತದ ಕಲೆಗಳು ಅಳಿಸಿ ಹೋದಂತೆ ಅವನಿಗೆ ನಂಬುಗೆಯೇ ಉಂಟಾಗಲಿಲ್ಲ. ಕಮಲಿನಿಯು ತಟ್ಟನೆ ಅಲ್ಲಿಗೆ ಬಂದುದನ್ನು ನೋಡಿ ಮಹಾರಾಜಸಿಂಹನು ಆರೋ ತನ್ನ ಬೆನ್ನಟ್ಟಿ ಬಂದರೆಂದು ದಿಗಿಲು ಬಿದ್ದವನಾಗಿ 'ಅಯ್ಯೋ! ಅಪ್ಪಾ!' ಎಂದು ಕೂಗಿಕೊಂಡು ಎದ್ದು ನಿಂತನು. ಇದನ್ನು ನೋಡಿ ಕಮಲಿನಿಯು ನಗುತ್ತಾ—ಪ್ರಾಣೇಶ್ವರ! ಇದ್ದರೆ ನಿನ್ನಂತಹ ಧೀರನೇ ಇರಬೇಕು. ಇಂತಹ ಹೇಡಿಯಾದ ನೀನು ಯುದ್ಧವನ್ನು ಹೇಗೆ ಮಾಡಿ

ಜಯಿಸಿ ಬಂದೆಯೋ ದೇವರೇ ಬಲ್ಲನು! ಎಂದ ಮಾತನ್ನು ಮಹಾರಾಜ ಸಿಂಹನು ಲೆಕ್ಕಿಸದೆ—ಕಮಲಿನಿ ಕಮಲಿನಿ! ಈ ಬಟ್ಟೆ ಬರೆಗಳನ್ನು ಮಾರ್ಜಿಸು. ಈ ರಕ್ತದ ಕಲೆಗಳನ್ನು ಚೆನ್ನಾಗಿ ತೊಳೆ. ಬೇಗನೆ ಈ ಕೆಲಸವನ್ನು ಮಾಡು. ನಾನು ಈ ಘೋರ ದೃಶ್ಯವನ್ನು ಕಣ್ಣಿನಿಂದ ನೋಡ ಲಾರೆನು, ಎಂದು ಬೆಸಗೊಂಡನು.

ಕಮಲಿನಿ—ಹಾಗಾದರೆ ಕಣ್ಣು ಮುಚ್ಚಿಕೊಳ್ಳು.

ಮಹಾ—ನನ್ನನ್ನು ಹುಚ್ಚನನ್ನಾಗಿ ಮಾಡಬೇಡ. ಈ ರಕ್ತವು ನನ್ನ ಮತಿಗೆಡಿಸುತ್ತಿರುವುದು.

ಕಮಲಿನಿ—ಪ್ರಾಣನಾಥ! ನಿನ್ನಲ್ಲಿ ಸಾಹಸವಿದೆಯೆಂದು ಗೊತ್ತಾ ಯಿತು. ಇನ್ನು ನೀನು ಹೆದರಬೇಕಾದುದಿಲ್ಲ. ನಾನು ನಿನ್ನ ರಕ್ತದ ಕಲೆಗಳೆಲ್ಲವನ್ನೂ ಚೆನ್ನಾಗಿ ತೊಳೆದು ಹೋಗಲಾಡಿಸುವೆನು. ಇದಕ್ಕಾಗಿ ಇಷ್ಟೇಕೆ ಚಿಂತೆ?

ಮಹಾ—ಕಮಲಿನಿ! ನನ್ನಲ್ಲಿ ರಕ್ತದ ಕಲೆಗಳೇನಾದರೂ ಇವೆಯೇ? ಚೆನ್ನಾಗಿ ನೋಡಿ ಹೇಳು. ಒಂದು ಕಲೆಯಿರುವುದಾದರೂ ನಾನು ಉಳಿಯುವಂತಿಲ್ಲ.

ಕಮಲಿನಿ—(ನೋಡಿದವಳಂತೆ ನಟಿಸಿ) ರಕ್ತದ ಕಲೆಯೆಂಬುದೇ ಇಲ್ಲ. ಎಲ್ಲವೂ ಮಾಯವಾಗಿರುವುವು. ಇನ್ನಾದರೂ ಧೈರ್ಯದಿಂದಿರ ಬಾರದೇ!

ಮಹಾ—ಪ್ರಿಯೆ! ನೀನು ಹೇಳುವುದೆಲ್ಲಾ ಸುಳ್ಳು. ನನ್ನ ಕಣ್ಣಿಗೆ ಇನ್ನೂ ರಕ್ತದ ಕಲೆಗಳು ಚೆನ್ನಾಗಿಯೂ ಕಾಣುತ್ತಿರುವುವು. ದೀಪವನ್ನು ಹಿಡಿದು ಪರೀಕ್ಷಿಸಿ ನೋಡು.

ಕಮಲಿನಿ—ನಿನ್ನ ಹುಚ್ಚುತನವನ್ನು ನೋಡಿದರೆ ನನಗೆ ರೇಗು ವುದು. ಎಷ್ಟೋ ಹೊತ್ತಿನಿಂದ ತೊಳೆದ ಮೇಲೂ ರಕ್ತವೆಲ್ಲಿಂದ ಬರ ಬೇಕು? ನೀನು ಹೋಗಿ ಮಲಗಿ ನಿದ್ರಿಸು. ಬೆಳಗಾದ ಕೂಡಲೆ ಎಲ್ಲವೂ ಸರಿಹೋಗುವುದು.

ಹೀಗೆ ಹೇಳಿ ಕಮಲಿನಿಯು ತನ್ನ ಕೈಗಳನ್ನು ತೊಳೆದುಕೊಂಡು ಉಟ್ಟಿದ್ದ ವಸ್ತ್ರವನ್ನು ಕಳಚಿ ಬೇರೊಂದನ್ನು ಧಾರಣಮಾಡಿ, ರಕ್ತದ ಕಲೆಯಾಗಿದ್ದ ವಸ್ತ್ರಗಳೆಲ್ಲವನ್ನೂ ಅಗ್ನಿದೇವನಿಗೆ ಆಹುತಿಯಾಗಿ ಕೊಟ್ಟಳು. ಬೆಂಕಿಯು ಫಕ್ ಎಂದು ಉರಿಯಲು, ಮಹಾರಾಜಸಿಂಹನು ಬೆಚ್ಚಿ ಬೆದರಿದವನಾಗಿ ಹೆಂಡತಿಯನ್ನು ಅಪ್ಪಿಕೊಂಡು ಗಡಗಡನೆ ನಡುಗಲಾರಂಭಿಸಿದನು. ಕಮಲಿನಿಯು ತನ್ನ ಗಂಡನ ಅವಸ್ಥೆಯನ್ನು ನೋಡಿ ನಗುತ್ತಾ—ನಾಥ! ಗಾಳಿ ಸುಂಯ್ ಎಂದರೂ, ಎಲೆಯಲ್ಲಾಡಿದರೂ, ಇಲಿ ಸುಳಿದಾಡಿದರೂ ನೀನು ಪ್ರಾಣವನ್ನೇ ಬಿಟ್ಟು ಬಿಡುವೆ. ಹೀಗಿರುವಲ್ಲಿ ನಿನ್ನನ್ನು ಧೀರನಾದ ಗಂಡನೆಂದು ಆರು ತಾನೇ ಹೇಳುವರು? ಎಂದು ಹಾಸ್ಯಮಾಡಿದಳು. ಮಹಾರಾಜಸಿಂಹನು ಅದನ್ನು ಕೇಳಿಯೂ ಕೇಳದವನಂತೆ ಇದ್ದು ಬಿಟ್ಟನು. ಕಮಲಿನಿಯು ಗಂಡನ ಹೇಡಿತನವನ್ನು ನೋಡಿ ಅಸಹ್ಯಪಟ್ಟವಳಾಗಿ ದೂರ ಸರಿದು ನಿಂತಳು. ಮಹಾರಾಜಸಿಂಹನೂ ಅವಳ ಹಿಂದೆ ಹಿಂದೆಯೇ ಹೋದನು. ಇದನ್ನು ನೋಡಿ ಆಕೆಯು ಹೇಳಿದುದೇನೆಂದರೆ:—

"ಪ್ರಿಯನೇ! ಇನ್ನು ಮೇಲೆ ನೀನು ಹೀಗೆ ಅಂಜಿಕೊಂಡು ಮೂರ್ಛೆ ಬೀಳಲು ಕಾರಣವೇನೂ ಇರಲಾರದು. ನಿನ್ನ ಕೃತ್ಯವನ್ನು ನೋಡಿದರೆ, ನಿನಗೆ ಬುದ್ಧಿಯೇ ಇಲ್ಲವೆಂದು ತೋರುವುದು. ಇಂತಹ ಸಂದರ್ಭಗಳಲ್ಲಿ ಗಂಡನಿಗಿಂತಲೂ ಹೆಂಡತಿಯೇ ಮೇಲೆಂದು ತೋರುವುದು. ಹೀಗೆಯೇ ಇರುವುದಾದರೆ, ನೀನಾವಾಗ ಮಹಾರಾಣಾ ಸಾಹೇಬನಾಗಿ ಬಾಳುವುದು?"

ಮಹಾರಾಜಸಿಂಹನು ಆವ ಮಾತನ್ನೂ ಆಡದೆ ಸುಮ್ಮನೆಯೇ ಇದ್ದು ಬಿಟ್ಟನು. ಅವನ ಕಂಠದಿಂದ ಧ್ವನಿ ಹೊರಡುವ ಶಕ್ತಿಯೇ ವಿಲೋಪಗೊಂಡಿದ್ದಿತು. ಗಂಡನು ಮೂಕನಂತೆ ವರ್ತಿಸುತ್ತಿರುವುದನ್ನು ನೋಡಿ, ಕಮಲಿನಿಯು—ಪ್ರಭೂ! ಮಹಾರಾಣನು ಮಡಿದನು. ಲಲಿತನು ತಲೆಯನ್ನು ತಪ್ಪಿಸಿಕೊಂಡು ಮಾಯವಾಗಿರುವನು. ಈ ವಿಷಯದಲ್ಲಿ ಕೊಂಚವಾದರೂ ಸಂಶಯವಿರಲಾರದು. ನಾನು ಲಲಿತನ ಹಾಸುಗೆಯ ಮೇಲೆ ರಕ್ತವನ್ನು ಚಲ್ಲಿ ಚೂರಿಯನ್ನಿಟ್ಟು ಬಂದಿರುವೆನು. ಬೆಳಗಾದ ಕೂಡಲೆ,

ಲಲಿತನು ಮಹಾರಾಣಿಯನ್ನು ಕೊಂದು ಓಡಿ ಹೋಗಿರುವನು ಎಂಬ ಸುದ್ದಿಯನ್ನು ನಾವು ಎಬ್ಬಿಸಿದರಾಯಿತು. ಇದನ್ನು ಎಲ್ಲರೂ ನಂಬಿಯೇ ನಂಬುವರು. ಬಳಿಕ ಈ ರಾಜ್ಯವು ನಮ್ಮ ಕೈಸೇರುವುದು. ಮುಂದೆ ಹೇಳತಕ್ಕುದೇನಿರುವುದು? ನಾನೇ ಮಾರವಾಡದ ಮಹಾರಾಣಿ, ಎಂದು ಒಯ್ಯಾರದಿಂದ ಮಾತನಾಡಿದಳು.

ಮಹಾ—ಕಮಲಿನಿ! ಚೂರಿಯು ನನ್ನಲ್ಲಿಯೇ ಇರುವಾಗ, ನೀನು ಅದನ್ನು ಅಲ್ಲಿಟ್ಟು ಬಂದುದು ಹೇಗೆ? ನಿನಗೆ ನಿದ್ದೆಯ ಅಭಾವದಿಂದ ಬುದ್ಧಿಯಲ್ಲಿ ವಿಕಾರವುಂಟಾಗಿರಬೇಕು. ಕಮಲಿನಿ! ನನ್ನಂತೆಯೇ ನೀನೂ ಹೀಗಾಗಬಹುದೇ?

ಕಮಲಿನಿ—ಚೂರಿಯೆಲ್ಲಿ, ಪ್ರಭೂ? ಅದನ್ನು ತೋರೋಣವಾಗಲಿ. ನೀನು ಕಾಪುರುಷನಿಗಿಂತಲೂ ಅಧಮನು. ಮಹಾರಾಜಸಿಂಹ! ನಿನ್ನ ವ್ಯವಹಾರದಿಂದ ನನಗೆ ನಾಚುಗೆಯಾಗುತ್ತಿರುವುದು.

ಮಹಾ—ಚೂರಿಯು ಇಲ್ಲಿಯೇ ಇರುವುದು ನಿನಗೆ ಕಾಣುವುದಿಲ್ಲವೇ? ಇಗೋ ನೋಡು. ಇದೇ ಚೂರಿಯಿಂದಲೇ ನಾನು ಇರಿದುದು. ಕಮಲಿನಿ! ನನ್ನ ಕೈಯಲ್ಲಿ ರಕ್ತವು ಇನ್ನೂ ಹೋಗಿಲ್ಲ. ಕೈಗಳು ಕೆಂಪಗಿರುವುದನ್ನು ನೋಡಿದೆಯಾ? ಬೇಗನೆ ಹೋಗಿ ನೀರನ್ನು ತೆಗೆದುಕೊಂಡು ಬಾ. ಕೈಗಳನ್ನು ಇನ್ನೂ ಚೆನ್ನಾಗಿ ತೊಳೆದುಕೊಳ್ಳಬೇಕು.

ಕಮಲಿನಿ—ಪ್ರಾಣೇಶ್ವರ! ನೀನು ಕೆಲಸವೆಲ್ಲವನ್ನೂ ಹಾಳು ಮಾಡಿಬಿಡುವೆ. ಎಲ್ಲರಿದಿರಿನಲ್ಲಿಯೂ ನೀನು ಹೀಗಾಡುವುದಾದರೆ, ನಿನ್ನ ಗುಟ್ಟು ರಟ್ಟಾಗಿ ಹೋಗುವುದು. ಬಳಿಕ ನಿನ್ನ ಪಾಡು ನಾಯಿಪಾಡಾದೀತು. ನೀನು ಪಿತೃಹತ್ಯೆಯನ್ನು ಮಾಡಿದವನೆಂದು ಪುರಪ್ರಮುಖರಿಗೆ ಗೊತ್ತಾದ ಕೂಡಲೆ, ಅವರು ನಿನ್ನನ್ನು ಚೌಕದಲ್ಲಿ ಗಲ್ಲಿಗೇರಿಸಿಬಿಡುವರು.

ಈ ಮಾತನ್ನು ಕೇಳಿದ ಮಹಾರಾಜಸಿಂಹನ ಬಾಯಿಂದ ಮಾತುಗಳು ಹೊರಡಲಾರದೇ ಹೋದುವು. ಆತನು ವಿಚಾರಮಗ್ನನಾಗಿ ಚಿತ್ರ,

ದಲ್ಲಿನ ಬೊಂಬೆಯಂತಾಗಿ ಬಿಟ್ಟನು. ಬಳಿಕ ಆತನು ಹೆಂಡತಿಯನ್ನು ಕುರಿತು—ಪ್ರಿಯೆ! ಆ ಹುಚ್ಚಿಯ ವಿಚಾರವೇನು? ಎಂದು ಪ್ರಶ್ನೆ ಮಾಡಿದನು. "ಹುಚ್ಚಿಯು ಇನ್ನೂ ಬದುಕಿರುವಳೆಂದು ಹೇಳಿದರೆ, ಮಹಾರಾಜಸಿಂಹನು ಎದೆಯೊಡೆದು ಸತ್ತು ಹೋಗುವನು. ಅದುಕಾರಣ ಹುಚ್ಚಿಯು ಸತ್ತು ಹೋದಳೆಂದು ಸುಳ್ಳು ಸುದ್ದಿಯನ್ನು ತಿಳಿಸುವೆನು" ಎಂದು ಕಮಲಿನಿಯು ತನ್ನೊಳಗೆ ಚಿಂತಿಸಿ ಗಂಡನನ್ನು ಕುರಿತು—ಪ್ರಭೂ! ಇನ್ನು ಹುಚ್ಚಿ ಯಾರು? ಆಕೆಯು ಸತ್ತು ಎಷ್ಟೋ ಹೊತ್ತಾಗಿ ಹೋಯಿತು, ಎಂದುಸುರಿದಳು.

ಮಹಾ—(ಸಂತೋಷದಿಂದ ಎದ್ದು ನಿಂತು) ಹಾಗಾದರೆ ಭಯವಿಲ್ಲ. ಇನ್ನು ಮಹಾರಾಜಸಿಂಹನು ಆರಿಗೂ ಹೆದರನು. ಕಮಲಿನಿ! ನಾನು ಬೆಳಗಾಗುವುದರೊಳಗಾಗಿ ಹೊಸ ಮನುಷ್ಯನಾಗಿ ಹೋಗಿರುವೆನು. ಇಂದಿನಿಂದಲೂ ನಾನೇ ಮಾರವಾಡದ ಮಹಾರಾಜಾ ಸಾಹೇಬನು. ನೀನೇ ಮಹಾರಾಣಿ.

ಕಮಲಿನಿ—ನಾಥ! ಮಹಾರಾಜನಾಗಲು ನೀನೇ ಸರಿಯಾದ ಪಾತ್ರವೆಂದು ನಾನು ಮೊದಲಿನಿಂದಲೂ ಬಲ್ಲೆನು.

ಈ ರೀತಿಯಾಗಿ ಮಾತನಾಡುತ್ತಾ ಗಂಡಹೆಂಡಿರಿಬ್ಬರೂ ಹಾಸುಗೆಯ ಮೇಲೆ ಮಲಗಿದರು. ಅವರ ಕಣ್ಣಿಗೆ ನಿದ್ರೆ ಹತ್ತಲಿಲ್ಲ. ಇಬ್ಬರೂ ಬೆಳಗಾದ ಕೂಡಲೆ ಮಾಡಬೇಕಾದ ಕೆಲಸಗಳನ್ನು ಚಿಂತಿಸುತ್ತಾ ಹೊರಳಾಡುತ್ತಿರುವಷ್ಟರಲ್ಲಿಯೇ ರಾತ್ರಿ ಕಳೆದು ಬೆಳಗಾಯಿತು.

---

## ಮೂವತ್ತಾರನೆಯ ವಿಲಾಸ

ಮಾರವಾಡದ ರಾಜಧಾನಿಯು ಹಿಂದಣ ದಿನವಲ್ಲಿ ಎಷ್ಟು ಆನಂದಮಯಿಯಾಗಿದ್ದಿತೋ ಇಂದಿನ ದಿನವಲ್ಲಿ ಅಷ್ಟೂ ಅಷ್ಟು ದುಃಖಶೋಕಮಯಿಯಾಗಿ ಹೋಗಿರುವುದು. ನಗರವಾಸಿಗಳ ಮುಖದಲ್ಲಿ ರಸವಿಲ್ಲ, ಕಣ್ಣುಗಳಲ್ಲ ತೇಜಸ್ಸಿಲ್ಲ, ಬಾಯಿಲ್ಲ ಮಾತಿಲ್ಲ. ನಗರದ ಎಲ್ಲೆಡೆಗೆ

ಳಲ್ಲಿಯೂ ಶೋಕರಸದ ಸಾಮ್ರಾಜ್ಯವೇರ್ಪಟ್ಟು ಹೋಗಿರುವುದು. ರಾಜ ಪುರುಷರು ತಲೆಯನ್ನು ತಗ್ಗಿಸಿಕೊಂಡು ಅಲ್ಲಲ್ಲಿ ಸಂಚರಿಸುತ್ತಿರುವರು. ಅಂಗಡಿಯವರು ತಮ್ಮ ತಮ್ಮ ಅಂಗಡಿಗಳನ್ನು ಮುಚ್ಚಿಬಿಟ್ಟಿರುವರು. ಸೈನ್ಯದವರು ಅಲ್ಲಲ್ಲಿ ಗುಂಪುಕಟ್ಟಿಕೊಂಡು ಕೊಲೆಯ ಸುದ್ದಿಯನ್ನೆತ್ತಿ ಮಾತನಾಡುತ್ತಿರುವರು. ಅಂತೂ ಎಲ್ಲರೂ ಭ್ರಾಂತರೂ, ವಿಸ್ಮಿತರೂ, ಭೀತರೂ ಆಗಿಬಿಟ್ಟಿದ್ದರು.

ಮಹಾರಾಣನು ಕೊಲೆಯಾದನೆಂಬ ಸುದ್ದಿಯು ಬೆಳಗಾಗುವುದರೊಳಗಾಗಿ ಎಲ್ಲೆಲ್ಲಿಯೂ ಹರಡಿತು. ಅದರಂತೆಯೇ ಯುವರಾಜನು ಪಲಾಯನವಾಗಿರುವನೆಂಬ ಸುದ್ದಿಯೂ ಎಲ್ಲರ ಕಿವಿಗೂ ಬಿದ್ದಿತು. ಬಳಿಕ 'ಕೊಲೆಯನ್ನು ಮಾಡಿದವರಾರಿರಬಹುದು?' ಎಂದು ಜನರು ಜಿಜ್ಞಾಸೆ ಮಾಡಲಾರಂಭಿಸಿದರು. ಮಹಾರಾಜಸಿಂಹನು ಶೂರನೂ ವೀರನೂ ಧೀರನೂ ಆಗಿದ್ದುದರಿಂದ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು. ಅಲ್ಲದೆ, ಆತನ ಗುಣದಿಂದ ಎಲ್ಲರೂ ಮುಗ್ಧರಾಗಿ ಹೋಗಿದ್ದರು. ಆತನು ತಂದೆಯನ್ನು ಎಂದಿಗೂ ಕೊಲ್ಲತಕ್ಕವನಲ್ಲವೆಂದು ಜನರು ನಂಬಿದ್ದುದರಿಂದ, ಅವರ ಸಂಶಯವು ಅತ್ತ ಕಡೆಗೆ ತಿರುಗಲೇ ಇಲ್ಲ. ಯುವರಾಜ ಲಲಿತಸಿಂಹನು ಪಲಾಯನವಾಗಿರುವನಂತೆ, ಇದಕ್ಕಾದರೂ ಕಾರಣವೇನು? ಲಲಿತಸಿಂಹನಿಗೂ ಮಹಾರಾಜಸಿಂಹನಿಗೂ ಪರಸ್ಪರಾನುರಾಗವು ವಿಶೇಷವಾಗಿರುವುದು. ಇದನ್ನು ಮಹಾರಾಜಸಿಂಹನು ಒಂದೊಂದು ದಿನ ಸಭಾಮಧ್ಯದಲ್ಲಿ ಚೆನ್ನಾಗಿಯೂ ತೋರ್ಪಡಿಸಿರುವನು. ಪ್ರಕೃತ ಮಹಾರಾಣನು ಸತ್ತ ಬಳಿಕ ಲಲಿತಸಿಂಹನೇ ಮಹಾರಾಣನಾಗುವ ಸಂಭವವಿರುವುದರಿಂದ, ಆತನು ಓಡಿ ಹೋಗುವುದಕ್ಕೆ ಕಾರಣವೇನೂ ಇರಲಾರದು. ಹಾಗಾದರೆ ಆತನು ಓಡಿ ಹೋದುದೇತಕೆ? ಈ ವಿಷಯದಲ್ಲಿ ಪುರನಿವಾಸಿಗಳು ಆವುದನ್ನೂ ಸಿದ್ಧಾಂತಪಡಿಸಲಾರದವರಾಗಿ ಚಿಂತಾಸಾಗರದಲ್ಲಿ ತೇಲಿ ಮುಳುಗಿ ಹೋಗುತ್ತಿದ್ದರು.

ಬೆಳಗಾದ ಕೂಡಲೆ ರಾಜಸೇವಕರು ಅಶ್ವಾರೋಹಿಗಳಾಗಿ ಊರಿನಲ್ಲೆಲ್ಲಾ ಸಂಚರಿಸಲಾರಂಭಿಸಿದರು. ಕಾರಣವೇನೆಂದರೆ—ಮಹಾ

ರಾಣನು ಸತ್ತುಹೋಗಿರುವನು ; ಯುವರಾಜನೂ ಓಡಿ ಹೋಗಿರುವನು. ಹೀಗಿರುವಲ್ಲಿ ರಾಜ್ಯಭಾರವು ಆವ ರೀತಿಯಲ್ಲಿ ನಡೆಯು ಬೇಕೆಂಬ ವಿಷಯ ವನ್ನು ಕುರಿತು ಜಿಜ್ಞಾಸೆ ಮಾಡುವುದಕ್ಕಾಗಿ ಮಹಾರಾಜಸಿಂಹನು ವಿರಾಟ್ಸಭೆಯೊಂದನ್ನು ಕೂಡಿಸಬೇಕೆಂದು ಆಲೋಚಿಸಿದನು. ಈ ವಿಷಯ ವನ್ನು ಎಲ್ಲೆಲ್ಲಿಯೂ ಹರಡುವುದಕ್ಕಾಗಿಯೇ ಅಶ್ವಾರೋಹಿಗಳು ಸಂಚಾರ ಮಾಡತೊಡಗಿದರು.

ಬೆಳಗಿನ ಒಂಬತ್ತು ಗಂಟೆಯ ಸಮಯದಲ್ಲಿ ಅರಮನೆಯ ರಾಜಾಸ್ಥಾನದಲ್ಲಿ ಗಣ್ಯರಾದ ನಗರ ವಾಸಿಗಳೆಲ್ಲರೂ ಬಂದು ಸೇರಿರುವರು. ಸಭಾ ಮಂದಿರವು ಜನರಿಂದ ಕಿಕ್ಕಿರಿದು ಹೋಗಿರುವುದು. ಆ ಮಂದಿರದ ಹೊರಗಡೆಯಲ್ಲಿ ಹತ್ತೆಂಟು ಸಾವಿರ ಸೈನಿಕರೂ ಸಾಲುಸಾಲಾಗಿ ನಿಂತುಕೊಂಡು ಸಭಾ ಸಿದ್ಧಾಂತಗಳನ್ನು ಕೇಳುವುದಕ್ಕಾಗಿ ತಹ ತಹ ಪಡುತ್ತಿರುವರು.

ಈ ರೀತಿಯಲ್ಲಿ ಕೊಂಚ ಹೊತ್ತು ಕಳೆದ ಬಳಿಕ, ಸೈನಿಕರು ಜಯ ಧ್ವನಿಯನ್ನು ಮಾಡಿದರು. ಇದನ್ನು ಕೇಳಿದ ಕೂಡಲೆ, ಸಭಾಸದರೆಲ್ಲರೂ ಮಹಾರಾಜಸಿಂಹನು ಬಂದನೆಂದು ಎದ್ದು ನಿಂತರು. ಅಷ್ಟು ಹೊತ್ತಿಗೆ ಸರಿಯಾಗಿ ಮಹಾರಾಜಸಿಂಹನೂ ತನ್ನ ಪರಿವಾರದವರೊಡನೆ ಕುದುರೆಯನ್ನೇರಿಕೊಂಡು ಸಭಾಮಂದಿರದ ಬಳಿಗೈತಂದನು. ಮಹಾರಾಜಸಿಂಹನ ಮುಖದಲ್ಲಿ ಮಾಲಿನ್ಯವು ಎಡೆಗೊಂಡಿದ್ದಿತು. ಒಂದೇ ರಾತ್ರಿಯೊಳಗಾಗಿ ಆತನ ಆಕಾರ ಪ್ರಕಾರಗಳು ಮುಂಬಣ ಹತ್ತು ವರ್ಷಗಳ ವಿಪರಿಣಾಮವನ್ನು ಹೊದ್ದಿದ್ದಿತಾದುದರಿಂದ, ಆತನನ್ನು ಗುರುತಿಸುವುದೇ ಅನೇಕರಿಗೆ ಪ್ರಯಾಸಕ್ಕಿಟ್ಟುಹೋಗಿದ್ದಿತು. ಮಹಾರಾಜಸಿಂಹನು ತಂದೆಯ ಮರಣದಿಂದ ಇಷ್ಟು ಕಂಗೆಟ್ಟು ಹೋಗಿರುವನೆಂದು ಬಂದಿದ್ದವರೆಲ್ಲರೂ ಮನಗರಗಿದವರಾಗಿ, ಆತನ ವಿಷಯದಲ್ಲಿ ತುಂಬಾ ಸಂಕಟಪಟ್ಟು ಕೊಂಡರು.

ಮಹಾರಾಜಸಿಂಹನು ಸಭಾ ಮಂದಿರದ ಸಮೀಪಕ್ಕೆ ಬಂದ ಕೂಡಲೆ ಕುದುರೆಯಿಂದಿಳಿದು, ಸೇನಾನಾಯಕರನ್ನೂ ಸೈನಿಕರನ್ನೂ

ನೋಡಿ ನಗೆ ಮೊಗದಿಂದ ಒಬ್ಬೊಬ್ಬರ ಯೋಗಕ್ಷೇಮವನ್ನೂ ವಿಚಾರ ಮಾಡಿದನು. ಮಹಾರಾಜಸಿಂಹನ ಸರಳ ಹೃದಯವನ್ನು ನೋಡಿ ಎಲ್ಲ ಸೈನಿಕರೂ ಆನಂದದಿಂದ ಕಣ್ಣೀರ ಗರೆದರು. ಬಳಿಕ ಎಲ್ಲರೂ ಸಂತಸ ಗೊಂಡು ಏಕ ವಾಕ್ಯತೆಯಿಂದ ನೆರವೇರಿಸಿದ ಜಯಘೋಷವು ಮಾರ ವಾಡದ ದಿಕ್ತಟವನ್ನು ಭೇದಿಸಿಕೊಂಡು ಹೊರಟಿತು.

ತರುವಾಯ ಮಹಾರಾಜಸಿಂಹನು ತನ್ನ ಪರಿವಾರದೊಡನೆ ಸಭಾ ಮಂದಿರವನ್ನು ನಮ್ರಭಾವದಿಂದ ಪ್ರವೇಶಮಾಡಿದನು. ಸಭಾಸದ ರೆಲ್ಲರೂ ದುಃಖವನ್ನು ಸೂಚಿಸುವುದಕ್ಕಾಗಿ ಮೌನದಿಂದಿದ್ದುಬಿಟ್ಟರು. ಮಹಾರಾಜಸಿಂಹನು ಇದನ್ನು ಚೆನ್ನಾಗಿಯೂ ಅರಿತುಕೊಂಡವನಾಗಿ ಮುಖದಿಂದ ವ್ಯಸನವನ್ನು ತೋರ್ಪಡಿಸುತ್ತಾ ಸಿಂಹಾಸನದ ಬಳಿಯಲ್ಲಿ ಬಂದು ನಿಂತನು. ಆಗ ರಾಜಕುಮಾರನ ಬಾಯಿಂದ ಏನು ಹೊರಡು ವುದೋ ಎಂದು ಎಲ್ಲರೂ ಆದರದಿಂದ ಸರ್ವೇಂದ್ರಿಯಗಳನ್ನೂ ಕಿವಿಯಾಗಿ ಮಾಡಿಕೊಂಡು ಕುಳಿತಿದ್ದರು. ಈ ಕಾರಣದಿಂದಲೇ ಸಭಾಮಂದಿರವು ನಿಶ್ಶಬ್ದವಾಗಿದ್ದಿತು. ಬಳಿಕ ಮಹಾರಾಜಸಿಂಹನು ಮಾತನಾಡಿದನು.

## ಮೂವತ್ತೇಳನೆಯ ವಿಲಾಸ

ಮಹಾರಾಜಸಿಂಹನು ವಿನಯದಿಂದ ಮಾತನಾಡಿದನು.

"ರಾಜಭಕ್ತಿ ಪರಾಯಣರಾದ ಮಾನ್ಯವರ ಪುರನಿವಾಸಿಗಳಲ್ಲಿ ದಾಸಾನುದಾಸನ ವಿಜ್ಞಾಪನೆಗಳು. ಈ ದಿನ ನಿಮ್ಮೆಲ್ಲರಿಗೂ ಅದೊಂದು ದುಃಖಕರವೂ ಭಯಂಕರವೂ ಆದ ಸುದ್ದಿಯನ್ನು ತಿಳಿಸಲೋಸುಗ ಈ ಸಭೆಯು ಏರ್ಪಡಿಸಲ್ಪಟ್ಟಿರುವುದು. ಭಗವಂತನು ನಮ್ಮ ಹಣೆಯಲ್ಲಿ ಸುಖವನ್ನು ಬರೆದಿರುವುದಕ್ಕಾಗಿ ನಾವು ಬಹಳವಾಗಿ ಪಶ್ಚಾತ್ತಾಪ ಪಡ ಬೇಕಾಗಿರುವುದು."

ಮಹಾರಾಜಸಿಂಹನು ಹೀಗೆ ಹೇಳಿದ ಕೂಡಲೆ ಅವನ ಕಂಠವು ರುದ್ಧವಾಗಿ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿದು ಹೋಯಿತು.

ಇದನ್ನು ನೋಡಿ ಸಭಾಸದರೆಲ್ಲರೂ ಅತಿಯಾಗಿ ಕತಿಗೊಂಡು ಕಣ್ಣೀರ ಸುರಿಸಿದರು. ಬಳಿಕ ಮಹಾರಾಜಸಿಂಹನು ಗದ್ಗದ ಸ್ವರದಿಂದ ಮತ್ತೆ ಮಾತನಾಡಲಾರಂಭಿಸಿದನು :—

"ಮಾರವಾಡದ ಮಹಾರಾಣಾ ಸಾಹೇಬರನ್ನು ಹೃದಯ ಹೀನನಾದ ಆವನೋ ನೀಚನು ನಿನ್ನೆಯ ರಾತ್ರಿಯಲ್ಲಿ ಕೊಲೆ ಮಾಡಿದನು. ನಮ್ಮ ಉತ್ಸವದ ಸಮಾರಂಭದಲ್ಲಿಯೇ ಇಂತಹ ಅಚಾತುರ್ಯವು ನಡೆದು ಹೋದುದಕ್ಕಾಗಿ ನಾವು ತುಂಬಾ ವ್ಯಸನಪಡಬೇಕಾಗಿರುವುದು."

ಮಹಾರಾಜಸಿಂಹನು ದುಃಖದ ಆವೇಗವನ್ನು ನಟಿಸುತ್ತಾ ಮುಂದೆ ಆವ ಮಾತನ್ನೂ ಆಡದವನಾಗಿ ಸುಮ್ಮನಾದನು. ಇದನ್ನು ಕಣ್ಣಾರೆ ನೋಡಿದ ಸಭಾಸದರೆಲ್ಲರೂ ಗೊಳೋ ಎಂದು ಅತ್ತುಬಿಟ್ಟರು. ಕೆಲವರು, "ಪ್ರಭೂ! ತಾವು ಮಟ್ಟಿಗೆ ಪಿತೃಹೀನರಾಗಲಿಲ್ಲ. ನಾವುಗಳೆಲ್ಲರೂ ಇಂದಿಗೆ ತಂದೆಯನ್ನು ಕಳೆದುಕೊಂಡು ತಬ್ಬಲಿಗಳಾದೆವು," ಎಂದರು. ಕೆಲವರು ಆ ಪಾಪಿಯಾದ ಹತ್ಯಾಕಾರಿಯೆಲ್ಲಿ? ಆ ಚಂಡಾಲನು ಕೈಗೆ ಸಿಕ್ಕುವುದಾದರೆ ಅವನನ್ನು ಇಲ್ಲಿಯೇ ಇರಿದು ಕೊಂದು ಬಿಡುವೆವು" ಎಂದು ಅಬ್ಬರಿಸಿದರು. ಬಳಿಕ ಮಹಾರಾಜಸಿಂಹನು ಮಾತನಾಡಿದನು :—

"ನಾನು ಏನ ಹೇಳಲಿ? ಹೇಳುವುದಕ್ಕೆ ಹೊರಟರೆ ನನ್ನ ಎದೆಯೇ ಒಡೆದು ಹೋಗುವುದು. ಹಾ ದೈವವೇ! ಈ ವಿಷಯವನ್ನು ಬಹಿರಂಗಪಡಿಸುವುದಕ್ಕಿಂತ ಮೊದಲೇ ನನ್ನ ಪ್ರಾಣವಾಯುವು ಹಾರಿ ಹೋಗಬಾರದೆ! ಪ್ರಜೆಗಳಿರಾ! ಮತ್ತಾರಾದರೂ ನರ ಹತ್ಯೆಯನ್ನು ಮಾಡಿದ್ದಿದ್ದರೆ, ನಿಮಿಷ ಮಾತ್ರದಲ್ಲಿ ಆತನ ತಲೆಯನ್ನು ಚೆಂಡಾಡಿಬಿಡುತ್ತಿದ್ದೆನು."

ಮಹಾರಾಜಸಿಂಹನು ಹೀಗೆ ಹೇಳಿ ತನ್ನ ಕರವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಸಭಾಸದರು ದಿಕ್ಕು ತೋರದವರಾಗಿ ಚಿತ್ರದ ಬೊಂಬೆಗಳಂತೆ ನೀರವರಾಗಿ ಕುಳಿತು

ಬಿಟ್ಟರು. ಕೊಂಚ ಹೊತ್ತಿನ ಮೇಲೆ ಮಹಾರಾಜಸಿಂಹನು ಚೇತರಿಸಿ ಕೊಂಡು ಮತ್ತೆ ಮಾತನಾಡಿದನು :—

" ನಾವು ಯುವರಾಜ ಲಲಿತಸಿಂಹನನ್ನು ಅತಿಶಯವಾಗಿ ಪ್ರೀತಿ ಸುತ್ತಿರುವುದನ್ನು ಎಲ್ಲರೂ ಚೆನ್ನಾಗಿಯೂ ಬಲ್ಲವರಾಗಿರುವರು. ಆತನ ಗುಣಗಳೂ ಸರ್ವಜನಾದರಣೀಯವಾದುವೆಂಬುದರಲ್ಲಿ ಆರಿಗೂ ಆವ ಸಂಶಯವೂ ಇರಲಾರದು. ಹೀಗಿದ್ದರೂ ಆತನ ಮನೋಭಾವವು ಮುಟ್ಟಿಗೆ ಆರಿಗೂ ಗೋಚರಿಸದೇ ಹೋದುದಕ್ಕಾಗಿ ನಾವೆಲ್ಲರೂ ಸಂಕಟ ಪಡಬೇಕಾಗಿರುವುದು. ಮುಂದೆ ಆತನೇ ಮಹಾರಾಣನಾಗತಕ್ಕವನು. ಇದು ಆತನಿಗೆ ಚೆನ್ನಾಗಿ ಗೊತ್ತಿದ್ದರೂ, ಕಾಲವಿಲಂಬವನ್ನು ಆತನು ಸಹಿಸದೇ ಹೋದುದು ಶೋಚನೀಯವಾದ ವಿಷಯವಾಗಿರುವುದು. ನಮ್ಮ ಮಹಾರಾಣರು ಕೊಲೆಯಾಗಿ ನಮ್ಮ ಮನೆಯಲ್ಲಿ ಬಿದ್ದಿರುವರು ; ಈಗ ಆರು ಬೇಕಾದರೂ ಅಲ್ಲಿಗೆ ಹೋಗಿ ನೋಡಿಕೊಂಡು ಬರಬಹುದು. ನೀಚಾ ಶಯನಾದ ಲಲಿತಸಿಂಹನು ಮಹಾರಾಣನನ್ನು ಹೇಗೆ ಕೊಲೆ ಮಾಡಿರುವ ನೆಂಬುದು ತಾನಾಗಿಯೇ ಗೊತ್ತಾಗುವುದು. ತಾನು ಮಾಡಿದ ಕೆಲಸವು ಎಲ್ಲಿ ಬಹಿರಂಗವಾಗಿ ತನಗೆ ತೊಂದರೆ ಬರುವುದೋ ಎಂದು ದಿಗಿಲು ಬಿದ್ದವನಾಗಿ ಕೊಲೆ ಮಾಡಿದ ಕೂಡಲೆ ಎಲ್ಲಿಗೋ ಮಾಯವಾಗಿ ಬಿಟ್ಟಿರುವನು."

ಇದನ್ನು ಕೇಳಿದ ಸಭಾಸದರೆಲ್ಲರೂ ಸ್ತಂಭಿತರೂ ವಿಸ್ಮಿತರೂ ಭೀತರೂ ಆದರು. ಆರ ಬಾಯಿಂದಲೂ ಆವ ಮಾತೂ ಹೊರಡಲಿಲ್ಲ.

" ನನ್ನ ಮೃತನಾದ ತಂದೆಯ ದೇಹವು ಕೊಲೆಯಾದ ಕಾಲದಲ್ಲಿ ಹೇಗೆ ಬಿದ್ದಿದ್ದಿತೋ ಈಗಲೂ ಹಾಗೆಯೇ ಬಿದ್ದಿರುವುದು. ಆತನ ಕೋಣೆ ಯಿಂದ ಲಲಿತನ ಕೋಣೆಯ ವರೆಗೂ ರಕ್ತವು ಚೆಲ್ಲಾಡಿಹೋಗಿರುವುದು. ಇದನ್ನು ನೀವು ಕಣ್ಣಾರೆ ನೋಡಿದರೆ, ಎಲ್ಲವೂ ನಿಮಗೇ ಗೊತ್ತಾದೀತು. ಇಷ್ಟೇ ಅಲ್ಲ. ಮಹಾರಾಣನ ಕೋಣೆಯ ಮುಂಗಡೆಯಲ್ಲಿ ಇಬ್ಬರು ಪ್ರಹರಿಗಳಿದ್ದರು. ಲಲಿತನು ಅವರಿಬ್ಬರ ಕೈಕಾಲುಗಳನ್ನೂ ಕಟ್ಟಿಹಾಕಿ ಹೇಗೆ ಕೊಲೆ ಮಾಡಿದನೆಂಬುದನ್ನು ಪ್ರತ್ಯಕ್ಷವಾಗಿ ನೋಡಲೂ ಬಹುದು,

ಅವರ ಬಾಯಿಂದ ಕೇಳಲೂ ಬಹುದು. ಆ ಪ್ರಹರಿಗಳನ್ನು ನಾನು ಅದೇ ಅವಸ್ಥೆಯಲ್ಲಿಯೇ ಬಿಟ್ಟು ಬಂದಿರುವೆನು.''

ಈ ಮಾತನ್ನು ಕೇಳಿದ ಕೂಡಲೆ ಎಲ್ಲರೂ ಕೋಪಾವೇಶದಿಂದ ಸಿಡಿಮಿಡಿಗುಟ್ಟುತ್ತಾ ಕುಳಿತರು.

'' ಪೂಜ್ಯ ಮಹಾಶಯರಿರಾ ! ಈಗ ತಮ್ಮ ಅಭಿಪ್ರಾಯವೇನೆಂಬುದನ್ನು ತಿಳಿಸೋಣವಾಗಲಿ. ನಾನು ನಿಮ್ಮೆಲ್ಲರಿಗೂ ದಾಸಾನುದಾಸನು. ತಮ್ಮ ಆಜ್ಞೆಯನ್ನು ನೆರವೇರಿಸಿಕೊಂಡಿರುವುದೇ ನನ್ನ ಜೀವನದ ಸಾರಸರ್ವಸ್ವವಾಗಿರುವುದು.''

ಈ ಮಾತನ್ನು ಕೇಳಿದ ಕೂಡಲೆ ಹತ್ತು ನಿಮಿಷಗಳ ವರೆಗೂ ಆರೂ ಆವ ಮಾತನ್ನೂ ಆಡಲಿಲ್ಲ. ಆಗ ಲಲಿತಸಿಂಹನ ಪರಮ ಬಂಧುವಾದ ವೀರೇಂದ್ರಸಿಂಹನು ಎದ್ದು ನಿಂತುಕೊಂಡನು. ಆತನು ಏನ ಹೇಳುವನೋ ಎಂದು ಎಲ್ಲರೂ ಆದರದಿಂದ ಕೇಳ ತೊಡಗಿದರು.

ವೀರೇಂದ್ರನು ಮಾತನಾಡಿದನು :—

'' ಮಾನ್ಯ ಸಭಾಸದರಲ್ಲಿ ಈ ಅಧಮನ ವಿಜ್ಞಾಪನೆಗಳು. ಯುವರಾಜಲಲಿತಸಿಂಹನು ಇಲ್ಲಿಲ್ಲದಿರುವಾಗ ಆತನ ಪರವಾಗಿ ಒಂದೆರಡು ಮಾತುಗಳನ್ನಾಡುವುದು ಅಪ್ರಕೃತವೆನಿಸಲಾರದು. ನಾನು ಆತನಿಗೆ ಪರಮಮಿತ್ರನೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ಲಲಿತಸಿಂಹನು ಮೊದಲಿನಿಂದಲೂ ಸಾಧುಸ್ವಭಾವದವನು. ಆತನ ಹೃದಯವಾದರೋ ಆವಾಗಲೂ ಭೂತದಯಾಪಶ್ಚಾತ್ತಾಪದಿಂದ ತುಂಬಿ ತುಳುಕಾಡುತ್ತಿರುವುದು. ಆತನ ಸ್ವಭಾವವು ಹೀಗಿರುವುದರಿಂದ, ಭಯಂಕರವಾದ ಈ ಕೊಲೆಯು ಆತನಿಂದ ಎಂದಿಗೂ ನಡೆದುದಲ್ಲ. ಈ ಸುದ್ದಿಯನ್ನು ನಾನೇ ಅವನಿಗೆ ಮೊದಲು ತಿಳಿಸಿದವನು. ತನ್ನ ಪ್ರಾಣಕ್ಕೆ ಎಲ್ಲಿ ತೊಂದರೆ ಬರುವುದೋ ಎಂದು ಆತನು ಹತ್ಯಾಕಾರಿಗೆ ಹೆದರಿ ಪಲಾಯನವಾಗಿರುವನೇ ಹೊರತು, ಆತನೇ ಹತ್ಯಾಕಾರಿಯಾಗಿ ಪಲಾಯನ ಮಾಡಿಲ್ಲ. ನಮ್ಮ ಮಹಾರಾಜಸಿಂಹರು ಆತನೇ

ಹತ್ಯಾಕಾರಿಯೆಂದು ಈಗ ತಾನೇ ಸಮರ್ಥನ ಮಾಡಿದರು. ಈ ಸಮರ್ಥನವು ಯುಕ್ತಿ ಸಂಗತವಾದುದಲ್ಲ. ಕಾರಣವೇನೆಂದರೆ—ಮುಂದೆ ತಾನಾಗಿಯೇ ಮಹಾರಾಣನಾಗತಕ್ಕ ಲಲಿತಸಿಂಹನು, ಇಂದೋ ನಾಳೆಯೋ ಸಾಯುವ ವೃದ್ಧನಾದ ಮಹಾರಾಣನನ್ನು ಕೊಲೆಮಾಡಬೇಕಾದ ಆವಶ್ಯಕತೆಯೇನೂ ಕಂಡುಬರುವುದಿಲ್ಲ. ಕಾಲವಿಲಂಬವನ್ನು ಸಹಿಸದೆ ಬೇಗನೆಯೇ ಮಹಾರಾಣನಾಗಬೇಕೆಂಬ ಆಸೆಯು ಲಲಿತಸಿಂಹನಿಗೆ ಇದ್ದ ಪಕ್ಷದಲ್ಲಿ, ಆತನು ವೃದ್ಧನನ್ನು ಕೊಲೆಮಾಡಿ ಓಡಿಹೋಗಬೇಕೇಕೆ? ರಾಜ್ಯವನ್ನು ಬಯಸಿದಾತನು ಓಡಿಹೋಗಲು ಕಾರಣವಿರಲಾರದು. ಕೊಲೆಮಾಡಬೇಕೆಂದು ಬಯಸಿದವನು ಸಾಧ್ಯವಾದಷ್ಟು ಮಟ್ಟಿಗೆ ತಾನು ಸಿಕ್ಕದೇ ಇರುವುದಕ್ಕೆ ಬೇಕು ಬೇಕಾದ ಉಪಾಯಗಳನ್ನು ಕಲ್ಪಿಸಿಕೊಳ್ಳುವನು. ಲೋಕದಲ್ಲಿ ಆರಾದರೂ ಕೊಲೆಮಾಡಿ ಆ ರಕ್ತವನ್ನು ತನ್ನ ಹಾಸುಗೆಯ ಮೇಲೆ ಚಲ್ಲಿಕೊಂಡು ಚೂರಿಯನ್ನೂ ಅದೇ ಹಾಸುಗೆಯ ಮೇಲೆಯೇ ಇಟ್ಟು ಪಲಾಯನವಾಗುವನೇ? ಇದನ್ನು ನೀವಾರಾದರೂ ನಂಬುವಿರಾ? ಮತ್ತೊಂದು ವಿಷಯವೇನೆಂದರೆ—ಒಬ್ಬ ಮನುಷ್ಯನು ಇಬ್ಬರು ಪ್ರಹರಿಗಳನ್ನು ಕಟ್ಟ ಬಲ್ಲನೇ? ಹಾಗೆ ಕಟ್ಟುವಾಗ ಅವರಿಬ್ಬರೂ ನಿಶ್ಶಬ್ದವಾಗಿರಲು ಸಾಧ್ಯವೇ? ಇದು ನಾಟಕದ ನಡೆವಳಿಯಲ್ಲ. ಮಹಾಶಯರಿರಾ! ಮುಖ್ಯವಾದ ಈ ಕಾರಣಗಳಿಂದ ಲಲಿತನು ಅಪರಾಧಿಯಲ್ಲವೆಂದು ಸ್ಪಷ್ಟಪಡುವುದು. ಕಾರ್ಯಕಾರಣಗಳನ್ನು ಪರಿಶೀಲಿಸದೆಯೇ ಆರೂ ಆರನ್ನೂ ಅಪರಾಧಕ್ಕೆ ಗುರಿಮಾಡಬಾರದು."

ವೀರೇಂದ್ರನು ಹೀಗೆ ಹೇಳಿ ಸುಮ್ಮನಾದ ಕೂಡಲೆ, ಕೆಲವರು—ವೀರೇಂದ್ರ! ಈ ಸುದ್ದಿಯು ನಿನಗೆ ತಿಳಿದ ಬಗೆ ಹೇಗೆ? ಯುವರಾಜನಿಗೆ ನೀನು ಹೇಗೆ ತಿಳಿಸಿದೆ? ಆಗ ಆತನು ಆವ ಅವಸ್ಥೆಯಲ್ಲಿ ಎಲ್ಲಿದ್ದನು? ಎಂದು ಮುಂತಾಗಿ ಪ್ರಶ್ನೆಮಾಡಿದರು. ವೀರೇಂದ್ರನು ಈ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡುವುದಕ್ಕೆ ಮುಂದೆ ಬಂದು ನಿಂದರೆ, ಹೇಳುವುದೆಲ್ಲವನ್ನೂ ಸಪ್ರಮಾಣವಾಗಿಯೇ ಹೇಳಬೇಕಾಗುವುದು. ಸರಿಯಾದ ಪ್ರಮಾಣವು ದೊರೆಯಲಿಲ್ಲವೆಂದು ಕೇಳುವವರು

ಹೇಳಿಬಿಡುವುದಾದರೆ, ಆ ದೋಷವು ವೀರೇಂದ್ರನ ಮೇಲೆಯೇ ಒರಗಿದರೂ ಒರಗಬಹುದು. ಆದುದರಿಂದ ಇದೆಲ್ಲವನ್ನೂ ಪ್ರಕೃತದಲ್ಲಿ ಗೋಪ್ಯವಾಗಿಡುವುದೇ ಸರಿಯೆಂದು ವೀರೇಂದ್ರನು ಪರ್ಯಾಲೋಚಿಸಿ— ಮಹಾಶಯರೇ! ತಮ್ಮ ಪ್ರಶ್ನೆಗಳಿಗೆಲ್ಲಾ ಸಮಂಜಸವಾದ ಉತ್ತರವನ್ನು ಕೊಡಲು, ಈಗ ನಾನು ಕಾರಣಾಂತರಗಳಿಂದ ಅಸಮರ್ಥನಾಗಿರುವೆನು. ಆದರೂ ಲಲಿತಸಿಂಹನು ಈ ಹತ್ಯೆಯನ್ನು ಎಂದಿಗೂ ಮಾಡಿದವನಲ್ಲವೆಂಬುದನ್ನು ನಾನು ಪ್ರಮಾಣವಾಗಿಯೂ ಹೇಳುವೆನು. ಬಲು ಮಾತಿನಿಂದೇನು? ಆತನೇ ಮಾರವಾಡದ ಮಹಾರಾಣನು. ಆತನು ಪಲಾಯನವಾಗುವಾಗ, ರಾಜ್ಯದಲ್ಲಿ ಮುಖ್ಯಾಧಿಕಾರಿಗಳನ್ನು ಆತನೇ ನಿಯಮಿಸಿ ಹೋಗಿರುವನು. ರಾಜಾಜ್ಞೆಯು ಈ ರೀತಿಯಾಗಿರುವುದು:— ವೃದ್ಧಮಂತ್ರಿಯಾದ ಘನಮಲ್ಲನು ನಿವೃತ್ತನಾಗಲು ಇಷ್ಟಪಡುವುದಾದರೆ, ಆತನ ಮಗ ರಣಮಲ್ಲನು ಮಂತ್ರಿಪದವಿಯನ್ನಲಂಕರಿಸತಕ್ಕುದು. ಅಘೋರಸಿಂಹನೇ ಸೇನಾಪತಿಯು. ವಿಚಾರಸಿಂಹನೇ ಕೋಶಾಧ್ಯಕ್ಷನು. ಅಲ್ಲದೆಯೂ ಮಹಾರಾಣಿಯ ರಕ್ಷಣೆಯ ಭಾರವು ನನ್ನ ತಲೆಯ ಮೇಲೆ ಹೊರಿಸಲ್ಪಟ್ಟಿರುವುದು, ಎಂದು ಮಾತನಾಡಿ ಕುಳಿತುಕೊಂಡನು.

ವೀರೇಂದ್ರನ ಮಾತಿನಿಂದ ಲಲಿತನಿಗೆ ಉಪಕಾರವಾಗುವುದಕ್ಕೆ ಪ್ರತಿಯಾಗಿ ಅಪಕಾರವೇ ಉಂಟಾದುದು. ಪುರನಿವಾಸಿಗಳು ತಮ್ಮಲ್ಲಿ ಗಣ್ಯರಾದವರನ್ನು ದೊಡ್ಡ ದೊಡ್ಡ ಅಧಿಕಾರಗಳಲ್ಲಿ ನಿಯಮಿಸಲಿಲ್ಲವೆಂದು ಕೋಪಗೊಂಡವರಾಗಿ ವೀರೇಂದ್ರನ ಮಾತನ್ನು ಆರೂ ಲಕ್ಷಿಸದೇ ಹೋದರು. ಬಳಿಕ ಸಭಾಮಂಡಪದಲ್ಲಿ ಕೋಲಾಹಲವೆದ್ದಿತು. ಈ ಕೋಲಾಹಲದ ಮಧ್ಯದಲ್ಲಿ ಆರ ಮಾತು ಆರಿಗೂ ಕೇಳಿಸದೇ ಹೋಯಿತು.

---

## ಮೂವತ್ತೆಂಟನೆಯ ವಿಲಾಸ

ಪ್ರಾಯಿಕವಾಗಿ ಅರ್ಧಘಂಟೆಯ ವರೆಗೂ ಈ ಗಲಭೆಯು ಶಾಂತವಾಗಲೇ ಇಲ್ಲ. ತರುವಾಯ ವೃದ್ಧಮಂತ್ರಿಯು ಎದ್ದು ನಿಂತು ಮಾತನಾಡಿದನು.

“ ಮಾರವಾಡದ ಪುರಪ್ರಮುಖರೇ ರಾಜ್ಯದ ಮೂಲಸ್ತಂಭವು. ಅವರ ಇಷ್ಟದಂತೆಯೇ ರಾಜಕಾರ್ಯಗಳು ಸುಮುಖವಾಗಿ ನೆರವೇರಬೇಕಾದುದು ಧರ್ಮ ಸಮ್ಮತವಾಗಿರುವುದು. ಆದುದರಿಂದ ಈ ವಿಷಯದಲ್ಲಿ ಪುರ ಪ್ರಮುಖರ ಅಭಿಪ್ರಾಯದಂತೆ ಕೆಲಸವು ನಡೆಯತಕ್ಕದು ಪ್ರಯೋಜನಕಾರಿಯೆಂದು ನನ್ನ ಮತವು.”

ಇದನ್ನು ಕೇಳಿ ಪುರಪ್ರಮುಖರು ಆಲೋಚಿಸ ತೊಡಗಿದರು. ಅವರಲ್ಲಿ ವೃದ್ಧನಾದ ಲಕ್ಷ್ಮೀಪತಿಸಿಂಹನು ಮಾತನಾಡಿದನೇನೆಂದರೆ:—

“ ನಾವು ಈ ವಿಷಯವನ್ನು ಕುರಿತು ಮಾತನಾಡುವುದಕ್ಕೆ ಮೊದಲು ಮಹಾರಾಜಸಿಂಹನ ಅರಮನೆಗೆ ಹೋಗಿ ಅಲ್ಲಿಯ ವಿದ್ಯಮಾನವೆಲ್ಲವನ್ನೂ ಒಂದು ಸಲ ಕಣ್ಣಿನಿಂದ ನೋಡಿಕೊಂಡು ಬರುವುದು ಮೇಲಾಗಿ ತೋರುವುದು. ನಾಳೆಯ ದಿನ ನಾವುಗಳು ಇದರ ಸಿದ್ಧಾಂತವನ್ನು ತಿಳಿಸುವೆವು. ಇದು ಎಲ್ಲರಿಗೂ ಸಮ್ಮತವಷ್ಟೇ?”

ಲಕ್ಷ್ಮೀಪತಿಸಿಂಹನ ಸಲಹೆಯಂತೆ ಎಲ್ಲರೂ ಒಪ್ಪಲು ಸಭೆಯು ಕೊನೆಗಂಡಿತು. ಬಳಿಕ ಎಲ್ಲರೂ ಗುಂಪು ಗುಂಪಾಗಿ ಕೊಲೆಯಾದ ಸ್ಥಲಕ್ಕೆ ತೆರಳಿದರು. ಕೃತ್ಯ ನಡೆದ ಸ್ಥಲದಲ್ಲಿ ಬದ್ಧರಾಗಿ ಬಿದ್ದಿದ್ದ ಪ್ರಹರಿಗಳು ಪ್ರೇಕ್ಷಕರನ್ನು ನೋಡಿ—ಮಹಾಸ್ವಾಮಿಾ! ಲಲಿತಸಿಂಹನು ನಮ್ಮೆಲ್ಲರನ್ನೂ ಬಂಧಿಸಿ ಮಹಾರಾಜಾ ಸಾಹೇಬರನ್ನು ತನ್ನ ಕೈಯಿಂದಲೇ ಕೊಲೆಮಾಡಿದನು, ಎಂದು ಹೇಳಿದರು. ಬಳಿಕ ಎಲ್ಲರೂ ಘೋರ ದೃಶ್ಯವನ್ನು ಕಣ್ಣಾರೆ ನೋಡಿದರು. ಲಲಿತಸಿಂಹನ ಹಾಸುಗೆಯು ರಕ್ತಮಯವಾಗಿದ್ದುದಲ್ಲದೆ, ಆತನ ಹಾಸುಗೆಯ ಮೇಲೆ ಒಂದು ಚೂರಿಯೂ ಬಿದ್ದಿದ್ದಿತು. ಇದನ್ನು ನೋಡಿ ಎಲ್ಲರೂ, ಲಲಿತನೇ ಹತ್ಯಾಕಾರಿಯೆಂದು ನಿರ್ಧರಮಾಡಿಕೊಂಡರು. ಲಲಿತಸಿಂಹನೇ ಹತ್ಯಾಕಾರಿಯೆಂದು ನಿರ್ಧರಪಡಿಸುವುದಕ್ಕೆ ಮಹಾರಾಜಸಿಂಹನು ಮಾಡಿದ ಕುತಂತ್ರವು ವರ್ಣನಾತೀತವಾದುದು. ಮಹಾರಾಜಸಿಂಹನು ಜನರನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಕೆಲವರಿಗೆ ರಾಜ್ಯದಲ್ಲಿ ಉಚ್ಚಾಧಿಕಾರವನ್ನು ಕೊಡುವುದಾಗಿಯೂ, ಕೆಲವರಿಗೆ ಅಪರಿಮಿತವಾದ ಧನವನ್ನು ಕೊಡುವುದಾಗಿಯೂ,

ಕೆಲವರಿಗೆ ಗ್ರಾಮಭೂಮಿಗೆಳನ್ನು ಕೊಡುವುದಾಗಿಯೂ ಆಸೆ ತೋರಿದನು. ಕೆಲವರನ್ನು ಭೋಜನೋಪಚಾರಗಳಿಂದಲೂ, ಕೆಲವರನ್ನು ಒಳ್ಳೆಯ ಮಾತುಗಳಿಂದಲೂ, ಕೆಲವರನ್ನು ಭಯಪ್ರದರ್ಶನದಿಂದಲೂ ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ವೀರೇಂದ್ರಸಿಂಹನು ಮಹಾರಾಜಸಿಂಹನ ಈ ಕುತಂತ್ರವನ್ನು ಅರಿತುಕೊಂಡು, ಇದನ್ನು ಬಯಲು ಮಾಡುವುದಕ್ಕಾಗಿ ಪುರಪ್ರಮುಖರ ಮನೆಗಳಿಗೆ ಅಲೆದಲೆದು ಸೋತುಹೋದನೇ ಹೊರತು, ಅವನ ಪಕ್ಷವು ಸಾರ್ಥಕವಾಗದೇ ಹೋಯಿತು.

ಮರುದಿನ ಯಥಾಸಮಯದಲ್ಲಿ ವಿರಾಟ್ಸಭೆಯು ಪುನಃ ಸೇರಿತು. ಇಂದಿನ ದಿನದಲ್ಲಿ ಜನರ ಸಂದಣಿಯು ಹಿಂದಿನ ದಿನಕ್ಕಿಂತಲೂ ನಾಲ್ವಡಿಯಾಗಿ ಹೋಗಿದ್ದಿತು. ಸ್ತ್ರೀಪುರುಷರಲ್ಲಿ ಆಬಾಲವೃದ್ಧರೆಲ್ಲರೂ ಸಭೆಯ ಸಿದ್ಧಾಂತವನ್ನು ಅರಿವುದಕ್ಕಾಗಿ ತಮ್ಮ ತಮ್ಮ ಕೆಲಸಗಳೆಲ್ಲವನ್ನೂ ಬಿಟ್ಟು ಬಂದಿದ್ದರು.

ಹಿಂದಿನ ದಿನದಂತೆಯೇ ಮಹಾರಾಜಸಿಂಹನು ಬಂದು ಸಿಂಹಾಸನದ ಪಕ್ಕದಲ್ಲಿ ತಲೆವಾಗಿ ನಿಂತನು. ಎಲ್ಲರೂ ಮೌನದಿಂದ ಕುಳಿತಿದ್ದರು. ಆಗ ಲಕ್ಷ್ಮೀಪತಿಸಿಂಹನು ಮಾತನಾಡಿದನು :—

"ಲಲಿತಸಿಂಹನೇ ಮಹಾರಾಣಾ ಸಾಹೇಬರನ್ನು ಕೊಲೆಮಾಡಿದಾತನೆಂದು ನಮ್ಮೆಲ್ಲರ ಅಭಿಪ್ರಾಯವು. ನಾವಾರೂ ಆತನ ಪಕ್ಷವನ್ನು ಸಮರ್ಥನ ಮಾಡುವುದಕ್ಕೆ ಇಷ್ಟಪಡತಕ್ಕವರಾಗಿಲ್ಲ. ನಾವು ಅಂತಹ ನೀಚಾಶಯನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಮಾರವಾಡದ ಸಂಸ್ಥಾನವನ್ನು ಕಳಂಕಿತವನ್ನಾಗಿ ಮಾಡಲು ಸಿದ್ಧರಾಗಿಲ್ಲ. ಇಂದು ಮೊದಲು ಸರ್ವಗುಣಸಂಪನ್ನನಾದ ಶ್ರೀಮಂತ ಮಹಾರಾಜಸಿಂಹನು ಮಾರವಾಡದ ಮಹಾರಾಣನು. ಇದಕ್ಕೆ ನಾವೆಲ್ಲರೂ ಏಕವಾಕ್ಯತೆಯಿಂದ ಸಮ್ಮತಿಯನ್ನಿತ್ತಿರುವೆವು."

ಈ ಮಾತು ಮುಗಿದ ಕೂಡಲೆ ನಾಲ್ಕು ದಿಕ್ಕುಗಳಿಂದಲೂ "ಜಯ ಮಹಾರಾಜ, ಜಯ ಜಯ ಮಹಾರಾಜ, ಜಯ ಜೀವ ಮಹಾರಾಜ" ಎಂದು ಜಯಧ್ವನಿಯು ನಭೋ ಮಂಡಲವನ್ನು ಭೇದಿಸುವಂತೆ ಘೋರ್ಗರೆ

ಯಿತು. ಇದಕ್ಕೆ ಇಷ್ಟಪಡದ ಕೆಲವರು ತಮ್ಮ ಮಾತು ನಡೆಯುವು ದಿಲ್ಲವೆಂದು ಸುಮ್ಮನಾಗಿಬಿಟ್ಟರು. ಜಯ ಧ್ವನಿಯು ಕೊಂಚ ಮಟ್ಟಿಗೆ ಶಾಂತವಾದ ಮೇಲೆ, ವೀರೇಂದ್ರನು ಮಾತನಾಡಿದನು :—

" ಈ ಜಯಘೋಷದಿಂದ ಎಲ್ಲರೂ ಏಕಾಭಿಪ್ರಾಯವುಳ್ಳವರೆಂದು ತಿಳಿದುಬರುತ್ತಿರುವುದು. ಯುವರಾಜ ಲಲಿತಸಿಂಹನು ಸರ್ವಪ್ರಕಾರ ದಿಂದಲೂ ಹತ್ಯಾಕಾರಿಯಲ್ಲ. ಇಲ್ಲಿಯ ಮಹಾಜನರು ನಿಜವಾದ ಹತ್ಯಾಕಾರಿಯನ್ನು ಕಂಡು ಹಿಡಿಯದಿರುವುದಕ್ಕಾಗಿ ನಾನು ತುಂಬಾ ಪಶ್ಚಾತ್ತಾಪಪಡುವೆನು. ಲಲಿತನು ನಿರ್ದೋಷಿಯಾದುದರಿಂದ, ಆತನೇ ಈ ಮಾರವಾಡ ಸಂಸ್ಥಾನಕ್ಕೆ ಮಹಾರಾಣನು. ನಾನು ಆತನನ್ನು ಹೊರತಾಗಿ ಮತ್ತಾರನ್ನೂ ಈ ರಾಜ್ಯಕ್ಕೆ ಮಹಾರಾಣನನ್ನಾಗಿ ಒಪ್ಪಿ ಕೊಳ್ಳಲಾರೆನು. "

ಈ ರೀತಿಯಾಗಿ ವೀರೇಂದ್ರನಾಡಿದ ಮಾತನ್ನು ಕೇಳಿ ಎಲ್ಲರೂ ಮನಬಂದಂತೆ ಕೂಗಾಡಿದರು. ಈ ಗಲಭೆಯನ್ನು ನಿಲ್ಲಿಸುವುದಕ್ಕೆ ರಾಜ ಸೇವಕರು ಎಷ್ಟೋ ಪ್ರಯತ್ನಮಾಡಿ ನೋಡಿದರು. ಆದರೂ ಏನೂ ಪ್ರಯೋಜನವಾಗದಿರಲು, ಸಭಾ ಮಂಟಪದ ಒಂದೆಡೆಯಲ್ಲಿ ಬಾಲಕ ನೊಬ್ಬನು ಎದ್ದು ನಿಂತನು. ಆತನ ಮೋಹನರೂಪವನ್ನು ನೋಡಿ ಎಲ್ಲರೂ ನಿಶ್ಶಬ್ದನಾಗಿ ಆ ಬಾಲಕನನ್ನೇ ನೋಡುತ್ತಾ ಕುಳಿತರು. ಬಳಿಕ ವೀರ ಬಾಲನಾದ ಜುಮೇಲಿಯನು ಮಾತನಾಡಿದನು :—

" ಮಾರವಾಡದ ಮಾನ್ಯ ಸಭಾಸದರಲ್ಲಿ ಬಾಲಕನ ಸವಿನಯ ವಿನಿವೇದನವು. ಭಿಲ್ಲ ಜಾತಿಯವರು ಬಹುಕಾಲದಿಂದಲೂ ಮಾರವಾಡ ಸಂಸ್ಥಾನಕ್ಕೆ ಆಶ್ರಿತರು. ಪುರಪ್ರಮುಖರಂತೆ ರಾಜಕಾರ್ಯದ ವಿಷ ಯದಲ್ಲಿ ಮಾತನಾಡುವುದಕ್ಕೆ ನನಗೆ ಆವ ಅಧಿಕಾರವು ಇಲ್ಲದಿದ್ದರೂ, ಈ ಸಂದರ್ಭದಲ್ಲಿ ಒಂದೆರಡು ಮಾತುಗಳನ್ನಾಡಬೇಕೆಂದು ಬಯಸಿರು ವೆನು. ನೀವುಗಳೆಲ್ಲರೂ ಸಮ್ಮತಿಸುವಿರೆಂಬ ಭರವಸೆಯಿಂದ ಈಗ ನಾನು ನನ್ನ ಅಭಿಪ್ರಾಯವನ್ನು ಸೂಚಿಸುವವನಾಗಿರುವೆನು. "

ಜುಮೋಲಿಯನು ಹೀಗೆ ಹೇಳಿ ಸುಮ್ಮನಾದನು. ಇದಕ್ಕೆ ಮಹಾ ರಾಜಸಿಂಹನು ಉತ್ತರ ಕೊಟ್ಟುದು :—

“ ಭಿಲ್ಲರು ನಮಗೆ ಪರಮಬಂಧುಗಳು. ಈ ಸಮಯದಲ್ಲಿ ಅವರ ಅಭಿಪ್ರಾಯವೂ ನಮಗೆ ಪರಮ ಮಾನ್ಯವಾದುದು. ಅವರು ನಮಗೆ ಅನೇಕ ವೇಳೆಗಳಲ್ಲಿ ಎಷ್ಟೋ ಸಾಹಾಯ್ಯವನ್ನೆಸಗಿರುವರು. ಅಲ್ಲದೆ ಮುಂದೆಯೂ ಸಹಾಯರಾಗಿ ನಿಲ್ಲುವವರಾಗಿರುವರು. ಅದುಕಾರಣ ಈ ಸಂದರ್ಭದಲ್ಲಿ ಅವರ ಅಭಿಪ್ರಾಯವನ್ನು ನಾವು ಕೇಳಿ ತಿಳಿಯಬೇಕಾದುದು ಅತ್ಯಾವಶ್ಯಕವಾಗಿರುವುದು. ”

ಇದನ್ನು ಕೇಳಿ ಜುಮೋಲಿಯನು ಹೇಳತೊಡಗಿದನು :—

“ ಶ್ರೀಯುತ ಮಹಾರಾಜಸಿಂಹ ಮಹಾಶಯ! ನಾನು ಜುಮೋಲಿಯಾ. ರಾಜಪುತ್ರಸ್ಥಾನದ ಉತ್ತರ ದಿಕ್ಕಿನಿಂದ ಹಿಡಿದು ನೀಲಗಿರಿಯವರೆಗೂ ವಾಸವಾಗಿರುವ ಭಿಲ್ಲರು ಕೃಪೆಯಿಟ್ಟು ನನ್ನನ್ನು ತಮ್ಮ ರಾಜನನ್ನಾಗಿ ಮಾಡಿಕೊಂಡಿರುವರು. ಅವರೇ ನನ್ನನ್ನು ಇಲ್ಲಿಗೆ ಕಳುಹಿರುವರು. ಈಗ ನಾನು ಹೇಳುವುದೆಲ್ಲವೂ ಅವರ ಅಭಿಪ್ರಾಯವೆಂದೇ ತಾವು ತಿಳಿಯತಕ್ಕುದು. ”

ಮಹಾರಾಜಸಿಂಹನು ನಿಂತಿದ್ದವನು ಕುಳಿತುಕೊಂಡನು. ವೃದ್ಧನಾದ ಲಕ್ಷ್ಮೀಪತಿಸಿಂಹನು ಎದ್ದು ನಿಂತು—ಭಿಲ್ಲರಾಜ! ತಾವು ತಮ್ಮ ಅಭಿಪ್ರಾಯವನ್ನು ನಿರಾತಂಕವಾಗಿ ತಿಳಿಸೋಣವಾಗಲಿ, ಎಂದು ನುಡಿದನು. ಜುಮೋಲಿಯನು ಇಂತೆಂದನು :—

“ಲಲಿತಸಿಂಹನು ಮಹಾರಾಣನ ಹತ್ಯೆಯನ್ನು ನಡೆಯಿಸಿದನೋ ಇಲ್ಲವೋ ನನಗೆ ತಿಳಿಯದು. ಆತನು ಹತ್ಯಾಕಾರಿಯೆಂದು ಧರ್ಮಾವತಾರರು ಸಪ್ರಮಾಣವಾಗಿ ಸಿದ್ಧಾಂತಪಡಿಸುವುದಾದರೆ, ಆತನಿಗೆ ಸರಿಯಾದ ದಂಡವೇ ವಿಧಿಸಲ್ಪಡತಕ್ಕುದು. ಶಾಸ್ತ್ರಕಾರರು ಹೀಗೆ ನುಡಿದಿರುವರು :—

ಅದಂಡ್ಯಾನ್ ದಂಡಯನ್ ರಾಜಾ । ದಂಡ್ಯಾಂಶ್ಚೈವಾಪ್ಯದಂಡಯನ್ ॥
ಅಯಶೋ ಮಹದಾಪ್ನೋತಿ । ನರಕಂ ಚೈವ ಗಚ್ಛತಿ ॥

ತಾತ್ಪರ್ಯವೇನೆಂದರೆ—ಪ್ರಜಾಪಾಲನ ತತ್ಪರನಾಗಿರತಕ್ಕ ಸದ್ಧರ್ಮಪರಾಯಣನಾದ ರಾಜನು ನಿರಪರಾಧಿಗಳನ್ನು ದಂಡಿಸುವುದರಿಂದಲೂ, ಅಪರಾಧಿಗಳನ್ನು ದಂಡಿಸದೇ ಬಿಡುವುದರಿಂದಲೂ. ಈ ಲೋಕದಲ್ಲಿ ಮಹತ್ತರವಾದ ಅಪಯಶಸ್ಸನ್ನು ಹೊದ್ದಿ, ಮರಣಾನಂತರದಲ್ಲಿ ನರಕಕ್ಕೆ ಭಾಗಿಯಾಗುವನು.

ಶಾಸ್ತ್ರಕಾರರ ವಚನವು ಹೀಗಿರುವುದರಿಂದ, ಆತನೊಬ್ಬನಿಗೆ ದಂಡವಿಧಾನಮಾಡುವುದರಿಂದ ದೇಶಕ್ಕೇ ಕ್ಷೇಮವುಂಟಾಗುವುದು. ಈಗ ಆತನು ಪಲಾಯನ ಮಾಡಿರುವನು. ಆತನ ಹೆಂಡಿತಿ ಮಹಾರಾಣಿ ಕುಮುದಿನಿಯು ಗರ್ಭಿಣಿಯೆಂದು ಗೊತ್ತಾಗಿರುವುದರಿಂದ, ಆಕೆಯಲ್ಲಿ ಜನಿಸತಕ್ಕ ಶಿಶುವೇ ಮಾರವಾಡದ ಮಹಾರಾಜನೋ ಮಹಾರಾಣಿಯೋ ಆಗುವುದಕ್ಕೆ ಯೋಗ್ಯವು. ತಂದೆಯ ದೋಷದಿಂದ ಮಗುವಿನ ಹಕ್ಕನ್ನು ತಪ್ಪಿಸುವುದು ಸನಾತನಧರ್ಮವಲ್ಲ. ಆದುದರಿಂದ ಭಿಲ್ಲರೆಲ್ಲರೂ ಲಲಿತಸಿಂಹನ ಶಿಶುವನ್ನೇ ರಾಜ್ಯೇಶ್ವರನನ್ನಾಗಿ ಒಪ್ಪತಕ್ಕವರಾಗಿರುವರು. ಅವರು ಮತ್ತಾರನ್ನೂ ಮಾರವಾಡದ ಮಹಾರಾಜನನ್ನಾಗಿ ಒಪ್ಪತಕ್ಕವರಾಗಿಲ್ಲ. ''

---

## ಮೂವತ್ತೊಂಬತ್ತನೆಯ ವಿಲಾಸ

ಜಾಮೋಲಿಯನ ಮೃದುಮಧುರವಾಗಿಯೂ ತೇಜಃಪೂರಿತರಾಗಿಯೂ ಇರುವ ಮಾತನ್ನು ಕೇಳಿ ಸಭಾಸದರೆಲ್ಲರೂ ವಿಸ್ಮಿತರಾಗಿ ಹೋದರು. ದೂರದಲ್ಲಿದ್ದವರು ಕೋಲಾಹಲವನ್ನೆಬ್ಬಿಸಿದರು; ಹತ್ತಿರದಲ್ಲಿದ್ದವರು ಜಾಮೋಲಿಯನನ್ನು ಎವೆಯಿಕ್ಕದೇ ನೋಡಲಾರಂಭಿಸಿದರು.

ಈ ಸಮಯದಲ್ಲಿ ವೀರೇಂದ್ರನು ಸಭಾಪರಿತ್ಯಾಗ ಮಾಡುವುದರಲ್ಲಿದ್ದನು. ಮಹಾರಾಜಸಿಂಹನು ಆತನನ್ನು ಬಂದಿಯನ್ನಾಗಿ ಮಾಡುವಂತೆ ಸೇವಕರಿಗೆ ಕಣ್ಣು ಸನ್ನೆ ಮಾಡಿದನು. ಕೂಡಲೆಯೇ ವೀರೇಂದ್ರನನ್ನು ಹಿಡಿಯುವುದಕ್ಕೆ ರಾಜಸೇವಕರು ಮುಂದಾಗಿ ಬಂದರು. ಇದನ್ನು ನೋಡಿ ಎಲ್ಲರೂ ಎದ್ದು ನಿಂತು ಕೂಗಿಕೊಂಡರು. ಕೆಲವರು ಆತ್ಮರಕ್ಷಣೆ

ಗಾಗಿ ತಮ್ಮ ತಮ್ಮ ಕತ್ತಿಯನ್ನು ಒರೆಯಿಂದ ತೆಗೆದರು. ಕೆಲವರು ಹೊರಗೆ ಹೋಗೆಲುಪಕ್ರಮಿಸಿದರು. ಕೆಲವರು 'ಸದ್ದು ಸದ್ದು' ಎಂದರು; ಕೆಲವರು 'ಹಾಯ್ ಹಾಯ್' ಎಂದರು. ಕೆಲವರು ನಕ್ಕರು; ಕೆಲವರು ರೇಗಿದರು. ಅಂತೂ ಎಲ್ಲೆಲ್ಲಿಯೂ ಗದ್ದಲವು ಉನ್ಮಸ್ತಕವಾಗಿ ಹೋಯಿತು. ಈ ಗಲಭೆಯನ್ನು ಅಡಗಿಸುವುದು ಆರಿಗೂ ಸಾಧ್ಯದ ಮಾತಾಗಿರಲಿಲ್ಲ.

ಕೊಂಚ ಹೊತ್ತಿನ ಮೇಲೆ ಗದ್ದಲವು ಕೊಂಚ ಮಟ್ಟಿಗೆ ಶಾಂತವಾಗಲು, ಮಹಾರಾಜಸಿಂಹನು ಆರ ಅಪ್ಪಣೆಯನ್ನೂ ನಿರೀಕ್ಷಿಸದೆಯೇ ರಾಜ್ಯ ಸಿಂಹಾಸನದ ಮೇಲೆ ತಾನೇ ಕುಳಿತುಬಿಟ್ಟನು. ಸಭಾಸದರೆಲ್ಲರೂ ಜಯಧ್ವನಿ ಮಾಡಲು, ಹೊರಗಿದ್ದ ಸೈನಿಕರೆಲ್ಲರೂ ಬ್ರಹ್ಮಾಂಡವು ಒಡೆದು ಹೋಗುವಂತೆ "ಜಯಜಯ, ಜಯಜಯ, ಜಯಜಯ," ಎಂದು ಗಟ್ಟಿಯಾಗಿ ಜಯಕಾರವನ್ನು ಮಾಡಿದರು. ತರುವಾಯ ಮಹಾರಾಜಸಿಂಹನು ಎಲ್ಲರನ್ನೂ ಸಂಬೋಧಿಸಿ ಇಂತೆಂದನು :—

"ಪ್ರಜೆಗಳಿರಾ! ಮಾರವಾಡದ ಮಹಾರಾಜನು ಮಡಿದುದಕ್ಕಾಗಿ ಎಲ್ಲರೂ ಒಂದು ತಿಂಗಳ ಕಾಲದ ವರೆಗೂ ಶೋಕ ಸಾಗರದಲ್ಲಿ ಮುಳುಗಿರಬೇಕೇ ಹೊರತು ಆನಂದೋತ್ಸವಗಳನ್ನು ನೆರವೇರಿಸಲಾಗದು. ಒಂದು ತಿಂಗಳಾದ ಬಳಿಕ ಪಟ್ಟಾಭಿಷೇಕ ಮಹೋತ್ಸವವು ಅತಿ ವಿಜೃಂಭಣೆಯಿಂದ ನಡೆಯತಕ್ಕದಾಗಿರುವುದು. ನೀವೆಲ್ಲರೂ ಉದಾರ ಹೃದಯದಿಂದ ರಾಜ್ಯಭಾರದ ಸೂತ್ರವನ್ನು ನಮ್ಮಲ್ಲಿ ಒಪ್ಪಿಸಿರುವುದರಿಂದ, ಅದರ ಕೃತಜ್ಞತೆಗಾಗಿ ನಾವು ನಮ್ಮ ದೇಶದ ಪ್ರಜಾ ವರ್ಗದವರಿಗೆ ಒಂದು ವರ್ಷದ ಕಂದಾಯವನ್ನು ಮನ್ನಿಸಿರುವೆವು. ಸೈನ್ಯದವರಿಗೆ ಮೂರು ತಿಂಗಳ ಸಂಬಳವು ಬಹುಮಾನವಾಗಿ ಈಗಲೇ ರಾಜಕೋಶದಿಂದ ಸಲ್ಲಿಸಲ್ಪಡುವುದು. ಎಲ್ಲರೂ ಮೊದಲಿನಂತೆಯೇ ರಾಜಭಕ್ತಿ ಪರಾಯಣರಾಗಿ ತಮ್ಮ ತಮ್ಮ ಕೆಲಸಗಳನ್ನು ನೆರವೇರಿಸಿಕೊಂಡು ಬರತಕ್ಕದ್ದು. ಲಲಿತಸಿಂಹನು ಮಹಾರಾಣನನ್ನು ಕೊಂದಿರುವುದರಿಂದ, ಆತನಿಗೆ ಪ್ರಾಣ ದಂಡನೆಯು ಅಪರಿಹಾರ್ಯವು. ಆದುದರಿಂದ ಆತನನ್ನು ಹಿಡಿದು ತಂದು ಕೊಡುವವರಿಗೆ ಒಂದು ಲಕ್ಷ ರೂಪಾಯಿಗಳ ಬಹುಮಾನವು

ಸಲ್ಲಿಸಲ್ಪಡುವುದು. ವೀರೇಂದ್ರಸಿಂಹನು ಸಭೆಯಲ್ಲಿ ರಾಜದ್ರೋಹಕರವಾದ ಅಭಿಪ್ರಾಯವನ್ನು ತೋರ್ಪಡಿಸಿರುವುದರಿಂದ, ಆತನನ್ನು ಸೆರೆಮನೆಯಲ್ಲಿ ಬಂದಿಯಾಗಿಡತಕ್ಕದು. ಬಳಿಕ ಸರಿಯಾದ ವಿಚಾರಣೆಯಾಗಿ ಆತನಿಗೆ ದಂಡವನ್ನು ವಿಧಿಸತಕ್ಕದು. ನಮಗೆ ವಿರೋಧವಾಗಿ ವ್ಯವಹರಿಸಿದ ಅವಿವೇಕಿಯಾದ ಆ ಜುಮೇಲಿಯನೆಂಬ ಹುಡುಗನನ್ನು ಕೂಡಲೆಯೇ ಹಿಡಿದು ಆವ ವಿಚಾರಣೆಗೂ ಆಸ್ಪದ ಕೊಡದೆ ಗಲ್ಲಿಗೇರಿಸಿಬಿಡುವುದು. ಸಭಾಸದರೆ! ಇಂದಿನ ಸಭಾ ಕಾರ್ಯವು ಸಾಂಗವಾಗಿ ನೆರವೇರಿದುದರಿಂದ, ಇನ್ನು ನಾವು ರಾಜಕಾರ್ಯದಲ್ಲಿ ತೊಡಗುವೆವು.''

ಮಹಾರಾಜಸಿಂಹನು ಹೀಗೆ ಹೇಳಿದ ಕೂಡಲೆ ಸಭಾ ಭಂಗವಾಯಿತು. ಸೇವಕರು ರಾಜಾಜ್ಞೆಯಂತೆ ವೀರೇಂದ್ರನನ್ನು ಬಂದಿಯಾಗಿ ಹಿಡಿದರು. ಸಭೆಯಲ್ಲಿ ಗಲಭೆಯು ಎದ್ದ ಕೂಡಲೆ ಜುಮೇಲಿಯನು ಸಭಾ ತ್ಯಾಗಮಾಡಿ ಎಲ್ಲಿಯೋ ಮಾಯವಾಗಿ ಬಿಟ್ಟನಾದುದರಿಂದ, ಎಲ್ಲಿ ಹುಡುಕಿದರೂ ಆತನು ಆರ ಕೈಗೂ ಸಿಕ್ಕಲಿಲ್ಲ.

ಮತ್ತೊಂದು ಕ್ಷಣಕಾಲವು ಕಳೆವುದರೊಳಗಾಗಿ ಸಭಾ ಮಂದಿರದಲ್ಲಿ ವಿಕಟಾಟ್ಟಹಾಸದ ಧ್ವನಿಯು ಎಲ್ಲೆಡೆಗಳಲ್ಲಿಯೂ ವ್ಯಾಪಿಸಿತು. ಇದಕ್ಕೆ ಕಾರಣವೇನೆಂದು ಎಲ್ಲರೂ ಬೆರಗಾಗಿ ಸುತ್ತಲೂ ನೋಡಿದರು. ಮೊದಲು ಮೊದಲು ಇದರ ಕಾರಣವು ಆರಿಗೂ ಗೊತ್ತಾಗದೇ ಹೋಯಿತು. ಬಳಿಕ ಎಲ್ಲರೂ 'ಭಿಲ್ಲರ ಕಾತ್ಯಾಯನಿ, ಭಿಲ್ಲರ ಕಾತ್ಯಾಯನಿ' ಎಂದು ಕೂಗಿಕೊಂಡರು. ಇದು ಮಹಾರಾಜನ ಕಿವಿಗೂ ಬಿದ್ದಿತು. ಆತನು ಇದನ್ನು ಕೇಳಿದ ಕೂಡಲೆ ಮುಖದಲ್ಲಿ ಕಾಂತಿಹೀನನಾಗಿಯೂ, ದೇಹದಲ್ಲಿ ಬಲಹೀನನಾಗಿಯೂ ಆಗಿ ಬಿಟ್ಟನು.

ಮಹಾರಾಜನು ಅತಿ ಪ್ರಯಾಸದಿಂದ ತನ್ನ ಮನೋಭಾವವನ್ನು ಅಡಗಿಸಿಕೊಂಡು ಕುಳಿತಿದ್ದನು. ಹುಚ್ಚಿಯು ಸತ್ತು ಹೋದಳೆಂದು ಆತನು ತಿಳಿದಿದ್ದುದರಿಂದ, ಆತನ ಶರೀರದಲ್ಲಿ ಇನ್ನೂ ಕೊಂಚ ತ್ರಾಣವಿದ್ದಿತು. ಹುಚ್ಚಿಯು ಇನ್ನೂ ಬದುಕಿರುವಳೆಂಬುದನ್ನು ಅರಿತುಕೊಂಡ ಮಹಾರಾಜಸಿಂಹನು ಎದೆಗೆಟ್ಟು ಕಂಗೆಟ್ಟು ಹೋದನು. ಆತನು ಭಯ

ದಿಂದ ಸಭೆಯನ್ನು ಬಿಟ್ಟು ಓಡಿಹೋಗಬೇಕೆಂದು ಯತ್ನಮಾಡಿ ನೋಡಿದನು. ಸಭಾಸದರು ಇದನ್ನು ಹೇಗೋ ಕಂಡುಕೊಂಡು ಕಾರಣವೇನೆಂಬುದನ್ನು ಅರಿವುದಕ್ಕಾಗಿ ರಾಜನ ಬಳಿಗೈತಂದರು. ಈ ನೆಪದಿಂದ ಸಭೆಯಲ್ಲಿ ಮತ್ತೆ ಗದ್ದಲವೆದ್ದಿತು.

ಈ ಸಂದರ್ಭದಲ್ಲಿ ಹುಚ್ಚಿಯು ತನ್ನ ಎರಡು ಕೈಗಳಿಂದಲೂ ಜನರ ಗುಂಪನ್ನು ಚದರಿಸುತ್ತಾ ಸಿಂಹಾಸನದ ಬಳಿಗೆ ಬರುವ ಯತ್ನಮಾಡ ತೊಡಗಿದಳು. ಜನರು ಅಂಜಿದವರಾಗಿ ಹುಚ್ಚಿಗೆ ದಾರಿಯನ್ನು ಬಿಟ್ಟುಕೊಟ್ಟು ದೂರವಾಗಿ ಸರಿದು ನಿಂತರು. ಹುಚ್ಚಿಯು ಭಯಂಕರವಾದ ನಗೆಯನ್ನು ನಕ್ಕು ಸಿಂಹಾಸನದ ಬಳಿಗೆ ಓಡಿ ಬಂದು, "ನಾನೇ ದೂರದಾಡವ ಮಹಾರಾಣಿ, ಮಹಾರಾಣಿ, ಮಹಾರಾಣಿ," ಎಂದು ಕುಣಿಯುತ್ತಾ ಅರಚಿದಳು. ಆಕೆಯು ಹೀಗೆ ಹೇಳಿದ ಕೂಡಲೆ ಗಟ್ಟಿಯಾಗಿ ಅಳುವುದಕ್ಕೆ ಮೊದಲು ಮಾಡಿದಳು. ಬಳಿಕ "ಅಲ್ಲ, ಅಲ್ಲ, ಅಲ್ಲ; ರಾಕ್ಷಸ, ನರರಾಕ್ಷಸ, ಬ್ರಹ್ಮರಾಕ್ಷಸ, ಅಮಾತ್ಯ ರಾಕ್ಷಸ" ಎಂದು ಜೋರಾಗಿ ಗಟ್ಟಿಯಾಗಿ ಚೀತ್ಕಾರ ಧ್ವನಿಯನ್ನು ಮಾಡಿ, ತಟ್ಟನೆ ಸಭೆಯನ್ನು ತ್ಯಾಗಮಾಡಿ ಹೊರಗೆ ಓಡಿಯೇ ಹೋದಳು.

ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ಇಷ್ಟೆಲ್ಲವೂ ನಡೆದು ಹೋಗಲು, ಮಹಾರಾಜಸಿಂಹನು ಆವ ಕೆಲಸ ಮಾಡುವುದಕ್ಕೂ ದಿಕ್ಕುತೋರದವನಾಗಿ ಮುಖವನ್ನು ಜೋಲು ಹಾಕಿಕೊಂಡು ಸ್ಥಂಬದೋಗ ಬಂದವನಂತೆ ನಿಂತುಬಿಟ್ಟನು. ಹುಚ್ಚಿಯು ಹೊರಟುಹೋದ ಬಳಿಕ ಮಹಾರಾಜಸಿಂಹನಿಗೆ ಹೋಗಿದ್ದ ಪ್ರಾಣವು ಮತ್ತೆ ಬಂದಂತಾಯಿತು. ತರುವಾಯ ಆತನು ಸಭಾಸದರನ್ನು ಕುರಿತು— ಪೂಜ್ಯಮಹಾಶಯರಿರಾ! ಜುಮೇಲಿಯನು ಓಡಿ ಹೋದನು. ಈ ಹುಚ್ಚಿಯಾದರೋ ಸಭೆಯಲ್ಲಿ ನುಗ್ಗಿ ಬಂದು ರಾಜಕಾರ್ಯಕ್ಕೆ ಕುಂದು ಕೊರತೆಯನ್ನುಂಟು ಮಾಡಿರುವಳು. ಈಕೆಯನ್ನು ಹೇಗಾದರೂ ಮಾಡಿ ಸೆರೆಮನೆಯಲ್ಲಿ ನಿರ್ಬಂಧಿಸಿಡಬೇಕು. ಈಕೆಯು ಹುಚ್ಚಿಯಲ್ಲವೆಂದು ನನಗೆ ತೋರುವುದು. ಹೇಗಾದರೂ ಆಗಲಿ; ಈಕೆಯನ್ನು ಹಿಡಿಯಲೇ ಬೇಕು. ಬಳಿಕ ಈಕೆಯ ಅಪರಾಧಕ್ಕೆ ಅನುಗುಣವಾಗಿ ದಂಡನೆಯಾಗಲೇ ಬೇಕು. ಈಗ

ದಿನದಲ್ಲಿ ತುಂಬಾ ಹೊತ್ತಾಗಿರುವುದರಿಂದ, ಇಂದಿನ ಕಾರ್ಯವು ಮುಗಿಸಲ್ಪಡುವುದು, ಎಂದು ಹೇಳಿದ ಕೂಡಲೆ ಸಭೆಯು ಚದರಿತು.

---

## ನಲವತ್ತನೆಯ ವಿಲಾಸ

ಒಂದನೆ ಕಥಾಸಂವಿಧಾನವು ನಡೆದ ಮೇಲೆ ಮೂರು ತಿಂಗಳ ಕಾಲವು ಕಳೆದು ಹೋಗಿರುವುದು. ಇಷ್ಟಾದರೂ ಲಲಿತಸಿಂಹನ ಸುದ್ದಿಯೇ ಇಲ್ಲ.

ಕಾರಾಗಾರದಲ್ಲಿದ್ದ ವೀರೇಂದ್ರನು ಲಲಿತಸಿಂಹನಿಗೆ ಆವ ಸಮಾಚಾರವನ್ನೂ ತಿಳಿಸಲಾರದವನಾಗಿದ್ದನು. ರಾಜ ಸೇವಕರು ಅತಿ ಪ್ರಯತ್ನದಿಂದ ವೀರೇಂದ್ರನನ್ನು ಕಾದುಕೊಂಡಿದ್ದುದರಿಂದ, ಆತನಿಗೆ ರಾಜ್ಯದ ಸುದ್ದಿಯಾಗಲಿ, ಮಹಾರಾಜನ ಸುದ್ದಿಯಾಗಲಿ, ಲಲಿತಸಿಂಹನ ಸುದ್ದಿಯೇ ಆಗಲಿ ಒಂದೂ ಗೋಚರಕ್ಕೆ ಬರಲೇ ಬಲ್ಲ.

ಕುಮುದಿನಿಯು ಗಂಡನ ವಿಯೋಗದಿಂದ ದುಃಖಗೊಂಡವಳಾಗಿ ನಿತ್ಯವೂ ಕಣ್ಣೀರಿನಿಂದ ಕೈ ತೊಳೆಯಲಾರಂಭಿಸಿದಳು. ಆಗಿಂದಾಗ ಯೋಗಕ್ಷೇಮವನ್ನು ತಿಳಿಸುತ್ತಿರುವೆನೆಂದು ಹೇಳಿ ಹೋದ ಲಲಿತನು ಮೂರು ತಿಂಗಳಾದರೂ ಆವ ಸಮಾಚಾರವನ್ನೂ ಕುಮುದಿನಿಗೆ ಕಳುಹಿಸಲಿಲ್ಲ. ಈ ಕಾರಣದಿಂದ ಕುಮುದಿನಿಯು ಕೊರಗಿ ಕೊರಗಿ ದಿನದಿನಕ್ಕೆ ಕೃಶೆಯಾಗುತ್ತಾ ಬಂದಳು.

ಕಮಲಿನಿಯು ನಾರನಾಡದ ಮಹಾರಾಣಿಯಾಗಿರುವಳು. ಕುಮುದಿನಿಯು ಸಮೀಪದಲ್ಲಿಯೇ ಇರುವುದಾದರೆ, ಆಕೆಯ ಪಕ್ಷವನ್ನು ಅನೇಕರು ಹಿಡಿಕೊಂಡು ತನ್ನ ಗೌರವಕ್ಕೆ ಎಲ್ಲಿ ಕುಂದನ್ನು ತಂದೊಡ್ಡುವರೋ ಎಂದು, ಕಮಲಿನಿಯು ತನ್ನ ತಂಗಿಯನ್ನು ದೂರದ ದಕ್ಷಿಣದಲ್ಲಿರುವ ಚಿತ್ತೂರು ದುರ್ಗಕ್ಕೆ ಕಳುಹಿಸಿ ಬಿಟ್ಟಳು. ಅಲ್ಲಿ ಕುಮುದಿನಿಯು ತನ್ನ ಏಕ ಮಾತ್ರ ಸಖಿಯಾದ ಮಾಲತಿಯೊಡನೆ ವಾಸಮಾಡಿಕೊಂಡಿರಲಾರಂಭಿಸಿದಳು. ಆವಳು ನಾರನಾಡದ ಮಹಾರಾಣಿಯಾಗಲು ಧರ್ಮ

ದೃಷ್ಟಿಯಿಂದ ಯೋಗ್ಯೆಯೆನಿಸಿರುವಳೋ, ಆಕೆಯು ದುರ್ದೈವಯೋಗ ದಿಂದ ಚಿತ್ತೂರು ದುರ್ಗದಲ್ಲಿ ಬಂದಿಯಂತೆ ಚಿರದುಃಖಿನಿಯಾಗಿ ಬಾಳು ತ್ತಿರುವಳು. ಆಕೆಯು ತನಗಾಗಿ ಎಂದೂ ವ್ಯಸನ ಪಡತಕ್ಕವಳಾಗಿರ ಲಿಲ್ಲ. ಆಕೆಯು ತನ್ನ ಗಂಡನನ್ನು ನೋಡುವುದಕ್ಕೆ ಇಲ್ಲದೇ ಹೋಯಿ ತಲ್ಲಾ ಎಂದು ಅಡಿಗಡಿಗೂ ದುಃಖದಿಂದ ಕೊರಗಿಕೊರಗಿ ಸಾಯುವಂತಾ ದಳು. ನಿರ್ಜನವಾದ ಆ ದುರ್ಗದಲ್ಲಿ ಕುಮುದಿನಿಯು ಸಮಯವಿದ್ದಾಗ ಳೆಲ್ಲಾ ಏಕಾಕಿನಿಯಾಗಿ ಕುಳಿತುಕೊಂಡು ತನ್ನ ಗಂಡನಿಗಾಗಿ ಹಂಬಲಿಸು ವಳು. ಆಕೆಯ ಪ್ರಿಯ ಸಖಿಯಾದ ಮಾಲತಿಯು ಆವಾಗಲೂ ಪಕ್ಕ ದಲ್ಲಿಯೇ ಇದ್ದುಕೊಂಡು ಸ್ವಾಮಿನಿಯ ದುಃಖೋಪಶಮನದ ಕಾರ್ಯ ದಲ್ಲಿ ನಿರತೆಯಾಗಿರುತ್ತಿದ್ದಳು.

ಹೀಗೆಯೇ ಕೆಲವು ದಿನಗಳು ಕಳೆದ ಬಳಿಕ ಕುಮುದಿನಿಯು ಒಂದು ಗಂಡುಗೂಸನ್ನು ಪ್ರಸವಿಸಿದಳು. ಜನ್ಮಿಸಿದ ಕೂಡಲೆ ಆವ ಮಗುವಿಗೆ ಜನ್ಮೋತ್ಸವವು ಅತಿ ವಿಜೃಂಭಣೆಯಿಂದ ನಡೆಯ ಬೇಕಾಗಿದ್ದಿ ತ್ತೋ, ಅಂತಹ ಮಗುವಿಗೆ ಈ ಚಿತ್ತೂರು ದುರ್ಗದಲ್ಲಿ ಆವ ಮಹೋತ್ಸ ವವೂ ಇಲ್ಲದೇ ಹೋಯಿತು. ದೈವಬಲವು ದುರ್ಬಲವಾಗಿರುವುದಾ ದರೆ, ಹೀಗೆಲ್ಲಾ ನಡೆಯುವುದು ಅದೊಂದತಿಶಯವೇನೂ ಅಲ್ಲ.

ಮಗುವು ಇತರರಿಗೆ ಬೇಡವಾದರೂ ಹೆತ್ತ ತಾಯಿಗೆ ಬೇಡವೇ ಹೋಗುವುದೇ? ಇತರರು ಆಚರಿಸುವ ಜನ್ಮೋತ್ಸವದಿಂದ ಮಗುವಿಗೆ ಬಂದ ಭಾಗ್ಯವೇನು? ಮಗುವಿಗೆ ಬೇಕಾದುದು ತಾಯಿಯ ಆದರವು. ಕುಮುದಿನಿಯು ತನ್ನ ಸದ್ಯೋಜಾತನಾದ ಮಗುವನ್ನು ಆದರದಿಂದ ಎತ್ತಿಕೊಂಡು ಅಡಿಗಡಿಗೂ ಅದನ್ನು ಚುಂಬಿಸುತ್ತಾ ಪತಿವಿಯೋಗದಿಂ ದುಂಟಾದ ತನ್ನ ಸಂಕಟವನ್ನು ಕೊಂಚ ಮಟ್ಟಿಗೆ ಕಳೆದುಕೊಳ್ಳಲಾರಂ ಭಿಸಿದಳು. ಆಕೆಗೆ ತನ್ನ ಮಗು ಹೊರತಾಗಿ ಮತ್ತಾವ ಕೆಲಸವೂ ಇಲ್ಲ, ಮತ್ತಾವ ಬಯಕೆಯೂ ಇಲ್ಲ, ಮತ್ತಾವ ಆಲೋಚನೆಯೂ ಇಲ್ಲ, ಮತ್ತಾವ ಪ್ರಪಂಚವೂ ಇಲ್ಲ. ಆಕೆಗೆ ಆ ಮಗುವೇ ಸರ್ವಸ್ವವೂ ಆಗಿದ್ದಿತು.

ಹೀಗಿದ್ದರೂ ಕುಮುದಿನಿಯು ಆಗಿಂದಾಗ ಏಕಾಂತದಲ್ಲಿ ಕುಳಿತುಕೊಂಡು ಕಂಬನಿಗರೆಯುತ್ತಿರುವಳು. ಮಾಲತಿಯೂ ಆಕೆಯ ಪಕ್ಕದಲ್ಲಿಯೇ ಕುಳಿತುಕೊಂಡು — ತಾಯಿ! ಹೋದಷ್ಟು ದಿನಗಳೂ ಹೀಗೆ ಅಳುತ್ತಾ ಕುಳಿತರೆ ಆಗುವುದೇನು? ನಿನ್ನ ಪತಿಯು ಇಷ್ಟರಲ್ಲಿಯೇ ಬರಬಹುದು. ಆತನು ಎಂದಾದರೊಂದು ದಿನ ಮಾರವಾಡದ ಮಹಾರಾಜನಾಗಿಯೇ ಆಗುವನು. ಬಳಿಕ ನಿನ್ನನ್ನು ಕರೆಯಿಸಿಕೊಳ್ಳುವನು. ಇದಕ್ಕಾಗಿ ಕೊರಗಬೇಕೇಕೆ? ನಿರರ್ಥಕವಾದ ಈ ಬಗೆಯ ಕೊರಗಣೆಯಿಂದ ನಿನ್ನ ದೇಹವು ಗಳಿತವಾಗುವುದಲ್ಲದೆ, ನಿನ್ನ ಮಗುವೂ ಕೃಶವಾಗಿ ಹೋಗುವುದು. ನೀನು ಖಂಡಿತವಾಗಿಯೂ ವ್ಯಸನ ಪಡಬೇಡ, ತಾಯಿ! ಎಂದು ಸಂತೈಸುವಳು. ಕುಮುದಿನಿಯು ಮಾಲತಿಯ ಮಾತನ್ನು ಕೇಳಿ ಕೊಂಚ ಮಟ್ಟಿಗೆ ಸಮಾಧಾನ ಪಡುವಳು. ಒಳಗೆ ದುಃಖವು ತುಂಬಿರಲು, ಮೇಲಿನ ಉಪಚಾರೋಕ್ತಿಗಳಿಂದ ಆಗುವುದೇನು? ಕುಮುದಿನಿಯು ತತ್ಕಾಲೋಪಶಾಂತಿಯಿಂದ ಕೊಂಚ ಕಾಲ ಸುಮ್ಮನಿದ್ದು ಬಳಿಕ, ಮತ್ತೆ ರೋದಿಸುವುದಕ್ಕೆ ಪ್ರಾರಂಭಮಾಡುವಳು. ಮಾಲತಿಯು ಮತ್ತೆ ಸಂತೈಸುವುದಕ್ಕೆ ಕುಳಿತುಕೊಳ್ಳುವಳು. ಈ ರೀತಿಯಾಗಿ ದಿನಗಳು ಕಳೆಯಲಾರಂಭಿಸಿದುವು.

ಕಮಲಿನಿಯ ಸುಖಕ್ಕೆ ತುದಿ ಮೊದಲಿರಲಿಲ್ಲ. ಇಂದಿಗೆ ಕಮಲಿನಿಯ ಆಸೆಯೆಲ್ಲವೂ ಪೂರ್ಣವಾಗಿರುವುದು. ಕಮಲಿನಿಯು ಮಾರವಾಡದ ಮಹಾರಾಣಿಯಾಗಿರುವುದರಿಂದ, ಆಕೆಗೆ ದಾಸದಾಸಿಯರೂ ಸಖಿಯರೂ ಅಪರಿಮಿತವಾಗಿರುತ್ತಿದ್ದರು. ಆಕೆಯ ಆನಂದಕ್ಕೆ ಪಾರವೇ ಇರಲಿಲ್ಲ, ಆಕೆಯ ಅಹಂಕಾರಕ್ಕೆ ಎಲ್ಲೆಯೇ ಇರಲಿಲ್ಲ, ಆಕೆಯ ಒಯ್ಯಾರವೋ, ಬಿಗುಮಾನವೋ ಹೇಳತೀರದು. ಇವೆಲ್ಲದರ ಮೇಲೂ ಆಕೆಯ ಶಕ್ತಿಯು ಅಪರಿಮಿತವಾಗಿದ್ದಿತು. ಏತಕ್ಕೆಂದರೆ ಮಹಾರಾಜಸಿಂಹನು ಆಕೆಯ ಕೈಯಲ್ಲಿ ಆಟದ ಬೊಂಬೆಯಂತಾಗಿಬಿಟ್ಟಿದ್ದನು. ಬಲು ಮಾತಿನಿಂದೇನು? ಕಮಲಿನಿಯೇ ಮಾರವಾಡದ ಮಹಾರಾಣಿಯಾಗಿ ಬಿಟ್ಟಿದ್ದಳು.

ಸಂತೋಷಸಾಗರದಲ್ಲಿ ಮುಳುಗಿದ್ದ ಕಮಲಿನಿಗೆ ಸ್ವಸುಖ ಹೊರತಾಗಿ ಮತ್ತಾವುದೂ ಬೇಕಾಗಿರಲಿಲ್ಲ. ಈ ಸುಖದ ಮಧ್ಯದಲ್ಲಿ ಆಕೆಗೆ ಕುಮುದಿನಿಯ ವಿಷಯವೇ ಜ್ಞಾಪಕಕ್ಕೆ ಬರುತ್ತಿರಲಿಲ್ಲ. ಆರಾದರೂ ಕೇಳಿದರೆ, ಕುಮುದಿನಿಯಾರೆಂದು ಮೇಲೆ ಕೆಳಗೆ ನೋಡುತ್ತಾ ಕುಳಿತು ಬಿಡುವಳು. ಇಂತಹ ಅಧಿಕಾರ ಮದ ಮತ್ತೆಯಾದ ಕಮಲಿನಿಯು ಅಂತಃಪುರದಲ್ಲಿ ಆವಾಗಲೂ ಆನಂದದ ಮೇಲೆ ಆನಂದವು ಉಕ್ಕಿ ಹರಿದು ಬರುತ್ತಿದ್ದಿತು. ಕಮಲಿನಿಯು ಈ ಸಂತೋಷದ ಮಧ್ಯದಲ್ಲಿ ದುಃಖವೆಂಬುದರ ಶಬ್ದಾರ್ಥವನ್ನೇ ಅರಿಯದವಳಾಗಿರುತ್ತಿದ್ದಳು.

ಮಹಾರಾಜಸಿಂಹನು ಮಾರವಾಡದ ಮಹಾರಾಣಾ ಸಾಹೇಬನಾಗಿರುವನು. ಮಹಾರಾಜಸಿಂಹನು ಮಾರವಾಡದ ಮಹಾರಾಣನಾಗುವುದಕ್ಕೆ ಮೊದಲು ದೇಶದಲ್ಲಿ ಆವ ಸುಖಶಾಂತಿಗಳು ನೆಲೆಗೊಂಡಿರುತಿದ್ದವೋ, ಆತನು ಮಹಾರಾಣನಾದ ಬಳಿಕ, ಅವೆಲ್ಲವೂ ಒಂದೇ ತಡವೆಗೆ ಮಾಯವಾಗಿ ಬಿಟ್ಟುವು. ಮಹಾರಾಜನು ಪ್ರಜಾರಂಜನೆಯಿಂದ ರಾಜ್ಯಭಾರ ಮಾಡುವುದನ್ನು ಬಿಟ್ಟು, ಪ್ರಬಲವಾದ ಪರಾಕ್ರಮದಿಂದ ರಾಜ್ಯಭಾರ ಮಾಡತೊಡಗಿದನು. ಮಹಾರಾಜನು ಪ್ರಾರಂಭದಲ್ಲಿ ಪ್ರಜೆಗಳಿಗೆ ಆವ ಭರವಸೆಯನ್ನಿತ್ತು ಸಿಂಹಾಸನವನ್ನೇರಿದನೋ, ಈಗ ಅದೆಲ್ಲವೂ ನಾಮಾವಶೇಷವಾಗಿ ಹೋಗಿರುವುದು. ಎಲ್ಲೆಲ್ಲಿ ನೋಡಿದರೂ ಪ್ರಜಾಪೀಡನೆಯೇ ರಾಜ್ಯಭಾರದ ಮೂಲ ಮಂತ್ರವಾಗಿರುವುದು. ರಾಜನು ಆರೊಡನೆ ಮಾತನಾಡುವಾಗಲೂ ಹುಬ್ಬುಗಂಟಿಕ್ಕಿ ಸಿಡಿಮಿಡಿಗುಟ್ಟುತ್ತಿರುವನು. ರಾಜನಿಗೆ ಪ್ರತಿಯಾಗಿ ಮಾತನಾಡಿದವನು ಆನೆಯ ಕಾಲಿನಿಂದ ತುಳಿಸಲ್ಪಡುವನು. ಕಂದಾಯ ಕೊಡದಾತನು ಕಲ್ಲ ಗಾಣದಲ್ಲಿ ಅರೆಯಿಸಲ್ಪಡುವನು. ರಾಜದ್ರೋಹದ ಅಪರಾಧದಿಂದ ಅಪರಾಧಿಯಾದವನು ವಿಚಾರಣೆಯಿಲ್ಲದೆಯೇ ಗಲ್ಲಿಗೇರಿಸಲ್ಪಡುವನು. ಈ ರೀತಿಯಾದ ಅತ್ಯಾಚಾರ, ಅನಾಚಾರ, ಅವಿಚಾರಗಳಿಂದ, ಪ್ರಜೆಗಳಿಗೆ ರಾಜನಲ್ಲಿ ಮೊದಲಿದ್ದ ವಿಶ್ವಾಸವು ದಿನದಿನಕ್ಕೆ ಕಡಮೆಯಾಗುತ್ತಾ ಬರಲಾರಂಭವಾಯಿತು.

ಮಹಾರಾಜಸಿಂಹನ ಹೃದಯದಲ್ಲಿ ಆವಾಗಲೂ ಶೋಕಾಗ್ನಿಯು ದಗದಗನೆ ಉರಿಯುತ್ತಿರುವುದು. ಅದರ ಯಾತನೆಯಿಂದ ಅವನ ಹೃದಯವು ಸುಟ್ಟು ಬೂದಿಯಾಗುತ್ತಿರುವುದು. ಆತನು ಈ ದುಃಖವನ್ನು ಆರ ಮುಂದೂ ಹೇಳಿಕೊಳ್ಳಲಾರದವನಾಗಿದ್ದನು. ಈ ಯಾತನೆಯಿಂದ ಗಟ್ಟಿಯಾಗಿ ಸಂಕಟಪಡುವುದಕ್ಕೆ ಕೂಡ ಅವನಿಗೆ ಧೈರ್ಯ ಸಾಲದು ದಾಗಿದ್ದಿತು. ಇದಕ್ಕಾಗಿಯೇ ಆತನು ಆರೊಡನೆಯೂ ಸೇರದೆ, ಏಕಾಂತವಾಗಿರುವಿಕೆಯನ್ನು ಬಯಸುತ್ತಿದ್ದನು. ಏಕಾಂತದಲ್ಲಿ ದುಃಖವು ಹೆಚ್ಚುವುದೇ ಹೊರತು ಕಡಮೆಯಾಗುವ ಸಂಭವವಿರಲಾರದು. ಮಹಾರಾಜನು ಏಕಾಂತವಾಗಿ ವಾಸಮಾಡಿದಷ್ಟೂ ಯಾತನೆಯು ಹೆಚ್ಚುತ್ತಾ ಬರಲು, ಆತನು ಈ ಯಾತನೆಯ ಯಾತನೆಯನ್ನು ತಡೆಯಲಾರದವನಾಗಿ ಕಾಲಕ್ರಮದಿಂದ ಸುರಾದೇವಿಯ ಆರಾಧನೆಗೆ ಕುಳಿತನು. ಸುರಾದೇವಿಯ ಇದಿರಿನಲ್ಲಿ ವಾರನಾರಿಯರ ನೃತ್ಯವೂ ಗೀತವೂ ಪ್ರಾರಂಭವಾಯಿತು. ಈ ನೃತ್ಯಗೀತಗಳಿಗಾಗಿ ವಾರಾಂಗನೆಯರು ದೇಶವಿದೇಶಗಳಿಂದಲೂ ಕರೆಯಿಸಲ್ಪಡುತ್ತಿದ್ದರು.

ನಿತ್ಯ ಶೋಕಾಕುಲನಾದ ಮಹಾರಾಜನು ರಾಜಕಾರ್ಯನಿರ್ವಾಹದಲ್ಲಿ ಅಷ್ಟಾಗಿ ಆಸಕ್ತಿಯಿಲ್ಲದವನಾಗಿ ತನ್ನ ವಿಲಾಸದಲ್ಲಿಯೇ ಕಾಲ ಕಳೆಯಲಾರಂಭಿಸಿದನು. ಬಕ ಪಕ್ಷಿಗಳಂತೆ ಕಾದುಕೊಂಡಿದ್ದ ನೂತನ ರಾಜ್ಯಾಧಿಕಾರಿಗಳು ರಾಜನಲ್ಲಿನ ಈ ಲೋಪದೋಷಗಳನ್ನು ಕಂಡುಕೊಂಡು, ಸರಕಾರದ ಹಣವನ್ನು ಕಂಡ ಹಾಗೆಯೂ, ಕಾಣದ ಹಾಗೆಯೂ ನುಂಗುವುದಕ್ಕೆ ಮೊದಲು ಮಾಡಿದರು. ವೃದ್ಧನಾದ ಮಂತ್ರಿಯು ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟುಕೊಂಡು ಇನ್ನು ಅಧಿಕಾರದಲ್ಲಿರುವುದರಿಂದ ತೊಂದರೆಯೇ ಉಂಟೆಂದು ತಿಳಿದು ತನ್ನ ಕೆಲಸದಿಂದ ನಿವೃತ್ತನಾದನು. ಯೋಗ್ಯರಾದ ಪುರಾತನಾಧಿಕಾರಿಗಳೆಲ್ಲರೂ ಮಂತ್ರಿಯು ತೋರಿದ ಮಾರ್ಗವನ್ನೇ ಅನುಸರಿಸಿಬಿಟ್ಟರು. ಅವರ ಸ್ಥಾನಗಳಲ್ಲಿ ನೀಚರೂ, ಅಜ್ಞರೂ, ಅಹಂಕಾರಿಗಳೂ, ಮದೋನ್ಮತ್ತರೂ, ಪರಪೀಡೆಗಳ್ಳರೂ, ಲಂಚಕೋರರೂ, ವಿಲಾಸಿಗಳೂ ಇವರೇ ಆದಿಯಾದ ಅಸಭ್ಯ ಜನರು ನಿಯಮಿಸಲ್ಪಟ್ಟರು. ಅವಿವೇಕಿಗಳು ರಾಜ್ಯದಲ್ಲಿ

ಹೆಚ್ಚುತ್ತಾ ಬಂದ ಹಾಗೆಲ್ಲಾ, ರಾಜ್ಯದ ಹಣವು ನೀರಿನಂತೆ ವೆಚ್ಚವಾಗಿ ಕೋಶವು ಬರಿದಾಗುತ್ತಾ ಬಂದಿತು. ಹೆಚ್ಚಿನ ವೆಚ್ಚಕ್ಕೆ ಬಂಡಾರದಲ್ಲಿ ಹಣವಿಲ್ಲದೇ ಹೋಗಲು, ಅಧಿಕಾರಿಗಳು ತೆರತೆರನಾದ ಕಂದಾಯ ತೆರಿಗೆ ಮುಂತಾದುವುಗಳಿಂದ ಪ್ರಜೆಗಳ ರಕ್ತವನ್ನು ಹೀರುವುದಕ್ಕೆ ಮೊದಲು ಮಾಡಿದರು. ರಾಜಾಜ್ಞೆಯು ಬಲವತ್ತರವಾಗಿರುವಲ್ಲಿ, ಕುರಿಯಂತಿರುವ ಪ್ರಜೆಗಳು ಏನ ಮಾಡುವುದಕ್ಕಾದೀತು?

ಪ್ರಜೆಗಳಲ್ಲಿ ಕೆಲವರು ಅನನ್ಯ ಗತಿಕರಾಗಿ ಏಕಾಂತದಲ್ಲಿ ಕುಳಿತು ಕೊಂಡು ಕಂಬನಿಗರೆಯಲಾರಂಭಿಸಿದರು; ಕೆಲವರು ಮಹಾರಾಜನ ವಿಷಯದಲ್ಲಿ ಕನಿಕರ ಪಟ್ಟರು; ಕೆಲವರು ಮಹಾರಾಜನನ್ನು ಆಡಿ ಕೊಂಡರು; ಕೆಲವರು ಮಹಾರಾಜಸಿಂಹನನ್ನು ಸಿಂಹಾಸನದ ಮೇಲೆ ಹತ್ತಿಸಿದುದೇ ತಪ್ಪಾಯಿತೆಂದರು; ಕೆಲವರು ಲಲಿತಸಿಂಹನನ್ನೇ ಬರ ಮಾಡಿಕೊಳ್ಳಬೇಕೆಂದರು; ಕೆಲವರು ಮಹಾರಾಜಸಿಂಹನಿಗೆ ಬರಬಾರದ ರೋಗ ಬರಲೆಂದರು; ಕೆಲವರು ಆತನ ತಲೆಯ ಮೇಲೆ ಪಿಡುಗು ಬೀಳ ಲೆಂದರು; ಮತ್ತೆ ಕೆಲವರು ಇನ್ನೇನೋ ಮಾತನಾಡಿಕೊಂಡರು. ಆದರೆ ಪ್ರಬಲ ಪರಾಕ್ರಮಶಾಲಿಯಾದ ಮಹಾರಾಜಸಿಂಹನಿಗೆ ಪ್ರತಿಯಾಗಿ ಕೆಲಸ ಮಾಡಲು ಆರಿಗೂ ಸಾಹಸವೆಂಬುದೇ ಇರಲಿಲ್ಲ.

ಸುರಾಪಾನ ಮಾಡಿ ವಿಲಾಸ ಸಾಗರದಲ್ಲಿ ತೇಲಿ ಮುಳುಗುತ್ತಿದ್ದ ರೂ, ಮಹಾರಾಜಸಿಂಹನಿಗೆ ಮನಶ್ಯಾಂತಿಯೆಂಬುದೇ ಉಂಟಾಗಲಿಲ್ಲ. ಏತಕೆಂದರೆ—ವೃದ್ಧ ಮಹಾರಾಣನು ಮಹಾರಾಜಸಿಂಹನ ಇದಿರಿನಲ್ಲಿ ಬಂದು ನಿಂತು, ರಕ್ತವು ದರದರನೆ ಸುರಿಯುತ್ತಿರುವ ತನ್ನ ಎದೆಯನು ಬಿಚ್ಚಿ ತೋರಿ ಏನೇನೋ ಮಾತನಾಡುತ್ತಿರುವಂತೆ ಆದೊಂದು ಭಯಂಕರ ದೃಶ್ಯವು ಹಗಲಿರುಳೆನ್ನದೇ ಆತನ ಕಣ್ಣಿನ ಮುಂದೆ ಕಟ್ಟಿದಂತಾಗು ತ್ತಿದ್ದಿತು. ಇಂತಹ ಸಮಯಗಳಲ್ಲಿ ಕಮಲಿನಿಯ ರಾಕ್ಷಸೀ ಶಕ್ತಿಯು ಆತನಿಗೆ ಬೆಂಬಲವಾಗಿ ನಿಲ್ಲದಿದ್ದರೆ, ಮಹಾರಾಜಸಿಂಹನು ಹುಚ್ಚನಾಗಿ ಎಷ್ಟೋ ದಿವಸಗಳಾಗಿರಬೇಕಾಗಿದ್ದಿತು.

ವೃದ್ಧ ಮಹಾರಾಣನು ಅಡಿಗಡಿಗೆ ಕಾಣಿಸಿಕೊಳ್ಳುವುದರ ಜತೆಗೆ, ಆತನು ದಕ್ಷಿಣಾಪಥದಲ್ಲಿ ಮಲಗಿದ್ದಾಗ ಆವ ಸ್ವಪ್ನವನ್ನು ನೋಡಿದ್ದನೋ ಅದೂ ಆಗಿಂದಾಗ ಇದಿರಿನಲ್ಲಿ ಬಂದು ನಿಂತಂತಾಗುತಿದ್ದಿತು. ಅಲ್ಲದೆಯೂ ಹುಚ್ಚಿಯು ಆವಾಗಲೂ ಕಠಾರಿಯನ್ನು ಹಿಡಿದುಕೊಂಡು ಇದಿರಿನಲ್ಲಿ ನಲಿದಾಡುತ್ತಿರುವಂತೆಯೂ, ಮೃತ್ಯುದೇವತೆಯು ಹೆಗಲೇರುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿರುವಂತೆಯೂ ಮಹಾರಾಜಸಿಂಹನು ಭಾವಿಸ ತೊಡಗಿದನು.

ಇದಕ್ಕೆ ಫಲವಾಗಿ, ಮಹಾರಾಜನ ಕಟ್ಟಪ್ಪಣೆಯಿಂದ ದೇಶದ ಹುಚ್ಚರೆಲ್ಲರೂ ಸೆರೆಮನೆಯಲ್ಲಿ ಬಂಧಿಸಲ್ಪಟ್ಟಿರುವರು. ಮಹಾರಾಜ ಸಿಂಹನು, ಭಿಲ್ಲರ ಕಾತ್ಯಾಯನಿಯೆಂದು ಎಷ್ಟೋ ಹುಡುಗಿಯರನ್ನು ಕೊಲೆ ಮಾಡಿಸಿದನು. ಇವರ ರಕ್ತದಿಂದ ಮಾರವಾಡದ ಭೂಭಾಗವು ನನೆದು ಹೋಯಿತು. ಇಷ್ಟಾದರೂ ಭಿಲ್ಲರ ಕಾತ್ಯಾಯನಿಯು ಸಾಯ ಲಿಲ್ಲ. ಆಕೆಯು ಆರ ಕೈಗೂ ಸಿಕ್ಕಲಿಲ್ಲ. ಆಕೆಯನ್ನು ಆರೂ ಮತ್ತೆ ನೋಡಲೂ ಇಲ್ಲ.

ಭಿಲ್ಲರ ಕಾತ್ಯಾಯನಿಗಾಗಿ ಮಹಾರಾಜಸಿಂಹನು ಭಿಲ್ಲರೊಡನೆ ಕಾಲ ಕೆರೆದು ಕಲಹಕ್ಕೆ ಸಿದ್ಧನಾದನು. ಜುಮೇಲಿಯನನ್ನು ಹಿಡಿದು ಕೊಲ್ಲು ವುದಕ್ಕಾಗಿ, ಮಹಾರಾಜನು ಭಿಲ್ಲ ರಾಜ್ಯಕ್ಕೆ ಅನೇಕ ಸೈನ್ಯವನ್ನು ಕಳು ಹಿಸಿ ಭಿಲ್ಲರನ್ನು ಹಿಂಸೆಗೆ ಈಡು ಮಾಡಿದನು. ಇದನ್ನು ಕಂಡು ಭಿಲ್ಲ ರೆಲ್ಲರೂ ಮಹಾರಾಜಸಿಂಹನಿಗೆ ಪರಮಶತ್ರುಗಳಾಗಿ ಪರಿಣಮಿಸಿದರು.

ಇಷ್ಟೆಲ್ಲಾ ಮಾಡಿದರೂ, ಮಹಾರಾಜಸಿಂಹನ ಹೃದಯವು ಶಾಂತ ವಾಗಲೇ ಇಲ್ಲ. ಬಳಿಕ ಆತನು ದೇವೀ ಮಂದಿರದಲ್ಲಿದ್ದ ಆ ಸನ್ಯಾಸಿ ಯನ್ನು ಮತ್ತೆ ಕಾಣುವುದಕ್ಕಾಗಿ ಮಹಾ ಪ್ರಯತ್ನಮಾಡ ತೊಡಗಿದನು. ಇದಕ್ಕಾಗಿ ತನ್ನ ದೇಶದಲ್ಲಿದ್ದ ಸನ್ಯಾಸಿಗಳೆಲ್ಲರನ್ನೂ ಹಿಡಿದು ತಂದು ಸೆರೆ ಮನೆಯಲ್ಲಿಡುವಂತೆ ಪ್ರಬಲವಾದ ಆಜ್ಞೆಯನ್ನು ಎಲ್ಲೆಲ್ಲಿಯೂ ಪ್ರಚಾರ ಪಡಿಸಿದನು. ಎಷ್ಟೋ ಜನ ಸನ್ಯಾಸಿಗಳು ರಾಜಸೇವಕರ ಕೈಯಲ್ಲಿ ಸಿಲುಕಿಕೊಂಡು ಪಡಬಾರದ ಸಂಕಟಗಳನ್ನು ಅನುಭವಿಸಿದರು. ಎಷ್ಟೋ

ಜನರು ಸೆರೆಮನೆಯಲ್ಲಿ ನಿರ್ಬಂಧಿಸಲ್ಪಟ್ಟು ಹೊಟ್ಟೆಗಿಲ್ಲದೇ ಸಾಯುವ ದುರ್ದಶೆಗೆ ಈಡುಮಾಡಲ್ಪಟ್ಟರು. ಎಷ್ಟೋ ಜನ ಸನ್ಯಾಸಿಗಳು ಅವಿವೇಕಿಗಳಾದ ರಾಜಸೇವಕರಿಂದ ಪೆಟ್ಟುಗಳನ್ನು ತಿಂದು ರೋಗಪೀಡಿತರಾಗಿ ಮಲಗಿದರು. ಕೆಲವು ಸನ್ಯಾಸಿಗಳು ಸೆರೆಮನೆಯ ಗೋಡೆಯ ಮೇಲೆ ಈ ಶ್ಲೋಕವನ್ನು ಬರೆದರು.

ಗಜೇ ಕಡಂಗರೀಯೇತು । ಜಾರೇ ರಾಜನಿ ವಾ ಪುನಃ ॥
ಪಾಪಕೃತ್ಸುಚ ವಿದ್ವತ್ಸು । ನಿಯಂತಾ ಜಂತು ರಕ್ಷಕಃ ॥

ತಾತ್ಪರ್ಯವೇನೆಂದರೆ—ಆನೆಯು ಹೊಲ ಗದ್ದೆಗಳನ್ನು ನುಗ್ಗಿದರೂ, ರಾಜನು ಪರದಾರಲಂಪಟನಾದರೂ, ವಿದ್ಯಾವಂತರು ಪಾಪ ಕೆಲಸದಲ್ಲಿ ನಿರತರಾದರೂ, ಇವರನ್ನು ಅಡ್ಡಗಿಸುವವರಾರಿರುವರು?

ಸನ್ಯಾಸಿಗಳು ಮೇಲಿಂದ ಮೇಲೆ ಸೆರೆಮನೆಯಲ್ಲಿ ಬಂದು ತುಂಬುತ್ತಿರುವರು. ಆರಿಗೂ ಆವ ಕಾರಣವೂ ಗೊತ್ತಿಲ್ಲ. ಬಹು ಕಾಲವಾದರೂ ಆರಿಗೂ ರಾಜದರ್ಶನವೆಂಬುದೇ ಆಗಲಿಲ್ಲ. ಪ್ರಜೆಗಳು ಸನ್ಯಾಸಿಗಳಿಗುಂಟಾದ ಈ ದುರ್ದಶೆಯನ್ನು ನೋಡಿ, ರಾಜನ ವಿಷಯದಲ್ಲಿ ತೆರತೆರನಾಗಿ ಅಪರಾಗವನ್ನು ತೋರ್ಪಡಿಸಲಾರಂಭಿಸಿದರು. ಧರ್ಮಪರಾಯಣರಿಗೂ, ಬಡಬ್ರಾಹ್ಮಣರಿಗೂ, ಸನ್ಯಾಸಿಗಳಿಗೂ ಈ ದುರ್ದಶೆಯುಂಟಾದುದರಿಂದ ರಾಜ್ಯಕ್ಷೋಭೆಯಾಗುವುದೆಂದು ಮಾರವಾಡದವರೆಲ್ಲರೂ ತಲ್ಲಣಿಸಿ ಹೋದರು. ಆದರೆ ಮಾಡುವುದೇನು? ಲಲಿತಸಿಂಹನ ಸುಳಿವೇ ಆರಿಗೂ ಗೊತ್ತಾಗದೇ ಹೋಯಿತು.

---

## ನಲವತ್ತೊಂದನೆಯ ವಿಲಾಸ

ಹೀಗಿರಲೊಂದು ದಿನ ಕಾರಾಧಿಕಾರಿಯು ಸಮಯವರಿತು ಮಹಾರಾಣನನ್ನು ಕಂಡುಕೊಂಡು—ಮಹಾಸ್ವಾಮಿ! ನಮ್ಮ ದೇಶದ ಸನ್ಯಾಸಿಗಳೆಲ್ಲರೂ ಬಹುಕಾಲದಿಂದಲೂ ಸೆರೆಮನೆಯಲ್ಲಿ ಸಿಕ್ಕಿಬಿದ್ದು ಉಪವಾಸ ವ್ರತಾಚರಣೆಯಂದ ಸಾಯುತ್ತಿರುವರು. ಈ ಘೋರ ದೃಶ್ಯವನ್ನು ನೋಡಲು ಆರಿಂದಲೂ ಸಾಧ್ಯವಲ್ಲವು. ಮಹಾಸ್ವಾಮಿಯವರು ಒಂದು

ಸಲ ಅಲ್ಲಿಯ ವರೆಗೂ ಪಾಪ ಬೆಳೆಯಿಸಿ ಸನ್ನಿಧಾನಕ್ಕೆ ಬೇಕಾದವರಾರೆಂಬುದನ್ನು ಕಣ್ಣಾರೆ ನೋಡಿಕೊಂಡು ಬರುವುದಾದರೆ, ದೇಶಕ್ಕೆಲ್ಲಾ ಕ್ಷೇಮವುಂಟಾದೀತು. ಇದರ ಮೇಲೆ ಸನ್ನಿಧಾನದ ಚಿತ್ತವಿದ್ದಂತಾಗಲಿ, ಎಂದು ಭಯಭಕ್ತಿಗಳಿಂದ ಅರಿಕೆ ಮಾಡಿಕೊಂಡನು.

ಆವಾಗಲೂ ವಿಲಾಸ ಸಾಗರದಲ್ಲಿಯೇ ಮುಳುಗಿರತಕ್ಕ ಮಹಾರಾಜನಿಗೆ ಸನ್ಯಾಸಿಗಳನ್ನು ನೋಡುವುದಕ್ಕೆ ಅವಕಾಶವೆಲ್ಲಿಯದು? ಆತನಿಗೆ ಸನ್ಯಾಸಿಗಳ ವಿಷಯವೇ ಮರೆತುಹೋಗಿದ್ದಿತು. ಕಾರಾಧಿಕಾರಿಯು ಅರಿಕೆ ಮಾಡಿದ ಬಳಿಕ, ಆತನಿಗೆ ತನ್ನ ಆಜ್ಞೆಯು ಜ್ಞಾಪಕಕ್ಕೆ ಬಂದು ಸನ್ಯಾಸಿಗಳನ್ನು ನೋಡುವುದಕ್ಕೆ ಸೆರೆಮನೆಗೆ ತೆರಳಿದನು.

ಸೆರೆಮನೆಯಲ್ಲಿ ನೂರಾರು ಸನ್ಯಾಸಿಗಳು ಬಂದಿಗಳಾಗಿರುವರು. ಮಹಾರಾಜಸಿಂಹನು ಸನ್ಯಾಸಿಗಳಲ್ಲಿ ಒಬ್ಬೊಬ್ಬನನ್ನೂ ನೋಡಿಕೊಂಡು ಬರುತ್ತಿರುವಾಗ, ತಟ್ಟನೆ ಒಬ್ಬ ಸನ್ಯಾಸಿಯು ರಾಜನ ಕಣ್ಣಿಗೆ ಗೋಚರಿಸಿದನು. ರಾಜನು ಆ ಕೂಡಲೆ ಕಾರಾಧಿಕಾರಿಯನ್ನು ಕುರಿತು—ಈ ಸನ್ಯಾಸಿಯನ್ನು ಹೊರತಾಗಿ ಉಳಿದವರೆಲ್ಲರನ್ನೂ ಬಿಟ್ಟುಬಿಡು. ನನಗೆ ಬೇಕಾಗಿದ್ದ ಸನ್ಯಾಸಿಯು ಸಿಕ್ಕಿರುವನು. ಇಂದಿನಿಂದ ಮತ್ತಾವ ಸನ್ಯಾಸಿಯನ್ನೂ ಹಿಡಿದು ನಿರ್ಬಂಧಿಸಬೇಕಾದುದಿಲ್ಲ, ಎಂದು ಅಪ್ಪಣೆ ಮಾಡಿದನು.

ಸನ್ಯಾಸಿಗಳೆಲ್ಲರೂ ಹೊರಡುವುದಕ್ಕೆ ಸಿದ್ಧರಾದರು. ಮಹಾರಾಜನು ಆರನ್ನು ಬಿಡಕೂಡದೆಂದು ಹೇಳಿದ್ದನೋ, ಆ ಸನ್ಯಾಸಿಯೂ ಸಿದ್ಧನಾಗಲು, ಇದನ್ನು ಕಂಡ ಕಾರಾಧಿಕಾರಿಯು ಸನ್ಯಾಸಿಯನ್ನು ಕುರಿತು—ಸ್ವಾಮಿ! ತಾವು ಮಟ್ಟಿಗೆ ಹೋಗ ಕೂಡದು, ಎಂದು ನಿರ್ಬಂಧ ಪಡಿಸಿದನು.

ಸನ್ಯಾಸಿ—ಅದೇಕಯ್ಯಾ?

ಕಾರಾಧಿಕಾರಿ—ಮಹಾರಾಜರು ತಮ್ಮನ್ನು ಇಲ್ಲಿಯೇ ಇಟ್ಟುಕೊಂಡಿರಬೇಕೆಂದು ಅಪ್ಪಣೆಮಾಡಿರುವರು.

ಸನ್ಯಾಸಿ—ನಾನು ನೃತ್ಯಗೀತವಿಶಾರದೆಯಾದ ವಾರಸ್ತ್ರೀಯಲ್ಲ ವಲ್ಲಾ !

ಕಾರಾ—ತಾವು ನಾಲಗೆ ಹಿಡಿದು ಮಾತನಾಡೋಣವಾಗಲಿ, ತಾವು ಸನ್ಯಾಸಿಗಳಾದ ಮಾತ್ರಕ್ಕೆ, ನಮ್ಮ ಪ್ರಭುಗಳು ಇದನ್ನು ಕೇಳಿದರೆ ನಿಮ್ಮನ್ನು ಸುಮ್ಮನೇ ಬಿಡತಕ್ಕವರಲ್ಲ. ಎಚ್ಚರಿಕೆ !

ಸನ್ಯಾಸಿ—ಹಾಗಾದರೆ ಸುಮ್ಮನೆಯೇ ಇರುವೆನು.

ಸನ್ಯಾಸಿಗಳೆಲ್ಲರೂ ಹೊರಟುಹೋದ ಬಳಿಕ, ಮಹಾರಾಣನು ಆ ಸನ್ಯಾಸಿಯನ್ನು ಏಕಾಂತದಲ್ಲಿ ನೋಡಬೇಕೆಂದನು. ಕೂಡಲೆಯೇ ಎಲ್ಲರೂ ದೂರ ಸರಿದರು. ತರುವಾಯ ರಾಜನು ಸನ್ಯಾಸಿಯ ಬಳಿಗೆ ಬಂದು— ಸ್ವಾಮಿಾ ! ನನ್ನ ಪರಿಚಯವುಂಟೇ ? ಎಂದು ಪ್ರಶ್ನೆ ಮಾಡಿದನು.

ಸನ್ಯಾಸಿ—ಪರಿಚಯವುಂಟು ; ತಾವೇ ಮಾರವಾಡದ ಮಹಾ ರಾಣರು.

ರಾಜಾ—ತಮ್ಮ ಭವಿಷ್ಯದ್ವಾಣಿಯು ಇಂದಿಗೆ ಫಲಿಸಿತು.

ಸನ್ಯಾಸಿ—ಫಲಿಸಿಯೇ ತೀರಬೇಕು. ಜ್ಯೋತಿಶ್ಶಾಸ್ತ್ರವು ಎಂದಿಗೂ ಸುಳ್ಳಾಗಲಿಕ್ಕಿಲ್ಲ.

ರಾಜಾ—ತಾವು ಎಷ್ಟು ದಿನಗಳಿಂದ ಇಲ್ಲಿರುವಿರಿ ?

ಸನ್ಯಾಸಿ—ತಮ್ಮ ಸೇವಕರು ನನ್ನನ್ನು ಎಂದು ಹಿಡಿದರೋ, ಅಂದಿನಿಂದಲೂ ಇಲ್ಲಿಯೇ ಇರುವೆನು.

ರಾಜಾ—ಇನ್ನು ತಾವು ಸೆರೆಮನೆಯಲ್ಲಿರಬೇಕಾದುದಿಲ್ಲ. ಇಂದಿನಿಂದ ತಾವು ನನ್ನ ಅರಮನೆಯಲ್ಲಿಯೇ ವಾಸಮಾಡಿಕೊಂಡಿರಬಹುದು. ತಮ್ಮನ್ನು ನಾನು ಆದರದಿಂದ ಕಾಪಿಡುವೆನು.

ಸನ್ಯಾಸಿ—ಇದು ಸನ್ನಿಧಾನದ ಅನುಗ್ರಹ.

ರಾಜಾ—ನಾನು ತಮ್ಮೊಡನೆ ವಿಶೇಷವಾಗಿ ಮಾತನಾಡಿ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂದಿರುವೆನು.

ಸನ್ಯಾಸಿ—ಅಪ್ಪಣೆಯಾಗಲಿ ; ತಿಳಿದ ಮಟ್ಟಿಗೆ ಅರಿಕೆ ಮಾಡಿಕೊಳ್ಳುವೆನು.

ರಾಜಾ—ತಮ್ಮ ಭವಿಷ್ಯದ್ವಾಣಿ ಫಲಿಸಿತು.

ಸನ್ಯಾಸಿ—ಫಲಿಸಿತೆಂದು ತೋರುತ್ತಿರುವುದು.

ರಾಜಾ—ಆ ದೇವತಾ ಮಂದಿರದಲ್ಲಿ ಹುಡುಗಿಯೊಬ್ಬಳನ್ನು ನಾನು ನೋಡಿದುದುಂಟು.

ಸನ್ಯಾಸಿ—ಭಿಲ್ಲರ ಕಾತ್ಯಾಯನಿಯನ್ನು ತಾವು ನೋಡಿರಬೇಕು.

ರಾಜಾ—ಅಹುದು ; ಭಿಲ್ಲರ ಕಾತ್ಯಾಯನಿ. ಆಕೆಯು ತಮಗೇನಾಗಬೇಕು ?

ಸನ್ಯಾಸಿ—ಆಕೆಯು ನನ್ನ ಪಾಲಿತ ಕನ್ಯೆ.

ರಾಜಾ—ಆಕೆಯೂ ಭವಿಷ್ಯದ್ವಾಣಿಯನ್ನು ನುಡಿದಿದ್ದಳು. ಅದರ ಫಲಾಫಲ ವಿಚಾರವೇನು ?

ಸನ್ಯಾಸಿ—ಆಕೆ ಹುಚ್ಚಿ.

ರಾಜಾ—ತಾವು ನನಗಾಗಿ ಕೊಂಚ ಮಟ್ಟಿಗೆ ಶ್ರಮವನ್ನು ತೆಗೆದುಕೊಳ್ಳಬೇಕಾಗುವುದು. ತಾವು ಮೊದಲು ಗುಣಿಸಿ ಹೇಳೋಣವಾಯಿತು. ಅದರಂತೆಯೇ ನಾನು ಮಹಾರಾಣನಾದೆನು. ಈಗಲೂ ಗುಣಿಸಿ ತಿಳಿಸೋಣವಾಗಲಿ. ನನಗೆ ಮುಂದೆ ಆವ ರೀತಿಯಲ್ಲಿ ಮರಣವುಂಟಾಗುವುದು ?

ಸನ್ಯಾಸಿ—ನಾವು ಮೃತ್ಯುವನ್ನು ತಿಳಿಸಲಾರೆವು.

ರಾಜಾ—ತಾವು ಗುಣಿಸಿ ತಿಳಿಸಲೇ ಬೇಕು.

ಸನ್ಯಾಸಿ—ನಾವು ತಿಳಿಸದೇ ಹೋದರೆ?

ರಾಜಾ—ತಾವು ಸಾಯುವ ವರೆಗೂ ಈ ಸೆರೆಮನೆಯಲ್ಲಿಯೇ ಬಿದ್ದಿರ ಬೇಕಾಗುವುದು.

ಸನ್ಯಾಸಿ—ಹಾಗಾದರೆ ಕೊಂಚ ಹೊತ್ತು ನಿರೀಕ್ಷಿಸೋಣ ವಾಗಲಿ; ನಾನು ಗುಣಿಸಿ ತಿಳಿಯಪಡಿಸಿಕೊಳ್ಳುವೆನು.

ಸನ್ಯಾಸಿಯು ಹೀಗೆ ಹೇಳಿ ಬಲು ಹೊತ್ತು ನೆಲದ ಮೇಲೆ ಲೆಕ್ಕ ಗಳನ್ನು ಹಾಕಿ ಗುಣಿಸಿದ ಬಳಿಕ—ಮಹಾರಾಜ! ಸ್ತ್ರೀಯಿಂದ ತಮಗೆ ಮೃತ್ಯುವಿಲ್ಲ, ಎಂದನು.

ರಾಜಾ—ಆ ಮೇಲೆ?

ಸನ್ಯಾಸಿ—ಪುರುಷನಿಂದಲೂ ತಮಗೆ ಮರಣವಿಲ್ಲ.

ರಾಜಾ—ಹಾಗಾದರೆ ನಾನು ರೋಗದಿಂದ ಸಾಯುವೆನೇ?

ಸನ್ಯಾಸಿ—ಆದರೂ ಆಗಬಹುದು; ಆದರೆ ತಾವು ರಣಾಂಗಣ ದಲ್ಲಿಯೇ ಮಡಿಯುವಿರಿ.

ರಾಜಾ—ಹಾಗಾದರೆ ನನಗೆ ಭಯಕ್ಕೆ ಕಾರಣವೇನೂ ಇಲ್ಲ ವಷ್ಟೇ?

ಸನ್ಯಾಸಿ—ಕಾರಣವೇನೂ ಇಲ್ಲ.

ರಾಜಾ—ಎಷ್ಟು ದಿನಗಳ ಮೇಲೆ ನನಗೆ ಮರಣವು ಸಂಭವಿಸ ಬಹುದು?

ಸನ್ಯಾಸಿ—ತಮಗೆ ಮೃತ್ಯುವು ಒಂದು ವರ್ಷದೊಳಗಾಗಲಿ, ಹನ್ನೊಂದು ವರ್ಷಗಳೊಳಗಾಗಲಿ, ಇಪ್ಪತ್ತೊಂದು ವರ್ಷಗಳೊಳ ಗಾಗಲಿ, ಇಲ್ಲವೇ ಪರಮಾವಧಿಯಲ್ಲಿ ನಲವತ್ತೊಂದು ವರ್ಷಗಳೊಳ ಗಾಗಲಿ ಸಂಭವಿಸುವುದು.

ರಾಜಾ—ನಾನು ಆವ ಹೆಂಗುಸಿನ ಕೈಯಿಂದಲೂ ಸಾಯುವುದಿಲ್ಲವಷ್ಟೇ? ಇದು ಸತ್ಯವೋ?

ಸನ್ಯಾಸಿ—ತಾವು ಆವ ಪುರುಷನ ಕೈಯಿಂದಲೂ ಸಾಯುವುದಿಲ್ಲ. ಇದೂ ಸತ್ಯವು.

ರಾಜಾ—(ಸಂತೋಷದಿಂದ) ಹಾಗಾದರೆ ನನಗೆ ಇನ್ನಾವ ಭಯವೂ ಇಲ್ಲ.

ಸನ್ಯಾಸಿ—ಆವ ಭಯವೂ ಇಲ್ಲ.

ರಾಜಾ—ನನಗೆ ತಮ್ಮ ವಿಷಯದಲ್ಲಿ ತುಂಬಾ ಪ್ರೀತಿಯುಂಟಾಗಿರುವುದು. ತಾವು ಬೇಕಾದುದನ್ನು ಕೇಳೋಣವಾಗಲಿ.

ಸನ್ಯಾಸಿ—ಮಹಾರಾಜ! ನಾನು ಕೇಳುವುದನ್ನು ತಾವು ಸಲ್ಲಿಸೋಣವಾಗುವುದೇ?

ರಾಜಾ—ಸಂಶಯವೇಕೆ? ಸಲ್ಲಿಸಿಯೇ ಸಲ್ಲಿಸುವೆನು.

ಸನ್ಯಾಸಿ—ತಮ್ಮ ಬೆರಳುಗಳಲ್ಲಿ ಬೇಕಾದ ಹಾಗೆ ಉಂಗುರಗಳಿರುವುವು. ಅವುಗಳಲ್ಲಿ ಒಂದನ್ನು ನನಗೆ ದಯೆಪಾಲಿಸೋಣವಾಗಲಿ.

ಮಹಾರಾಜನು ಆ ಪ್ರಾರ್ಥನೆಗೆ ಪ್ರತಿಯಾಡದೆ ತನ್ನ ಕೈಯಲ್ಲಿದ್ದ ಉಂಗುರವೊಂದನ್ನು ಸನ್ಯಾಸಿಗೆ ಕೊಟ್ಟು ತನ್ನ ಅರಮನೆಗೆ ತೆರಳಿದನು. ಬಳಿಕ ಸನ್ಯಾಸಿಯು ಕಾರಾಗಾರದಿಂದ ಮುಕ್ತಿಯನ್ನು ಪಡೆದುಕೊಂಡು ಕೂಡಲೆಯೇ ಮಾರವಾಡವನ್ನು ತ್ಯಾಗಮಾಡಿ ಪಶ್ಚಿಮ ಘಟ್ಟಗಳಲ್ಲಿ ಮಾಯವಾಗಿಬಿಟ್ಟನು.

ಮಹಾರಾಜನು ಈ ಸಂತೋಷದ ಸುದ್ದಿಯನ್ನು ತನ್ನ ಹೆಂಡಿತಿ ಕಮಲಿನಿಗೆ ತಿಳಿಸುವುದಕ್ಕಾಗಿ ಅಂತಃಪುರಕ್ಕೆ ತೆರಳಿದನು. ಅಲ್ಲಿ ಕಮಲಿನಿಯನ್ನು ನೋಡಿ ರಾಜನು ಈ ಸುದ್ದಿಯನ್ನು ಆಕೆಗೆ ತಿಳಿಸಿದನು. ಆಗ ಅವರಿಬ್ಬರಿಗೂ ಉಂಟಾದ ಆನಂದವನ್ನು ವರ್ಣಿಸಲು ಮಹಾಕವಿಗೂ ಅಸದಳವು.

ಮಹಾರಾಜನು ಕಮಲಿನಿಯೊಡನೆ ಮಾತನಾಡುತ್ತಿರುವಾಗ, ಆಕೆಯ ದೃಷ್ಟಿಯು ಗಂಡನ ಕೈ ಬೆರಳುಗಳ ಮೇಲೆ ಬಿದ್ದಿತು. ಕೂಡಲೆಯೇ ಆಕೆಯು ಬೆಚ್ಚಿ ಬೆದರಿದವಳಾಗಿ ಗಂಡನನ್ನು ಕುರಿತು—ಪ್ರಭೂ! ಉಂಗುರ ವೇನಾಯಿತು? ಎಂದಳು.

ಮಹಾ—ಅದನ್ನು ಆ ಸನ್ಯಾಸಿಗೆ ಬಹುಮಾನವಾಗಿ ಕೊಟ್ಟು ಬಿಟ್ಟೆನು.

ಕಮಲಿನಿ—ಸರ್ವನಾಶ ಸರ್ವನಾಶ! ಆ ವುಂಗುರವು ರಾಜಮುದ್ರೆಯಲ್ಲವೇ? ಆ ಮುದ್ರೆಯು ರಾಜನ ಕೈಯಲ್ಲಿಲ್ಲದೇ ಹೋದರೆ, ಪುರಪ್ರಮುಖರು ರಾಜನನ್ನು ಸಿಂಹಾಸನದಿಂದ ಕೆಳಗೆ ತಳ್ಳಿ ಬಿಡುವರು. ಮಹಾರಾಜ! ನೀನೇ ನಿನ್ನ ತಲೆಯ ಮೇಲೆ ಮಣ್ಣನ್ನು ತೂರಿಕೊಂಡೆ. ನಿನಗೆ ಇಷ್ಟೂ ತಿಳಿಯದೇ ಹೋದುದೇ?

ಈ ಮಾತನ್ನು ಕೇಳಿದ ಕೂಡಲೆ ಮಹಾರಾಜನ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ಅವನಿಗೆ ನಾಲ್ಕು ದಿಕ್ಕುಗಳಿಂದಲೂ ಅಂಧಕಾರವು ಕವಿದುಕೊಂಡು ಬಂದಿತು. ರಾಜನು ಬಲು ಹೊತ್ತು ಶೂನ್ಯಮನಸ್ಕನಾಗಿ ಶೂನ್ಯವನ್ನು ನೋಡುತ್ತಾ ಕುಳಿತಿದ್ದ ಬಳಿಕ ಆಲೋಚಿಸ ತೊಡಗಿದನು :—

"ಉಂಗುರ! ಉಂಗುರದ ಮಹಿಮೆಯು ಈಗ ನನ್ನ ಮನದಲ್ಲಿ ಹೊಳೆಯುತ್ತಿರುವುದು. ಪುರಾತನ ಕಾಲದಿಂದಲೂ ಮಾರವಾಡದ ಪುರಪ್ರಮುಖರು ರಾಜಮುದ್ರೆಯನ್ನೇ ಮಹಾರಾಜನನ್ನಾಗಿ ತಿಳಿದುಕೊಂಡು ಅದನ್ನು ಧಾರಣಮಾಡಿದವನಿಗೆ ರಾಜನೆಂಬ ಗೌರವವನ್ನು ಕೊಡುತ್ತಾ ಬಂದಿರುವರು. ರಾಜಮುದ್ರೆಯು ರಾಜನ ಕೈಯಲ್ಲಿರುವ ವರೆಗೂ ರಾಜನ ಆಜ್ಞೆಯನ್ನು ಎಲ್ಲರೂ ಪರಿಪಾಲಿಸುವರು. ತಾತ್ಪರ್ಯವೇನೆಂದರೆ—ರಾಜಮುದ್ರೆಯೇ ರಾಜ್ಯಭಾರ ಮಾಡುವುದು. ಅದಿಲ್ಲದ ಮೇಲೆ ಪುರಪ್ರಮುಖರು ರಾಜಮುದ್ರಾಂಕಿತನಲ್ಲದ ರಾಜನನ್ನು ದರೋಡೆಗಳ್ಳನೆಂದು ಭಾವಿಸಿ ಆತನ ಮೇಲೆ ದಂಡೆತ್ತಿ ಬರುವರು. ಹಾ ದೈವವೇ! ನನಗೆ ಎಂತಹ ದುರವಸ್ಥೆಯನ್ನು ತಂದೊಡ್ಡಿರುವೆ! ಇಂದಿನ ವರೆಗಣ ನನ್ನ ಪ್ರಯತ್ನಗಳೆಲ್ಲವೂ

ಬೂದಿಯಲ್ಲಿ ಹೋಮಮಾಡಿದಂತಾದುದು. ಇನ್ನು ನಾನು ಏನ ಮಾಡಲಿ? ಎಲ್ಲಿಗೆ ಹೋಗಲಿ? ಆ ಸನ್ಯಾಸಿಯನ್ನು ಎಲ್ಲಿ ಕಾಣಲಿ? ಅವನ್ನು ಆತನಿಂದ ಹೇಗೆ ಬರಮಾಡಿಕೊಳ್ಳಲಿ? ಈ ರಾಜ್ಯದಲ್ಲಿ ನನಗೆ ಗೌರವವು ಹೇಗೆ ಉಳಿದೀತು?"

ಮಹಾರಾಜನು ಈ ರೀತಿಯಾಗಿ ಚಿಂತಿಸುತ್ತಾ ತನ್ನ ಪೂರ್ವಾಪರ ವಿವೇಕಶೂನ್ಯತೆಗೆ ತುಂಬಾ ವಿಷಾದಪಟ್ಟನು. ತರುವಾಯ ಆ ಸನ್ಯಾಸಿಯನ್ನು ಹಿಡಿಯುವುದಕ್ಕಾಗಿ ಜನರನ್ನು ದಿಕ್ಕುದಿಕ್ಕಿಗೂ ಕಳುಹಿದನು. ಆದರೆ ಅದರಿಂದ ಆವ ಪ್ರಯೋಜನವೂ ಆಗಲಿಲ್ಲ.

ಮಾರವಾಡದಲ್ಲಿ ಸನ್ಯಾಸಿಯನ್ನು ಹುಡುಕುವ ಗದ್ದಲವು ವಿಪರೀತಕ್ಕಿಟ್ಟಿತು. ಆವ ಸನ್ಯಾಸಿಯೇ ಆಗಲಿ, ಕೈಗೆ ಸಿಕ್ಕಿದ ಕೂಡಲೆ ಆತನನ್ನು ಬಂಧನದಲ್ಲಿಡುವುದಲ್ಲದೆ, ರಾಜಮುದ್ರೆಯನ್ನು ಅಪಹರಿಸಿದನೆಂಬ ಅಪವಾದದಿಂದ ಆತನಿಗೆ ನಖಮುಖದಲ್ಲಿಯೂ ಹಿಂಸೆಪಡಿಸುವರು. ಆಗಣ ಮಾರವಾಡದಲ್ಲಿ ಆವ ಸನ್ಯಾಸಿಗೂ ಉಳಿಬಾಳೇ ಇರಲಿಲ್ಲ. ಪುರನಿವಾಸಿಗಳು ಏನಮಾಡಬಲ್ಲರು? ಪ್ರಬಲವಾದ ರಾಜಾಜ್ಞೆಯ ಮುಂದೆ ಪಾಮರನ ಯತ್ನವೇನು ನಡೆಯುವುದು? ಅಸಹಾಯರಾದ ಪ್ರಜೆಗಳು ತಮ್ಮಲ್ಲಿ ತಾವೇ ದುಃಖಪಡಲಾರಂಭಿಸಿದರು.

---

## ನಲವತ್ತೆರಡನೆಯ ವಿಲಾಸ

"ಎಲ್ಲಿರುವೆ ತಂದೆ ಬಾರೋ, ಮಾರುತಿ"

ಈ ರೀತಿಯಾಗಿ ವೇಣುಗಾನವು ಕೇಳಿಬರುತ್ತಿರುವುದು. ಬೆಟ್ಟಗುಡ್ಡಗಳ ಎಲ್ಲೆಡೆಗಳಲ್ಲಿಯೂ ಈ ಮಧುರ ವೇಣುಗಾನವು ಪ್ರತಿಧ್ವನಿತವಾಗುತ್ತಿರುವುದು. ಒಂದೊಂದು ಗ್ರಾಮದಲ್ಲಿಯೂ ಇದೇ ರೀತಿಯಾಗಿ ವೇಣುಗಾನವು ಸಮುಜ್ಜ್ವಲವಾದ ವರ್ಣಗಳಿಂದ ಭಿಲ್ಲರ ಕರ್ಣಕುಹರಗಳನ್ನು ಗುಳಗುಳನೆ ಪ್ರವೇಶಿಸುತ್ತಿರುವುದು. ಭಿಲ್ಲರು ಇಂತಹ ಗಾನವನ್ನು ತಮ್ಮ ಜನ್ಮದಲ್ಲಿ ಎಂದೂ ಕೇಳಿರಲಿಲ್ಲ.

ಸರಿಯಾಗಿ ಒಂದು ವರ್ಷದ ಮೇಲೆ, ಜುಮೇಲಿಯನ ಮುರಳೀ ನಿನಾದವು ವಾಯು ಮಂಡಲದಲ್ಲಿ ತೇಲಿಕೊಂಡು ಹೋಗಿ ಎಲ್ಲ ಭಿಲ್ಲರ ಕಿವಿಗಳಲ್ಲಿಯೂ ಅಮೃತರಸವನ್ನು ಸುರಿಸಲಾರಂಭಿಸಿರುವುದು. ಭಿಲ್ಲರು ವೇಣುಗಾನ ರೂಪದಲ್ಲಿನ ಯುದ್ಧದ ಆಹ್ವಾನ ಧ್ವನಿಯನ್ನು ಕೇಳಿದ ಕೂಡಲೆ ಶಸ್ತ್ರಾಸ್ತ್ರಪಾಣಿಗಳಾಗಿ ದೇವೀಮಂದಿರಕ್ಕೆ ತೆರಳಲು ಸಿದ್ಧ ರಾದರು. ಪರ್ವತ ಪ್ರದೇಶಗಳಲ್ಲಿ ಎಲ್ಲೆಲ್ಲಿ ನೋಡಿದರೂ ಜಯಧ್ವನಿ; ಎಲ್ಲೆಲ್ಲಿ ನೋಡಿದರೂ ಕೋಲಾಹಲದ ಮೇಲೆ ಕೋಲಾಹಲ.

ಭಿಲ್ಲರೆಲ್ಲರೂ ದೇವತಾಮಂದಿರಕ್ಕೆ ತೆರಳುತ್ತಿರುವರು. ಈ ಸಲ ಯುದ್ಧವು ತಪ್ಪದೇ ನಡೆಯುವುದೆಂದು ಭಿಲ್ಲರೆಲ್ಲರೂ ಪರಮಾನಂದಭರಿತ ರಾಗಿ ಜಯಘೋಷಮಾಡುತ್ತಾ ದೇವೀ ಮಂದಿರಕ್ಕೆ ತೆರಳುತ್ತಿರುವರು. ಬಹು ಕಾಲದಿಂದಲೂ ಯುದ್ಧವೆಂಬುದನ್ನೇ ಕಾಣದ, ವಾದ ವಿವಾದ ವೆಂಬುದನ್ನೇ ಅರಿಯದ, ಸ್ವಪ್ನ್ಯಾಪಕಲಹವೆಂಬುದನ್ನೇ ಕೇಳದ ಭಿಲ್ಲರು ಈಗ ಎಲ್ಲಿಯೋ ಯುದ್ಧಕ್ಕೆ ತೆರಳಬೇಕೆಂದು ಕುತೂಹಲಗೊಂಡವರಾಗಿ ತಮ್ಮ ತಮ್ಮ ಗ್ರಾಮಗಳಿಂದ ತೆರಳುತ್ತಿರುವುದನ್ನು ನೋಡಿದರೆ ಎಂತಹ ಹೇಡಿಗಾದರೂ ರಣಾಭಿಲಾಷೆಯು ಹೊರಹೊಮ್ಮುತ್ತಿರುವುದು.

“ಈ ಸಲ ಯುದ್ಧವು ಅಪರಿಹಾರ್ಯವಾದುದು. ನಮ್ಮ ರಾಜನು ಯುದ್ಧಕ್ಕಾಗಿಯೇ ಆಹ್ವಾನ ಕೊಡುತ್ತಿರುವನು. ವೇಣುಗಾನದ ಅರ್ಥ ವನ್ನು ನೋಡಿದರೆ, ಯುದ್ಧಕ್ಕೆ ಸಿದ್ಧರಾಗಿಯೇ ಬರಬೇಕೆಂದು ಬೋಧೆ ಯಾಗುತ್ತಿರುವುದು. ಇಂದು ನಮ್ಮ ಸಂತೋಷಕ್ಕೆ ಪಾರವೇ ಇಲ್ಲ,” ಎಂದು ಒಬ್ಬೊಬ್ಬ ಭಿಲ್ಲನೂ ಮೈಯುಬ್ಬಿ ಹೋಗಿರುವನು. ಗ್ರಾಮ ಗ್ರಾಮಗಳಲ್ಲಿ ರೋಗಗ್ರಸ್ತನಾದ ಕೇವಲ ವೃದ್ಧನೂ, ಸಣ್ಣ ಹುಡುಗನೂ ಹೊರತಾಗಿ ಉಳಿದ ಗಂಡಸರೆಲ್ಲರೂ ಧನುರ್ಧಾರಿಗಳಾಗಿ ಇನ್ನಾರನ ಪರಿ ವಾರವೋ ಎಂಬಂತೆ ಪರ್ವತಗಳಿಂದ ಹೊರ ಹೊರಟಿರುವರು.

ಆದರೆ, ಆಗೊಡನೆ ಎಲ್ಲಿ ಯುದ್ಧವೆಂಬುದು ಮಟ್ಟಿಗೆ ಅವರಿಗೆ ತಿಳಿ ಯದು. ಅವರ ನೇತಾರನೂ, ಅವರ ಸೇನಾಪತಿಯೂ, ಅವರ ರಾಜನೂ, ಅವರ ದೇವತೆಯೂ ಆದ ಜುಮೇಲಿಯನು ವೇಣುಗಾನವನ್ನೇನೋ ಮಾಡಿರುವನು. ಇದನ್ನು ಕೇಳಿ ಎಲ್ಲರೂ ಹೊರಟಿರುವರು. ಭಿಲ್ಲರಿಗೆ

ಜುಮೇಲಿಯನೇ ಅವರ ಸರ್ವಸ್ವವೂ ಆಗಿದ್ದುದರಿಂದ, ಆತನ ಇಷ್ಟವನ್ನು ನೆರವೇರಿಸುವುದೇ ಅವರ ಕರ್ತವ್ಯವಾಗಿದ್ದಿತಾದ ಕಾರಣ, ಅವರು ಅದರ ಕಾರಣವನ್ನು ಎಂದಿಗೂ ವಿಚಾರಮಾಡತಕ್ಕವರಾಗಿರಲಿಲ್ಲ. ಹಾಗೆ ವಿಚಾರಮಾಡುವುದು ನಿಜವಾದ ಭೃತ್ಯನ ಧರ್ಮವೂ ಅಲ್ಲ. ಆದುದರಿಂದ ಭಿಲ್ಲರು ವೇಣುಗಾನದ ಸಮಸಮಯದಲ್ಲಿಯೇ ದೇವತಾಮಂದಿರಕ್ಕೆ ಯುದ್ಧಸಾಮಗ್ರಿಯೊಡನೆ ತೆರಳಿದರು.

ಭಿಲ್ಲರು ದೇವತಾಮಂದಿರಕ್ಕೆ ಬಂದು ಸೇರುವುದಕ್ಕೆ ಮೊದಲು, ಕಾಳಿಕಾಂಬಿಕೆಯ ಮುಂಗಡೆಯಲ್ಲಿ ತ್ರಿಪುರ ಸುಂದರಿಯಾದ ಬಾಲಿಕೆಯೊಬ್ಬಳು ವೀಣೆಯನ್ನು ಹಿಡಿದುಕೊಂಡು ಮಧುರವಾಗಿ ಬಾರಿಸುತ್ತಿದ್ದಳು. ಈ ಅದ್ಭುತ ಗಾನವನ್ನು ಕೇಳಿ ಪಕ್ಷಿಗಳು ಮೈಮರೆತಿರುವುವು. ಪಶುಗಳು ತಿನ್ನುವ ಹುಲ್ಲನ್ನೂ ದೂರ ಬಿಸುಟು ವೀಣಾಗಾನವನ್ನು ಆನಂದದಿಂದ ಕೇಳುತ್ತಿರುವುವು. ಗಾನಮಾಧುರ್ಯದ ಸುಖವನ್ನು ಅನುಭವಿಸುತ್ತಿದೆಯೋ ಎಂಬಂತೆ ಪ್ರಕೃತಿಯು ನಿಶ್ಶಬ್ದವಾಗಿರುವುದು. ರಾಗದ ಮೂರ್ಛನಾ ವಿಶೇಷಗಳಿಂದ ಗಿಡಮರಗಳು ಚಿಗುರುತ್ತವೆಯೋ ಎಂಬಂತೆಯೂ, ಕಲ್ಲುಗಳು ಕರಗಿ ಕರಗಿ ನೀರಾಗಿ ಹರಿಯುತ್ತವೆಯೋ ಎಂಬಂತೆಯೂ ನೋಟಕರಿಗೆ ತೋರಿಬರುತ್ತಿದ್ದಿತು.

ಆ ಬಾಲಿಕೆಯು ನಿರ್ಜನ ಪ್ರದೇಶದಲ್ಲಿ ಕುಳಿತು ವೀಣೆಯನ್ನು ಬಾರಿಸುತ್ತಾ ಒಂದೊಂದು ವೇಳೆ ತಾನೇ ಆನಂದದಿಂದ ಮೈಮರೆತು ಬಾರಿಸುವುದನ್ನೇ ನಿಲ್ಲಿಸಿಬಿಡುವಳು. ಇಂತಹ ಸ್ವಾರಸ್ಯವಾದ ಸಮಯದಲ್ಲಿ ಸನ್ಯಾಸಿಯೊಬ್ಬನು ಬಾಲಿಕೆಯ ಬಂದೆ ಬಂದು ನಿಂತುಕೊಂಡು ಮಧುರವಾದ ವೀಣಾಗಾನವನ್ನು ಕೇಳಿ ಬಲು ಹೊತ್ತು ಆನಂದಿಸುತ್ತಿದ್ದನು. ಇದೇ ರೀತಿಯಲ್ಲಿಯೇ ಕೊಂಚ ಹೊತ್ತು ಕಳೆದ ಬಳಿಕ— ಕಾತ್ಯಾಯನಿ! ಎಂದನು. ಕಾತ್ಯಾಯನಿಯು ಈ ಕೂಗಿನಿಂದ ಚಕಿತೆಯಾಗಿ ಹಿಂದಿರುಗಿ ನೋಡಿ—ತಂದೆಯೇ! ತಾವು ಆವಾಗ ಇಲ್ಲಿಗೆ ಬರೋಣವಾಯಿತು? ಎಂದು ಕೇಳಿದಳು.

ಸನ್ಯಾಸಿ—ನಾನು ಇಲ್ಲಿಗೆ ಬಂದು ಕೊಂಚ ಹೊತ್ತೇ ಆದುದು. ನಿನ್ನ ವೀಣಾಗಾನವು ಬಹಳ ರಮ್ಯವಾಗಿದ್ದಿತು, ಕಾತ್ಯಾಯನಿ!

ಕಾತ್ಯಾ—ನನಗೆ ಬೇಸರವಾದಾಗ ವೀಣೆಯನ್ನು ಬಾರಿಸಿ ಕೊಳ್ಳುವೆನು. ಏನಪ್ಪಣೆ?

ಸನ್ಯಾಸಿ—ಇನ್ನು ವೀಣೆಯ ವ್ಯಾಪಾರವು ಸಾಕು. ಈಗ ಬೇರೆಯ ಕೆಲಸದ ಆವಶ್ಯಕತೆಯಿರುವುದು. ನೀನು ಮಾಡಿದ ಕೆಲಸ ದಿಂದಾದುದೇನು?

ಕಾತ್ಯಾ—ನನ್ನಿಂದ ಈ ಕೆಲಸವಾಗಲಾರದೆಂದು ನಾನು ತಮಗೆ ಮೊದಲೇ ಅರಿಕೆಮಾಡಿಕೊಂಡಿರುವೆನು. ಕುಮುದಿನಿಯ ಬಳಿಯಲ್ಲಿ ಯೂ ನಾನು ಈ ಪ್ರತಿಜ್ಞೆಮಾಡಿ ಕೊಟ್ಟಿರುವೆನು. ಈಗ ನನ್ನ ಹೃದಯ ದಲ್ಲಿ ಆ ಭಾವನೆಯಿಲ್ಲ.

ಸನ್ಯಾಸಿ—ಲಲಿತಸಿಂಹನಿಗಾಗಿಯೂ, ಕುಮುದಿನಿಗಾಗಿಯೂ, ಮಾರವಾಡದ ಹಿತಕ್ಕಾಗಿಯೂ ನೀನು ಈ ಕೆಲಸವನ್ನು ಮಾಡಲೇ ಬೇಕಾ ಗುವುದು. ನೀನು ಸಾಹಾಯ್ಯವನ್ನೆಸಗದ ಪಕ್ಷದಲ್ಲಿ ಲಲಿತನಿಗೆ ರಾಜ್ಯವು ಕೈಸೇರುವ ಆಸೆಯೇ ಇಲ್ಲದಂತಾಗಿ ಹೋಗುವುದು.

ಕಾತ್ಯಾ—ನಾನು ತಮ್ಮ ಇಷ್ಟದಂತೆ ವರ್ತಿಸುವುದಾದರೆ, ಮಾರವಾಡದ ಮಹಾರಾಣಿಯಾಗಲೇ ಬೇಕಾದೀತು.

ಸನ್ಯಾಸಿ—ಇದು ಸೃಷ್ಟಿಕರ್ತನ ಇಚ್ಛೆ.

ಕಾತ್ಯಾ—ಸೃಷ್ಟಿಕರ್ತನಿಗೆ ಇಷ್ಟವಿದ್ದರೂ ಇರಬಹುದು. ನನಗೆ ಮಟ್ಟಿಗೆ ಇಷ್ಟವಿಲ್ಲ.

ಇದನ್ನು ಕೇಳಿ ಸನ್ಯಾಸಿಯು ಕೊಂಚ ಹೊತ್ತು ಸುಮ್ಮನಿದ್ದು—ಕಾತ್ಯಾಯನಿ! ಹಾಗಾದರೆ ನೀನೇನ ಮಾಡಬೇಕೆಂದಿರುವೆ? ಎಂದನು.

ಕಾತ್ಯಾ—ನಾನು ಸನ್ಯಾಸಿನಿಯಾಗಿಯೇ ಇದ್ದುಕೊಂಡು ಗ್ರಾಮೈಕರಾತ್ರಿಯಾಗಿ ಅಲೆದಲೆದು ತಿರಿದು ತಿನ್ನುವೆನು.

ಸನ್ಯಾಸಿ—ಲಲಿತಸಿಂಹನನ್ನು ನೀನು ಪ್ರೀತಿಸುವೆಯೋ ಇಲ್ಲವೋ?

ಕಾತ್ಯಾ—ನನ್ನ ಪ್ರೀತಿಯ ಮರ್ಮವು ತಮಗೆ ಹೇಗೆ ಗೊತ್ತಾಗ ಬೇಕು ?

ಸನ್ಯಾಸಿ—ಲಲಿತನು ದೂರದಲ್ಲಿದ್ದಾಗ ಆತನಿಗಾಗಿ ಕೊರಗುವುದು ಸಹಜವಾಗಿರುವುದು. ಆತನು ಕೈಗೆ ಸಿಕ್ಕಿರುವಾಗ, ಪ್ರೀತಿಯ ಫಲವನ್ನು ಅನುಭವಿಸಬಾರದೇತಕೆ ?

ಕಾತ್ಯಾ—ಮೊಸಲಲ್ಲಿ ನಾನು ಕುಮುದಿನಿಯ ವಿಷಯವನ್ನೇ ಅರಿಯೆನು ; ಹಾಗೂ ಆಕೆಯನ್ನು ನೋಡಿರಲಿಲ್ಲ. ಆಕೆಯನ್ನು ನೋಡುವುದಕ್ಕೆ ಮೊದಲು ನಾನು ಆತನನ್ನು ಅತಿಶಯವಾಗಿಯೇ ಪ್ರೀತಿಸುತ್ತಿದ್ದೆನು. ನಾನು ಆತನನ್ನು ಪ್ರೀತಿಸಿದ ಹಾಗೆ ಮತ್ತಾರೂ ಪ್ರೀತಿಸಲಾರರು. ಈಗ ಲಲಿತನು ಕುಮುದಿನಿಯನ್ನು ಅತಿಶಯವಾಗಿ ಪ್ರೀತಿಸುತ್ತಿರುವುದರಿಂದ, ಆಕೆಯಂತೆ ನನ್ನನ್ನು ಪ್ರೀತಿಸಲಾರನು. ತಂದೆಯೆ ! ತಾವು ನನ್ನನ್ನು ದುರ್ಬಲೆಯಾದ ಹಂಗುಸೆಂದು ಭಾವಿಸೋಣವಾಯಿತೇ? ನಾನು ನನ್ನ ಹೃದಯವನ್ನು ಬಲಿಯಾಗಿ ಕೊಟ್ಟುಬಿಟ್ಟಿರುವೆನು. ತಾವು ನನಗೆ ಇನ್ನು ಪ್ರಲೋಭನದ ಮಾತನ್ನು ಉಪದೇಶಿಸಲಾಗದು.

ಸನ್ಯಾಸಿ—ಮಗು ! ನಾನು ಪ್ರಲೋಭನಮಾಡುವುದಕ್ಕೆ ಬಂದವನಲ್ಲ. ನೀನು ಲಲಿತ ಕುಮುದಿನಿಯರನ್ನು ಪ್ರೀತಿಸದೇ ಹೋದರೆ, ಅವರಿಬ್ಬರೂ ಕಷ್ಟದಿಂದ ಪಾರಾಗುವ ಸಂಭವನೇ ಇಲ್ಲ. ಈಗ ನೀನು ಮನಸ್ಸು ಮಾಡಿದರೆ ಅವರಿಬ್ಬರೂ ಉದ್ಧಾರವಾಗುವರು. ಇಷ್ಟರ ಮಟ್ಟಿನ ಪರೋಪಕಾರವನ್ನು ನೆರವೇರಿಸಲಾರೆಯಾ ?

ಕಾತ್ಯಾಯನಿಯು ಆವ ಮಾತನ್ನೂ ಆಡಲಿಲ್ಲ. ಸನ್ಯಾಸಿಯು ಮತ್ತೆ ಮಾತನಾಡಿದನು :—

" ನೀನು ನಾರವಾಡದ ಮಹಾರಾಣಿಯಾದರೂ ಸಂತೋಷ, ಮಹಾರಾಣಿಯಾಗದಿದ್ದರೂ ಸಂತೋಷ. ನಿನಗೆ ತೀವ್ರವಾದ ವೈರಾಗ್ಯದಲ್ಲಿ ಅಭಿರುಚಿಯಿರುವುದಾದರೆ, ಯುದ್ಧವಾದ ಮೇಲೆ ನೀನು ಲಲಿತನನು ಮತ್ತೆ ನೋಡಬೇಕಾದುದಿಲ್ಲ. ಬಳಿಕ ನೀನು ಆವುದೋ ಗಿರಿಕಂದರ

ದಲ್ಲಿ ಸೇರಿಕೊಂಡು ಯೋಗಸಾಧನೆಯಿಂದ ಜನ್ಮವನ್ನು ಸಾರ್ಥಕ ಗೊಳಿಸು.''

ಕಾತ್ಯಾಯನಿಯು ಇದಕ್ಕೂ ಆವ ಉತ್ತರವನ್ನೂ ಕೊಡದಿರಲು, ಸನ್ಯಾಸಿಯು—ಮಗು! ಹಾಗಾದರೆ ನಿನ್ನ ಇಷ್ಟವಾದರೂ ಏನು; ಎಂದನು.

ಕಾತ್ಯಾ—ಪಿತನೆ! ಈಗ ತಾವು ಏನ ಹೇಳೋಣವಾಯಿತೋ, ನಾನು ಅದನ್ನು ನೆರವೇರಿಸುವೆನು. ನಾನು ಹುಚ್ಚಿಯಂತಾಗಿ ಮಾರವಾಡಕ್ಕೆ ಹೋಗಿದ್ದೆನು. ನಾನು ಹುಚ್ಚಿಯಂತಾಗಿ ಮಹಾರಾಜಸಿಂಹನಿಗೆ ಭಯೋತ್ಪಾದನೆ ಮಾಡಿದೆನು. ವಿಷವೆಂದು ತಿಳಿದರೂ ನಾನು ಲಲಿತನೊಡನೆ ವಾಸಮಾಡಿದೆನು. ತಂದೆಯೆ! ಇನ್ನು ನಾನು ಸಹಿಸಲಾರೆನು. ನಾನು ಎಷ್ಟಾದರೂ ಹೆಂಗುಸು. ನನ್ನಲ್ಲಿ ಎಷ್ಟು ಶಕ್ತಿಯಿದ್ದರೂ ಅದೆಲ್ಲವೂ ಪ್ರಯೋಜನವಿಲ್ಲದುದು. ನಾನಾದರೂ ಅಂತಸ್ತಾಪದಿಂದ ಉರಿದು ಬೂದಿಯಾಗಿ ಹೋಗುವೆನೇ ಹೊರತು, ಇತರರ ಹೃದಯ ಸರ್ವಸ್ವವನ್ನು ನಾನೆಂದಿಗೂ ಅಪಹರಿಸಲಾರೆನು. ತಾವು ಹೆಂಗುಸರ ಹೃದಯವೆಂಥದೆಂಬುದನ್ನು ಎಂದಿಗೂ ಅರಿಯಲಾರಿರಿ. ತಮಗೆ ಗೊತ್ತಾಗುವುದಕ್ಕೆ ಕಾರಣವೂ ಇಲ್ಲ. ಪ್ರೀತಿಯ ಮರ್ಮವನ್ನು ಅರಿತವರೇ ಸ್ತ್ರೀಯರು. ನನಗೂ ಪ್ರೀತಿಯ ತತ್ತ್ವವೆಂಬುದು ಚೆನ್ನಾಗಿಯೂ ಗೊತ್ತು. ಆದರೆ ಪ್ರಯೋಜನವೇನು; ಅಸ್ಥಾನದಲ್ಲಿ ಪ್ರೀತಿಯನ್ನಿಟ್ಟು ಕೊರಗುವುದು ನನ್ನ ಹಣೆಯಲ್ಲಿ ಬರೆಯಿತು. ನಾನೊಬ್ಬ ಪಾಮರಿಯಾಗಿದ್ದರೆ, ಇಂತಹ ಸುಯೋಗವನ್ನೆಂದಿಗೂ ಕಳೆದುಕೊಳ್ಳುತ್ತಿರಲಿಲ್ಲ; ಹಾಗೂ ಕಳೆದುಕೊಳ್ಳುವುದಕ್ಕೆ ಮನಸ್ಸೂ ಬರುತ್ತಿರಲಿಲ್ಲ. ತಾವು ಇಷ್ಟು ಪ್ರಯತ್ನಪಟ್ಟಾದರೂ ನನಗೆ ವಿದ್ಯಾಬುದ್ಧಿಗಳನ್ನು ಕಲಿಸಿದುದೇತಕೋ!

ಹೀಗೆ ಹೇಳಿ ಕಾತ್ಯಾಯನಿಯು ಅಳುವುದಕ್ಕೆ ಮೊದಲು ಮಾಡಿದಳು. ಆದರೆ ನಿಮಿಷ ಮಾತ್ರದಲ್ಲಿ ತನ್ನ ಸೀರೆಯ ಸೆರಗಿನಿಂದ ಕಂಬನಿಯನ್ನು ತೊಡೆದುಕೊಂಡು—ತಾವು ಇದೆಲ್ಲವನ್ನೂ ಅರಿತವರಾಗಿ ನನ್ನನ್ನು

ಕುಮುದಿನಿಯ ಬಳಿಗೆ ಕಳುಹಿಸಿದುದೇತಕೆ? ನಾನು ಆಕೆಯನ್ನು ನೋಡದೇ ಇದ್ದಿದ್ದರೆ, ನನಗೆ ಇಷ್ಟು ಯಾತನೆಯುಂಟಾಗುತ್ತಿರಲಿಲ್ಲ, ಎಂದುಸುರಿದಳು.

ಸನ್ಯಾಸಿ—ಮಗು! ಎಲ್ಲವೂ ವಿಧಿವಿಲಾಸವು. ಈಗ ನೀನು ಲಲಿತನಿಗಾಗಿಯೂ ಕುಮುದಿನಿಗಾಗಿಯೂ ಯತ್ನಮಿಾರಿ ಸಾಹಾಯ್ಯ ಮಾಡಬೇಕೆಂದು ನನ್ನ ಇಷ್ಟವು. ನನ್ನ ಇಷ್ಟವನ್ನು ನೆರವೇರಿಸುವುದು ನಿನ್ನ ಕರ್ತವ್ಯವು.

ಕಾತ್ಯಾಯನಿಯು ಮುಖವನ್ನು ಮುಚ್ಚಿಕೊಂಡು ಅಳಲಾರಂಭಿಸಿದಳು.

ಸನ್ಯಾಸಿ—ಮೊದಲು ನಿನಗೂ ಲಲಿತನಿಗೂ ವಿವಾಹವೆಂಬುದಾಗಲಿ, ಬಳಿಕ ನೀನು ಮಹಾರಾಣಿಯಾದರೆ ಆಗು, ಇಲ್ಲವಾದರೆ ಬಿಡು. ಯುದ್ಧವಾದ ಮೇಲೆ ನಿನ್ನ ಇಷ್ಟವಿದ್ದಂತೆ ಮಾಡು.

ಕಾತ್ಯಾ—ಅದು ಸಾಧ್ಯವೇ? ಹೃದಯದಲ್ಲಿ ಅದೇ ಬಲವಿರುವುದೇ?

ಸನ್ಯಾಸಿ—ಹಾಗೆ ಬಲವು ಇಲ್ಲದ ಮೇಲೆ, ನನ್ನ ಇಷ್ಟು ವರ್ಷಗಳ ಯತ್ನವೂ, ಪರಿಶ್ರಮವೂ, ಶಿಕ್ಷಣವೂ, ಪಾಠವೂ ಇವೆಲ್ಲವೂ ವ್ಯರ್ಥವೇ ಆದುದು.

ಕಾತ್ಯಾ—ವಿವಾಹದ ಆವಶ್ಯಕತೆಯೇನು?

ಸನ್ಯಾಸಿ—ವಿವಾಹದಿಂದ ಆವಶ್ಯಕತೆಯುಂಟು. ಭಿಲ್ಲರೆಲ್ಲರೂ ಜುಮೇಲಿಯನ ಆಜ್ಞೆಯನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ತಿಳಿದುಕೊಂಡಿರುವರು. ಇಂಥವರು ಶಿಕ್ಷಿತರಾದ ಮಾರವಾಡದ ಸೈನ್ಯದವರಿಗೆ ಯುದ್ಧದಲ್ಲಿ ಸಾಟಿಯೇ? ಯುದ್ಧದಲ್ಲಿ ಇವರು ಸೋತರೆಂದರೆ, ಬಳಿಕ ಇವರು ಭಯದಿಂದ ಕೈ ಹತ್ತರು. ತರುವಾಯ ಇವರೇನ ಮಾಡಿಬಿಡುವರೋ ಬಲ್ಲವರಾರು? ಇವರು ಸೋತಕೂಡಲೆ, ಇವರಿಗೂ ಜುಮೇಲಿಯನಿಗೂ ಆವ ಸಂಬಂಧವೂ ಇರುವುದಿಲ್ಲ.

ಕಾತ್ಯಾ—ವಿವಾಹಕ್ಕೂ ಇದಕ್ಕೂ ಆವ ಸಂಬಂಧವಿರುವುದು, ತಂದೆಯೇ ?

ಸನ್ಯಾಸಿ—ಭಿಲ್ಲರೆಲ್ಲರೂ ಕಾತ್ಯಾಯನಿಯನ್ನು ಸಾಕ್ಷಾತ್ತಾಗಿ ಬಂದಿರುವ ಕಾಳಿಯೆಂದೇ ತಿಳಿದಿರುವರು. ಅಂತಹ ಕಾತ್ಯಾಯನಿಗೆ ಲಲಿತನೊಡನೆ ವಿವಾಹವಾಗುವುದಾದರೆ, ಲಲಿತನು ಭಿಲ್ಲನಾಗುವನು. ಬಳಿಕ ಭಿಲ್ಲರು ಕಾತ್ಯಾಯನಿಗಾಗಿ ಲಲಿತಸಿಂಹನ ಪಕ್ಷವನ್ನು ವಹಿಸಿ ಯುದ್ಧಮಾಡಲು ಸಿದ್ಧರಾಗಿ ಬಂದು ನಿಲ್ಲುವರು. ಬೇಕಾದಾಗ ಪ್ರಾಣವನ್ನಾದರೂ ಬಿಡಬಲ್ಲರು.

ಕಾತ್ಯಾ—ತಾತ ಮಹಾಶಯ ! ತಮ್ಮ ಪ್ರಯತ್ನ ನೋಡಿದರೆ, ತಾವು ನನ್ನನ್ನು ಮಾರವಾಡದ ಮಹಾರಾಣಿಯನ್ನಾಗಿ ಮಾಡದೇ ಬಿಡತಕ್ಕವರಲ್ಲವೆಂದು ನನಗೆ ಹೊಳೆಯುತ್ತಿರುವುದು.

ಸನ್ಯಾಸಿ—ಮಗು ! ನಾನು ಮಾಡುವುದೇನಿರುವುದು? ಎಲ್ಲವೂ ದೈವೇಚ್ಛೆ, ದೈವಮಾಯೆ, ದೈವಲೀಲೆ.

ಕಾತ್ಯಾ—ಇಷ್ಟಾದ ಮೇಲೆ ನಾನು ತಮ್ಮ ಆಜ್ಞೆಯನ್ನು ಪರಿಪಾಲಿಸುವೆನು. ಆದರೆ, ನನ್ನಿಂದ ಆಜ್ಞಾಪಾಲನವೆಂಬುದು ಇದೇ ಕೊನೆಯದು. ಮುಂದೆ ತಾವು ನನಗೆ ಮತ್ತಾವ ಕೆಲಸವನ್ನು ಹೇಳಿದರೂ, ನಾನು ನೆರವೇರಿಸಲು ಬಾಧ್ಯೆಯಲ್ಲ. ಈ ವಿಷಯದಲ್ಲಿ ಕಾಳಿಕಾಂಬಿಕೆಯ ಇದಿರಿನಲ್ಲಿ ಪ್ರತಿಜ್ಞೆಯಾಗಲಿ.

ಸನ್ಯಾಸಿ—ನಾನು ಕಾಳಿಯ ಇದಿರಿನಲ್ಲಿ ಪ್ರತಿಜ್ಞೆ ಮಾಡುವೆನು. ನಾನು ನಿನಗೆ ಮತ್ತಾವ ಕಾಲದಲ್ಲಿಯೂ ಮತ್ತಾವ ಬಗೆಯಾಗಿಯೂ ನಿರ್ಬಂಧ ಪಡಿಸುವುದಿಲ್ಲ.

ಕಾತ್ಯಾ—ನಾನು ಈ ಸಲದ ಮಟ್ಟಿಗೆ ತಮ್ಮಿಷ್ಟದಂತೆ ನಡೆಯುವೆನು.

ಇಷ್ಟಾದ ಬಳಿಕ ಇಬ್ಬರೂ ಮಂದಿರದೊಳಗೆ ಪ್ರವೇಶಮಾಡಿ ಬಾಗಿಲನ್ನು ಮುಚ್ಚಿಕೊಂಡು ಅಗಳಿಯನ್ನು ಹಾಕಿಕೊಂಡರು.

---

## ನಲವತ್ತನೂರನೆಯ ವಿಲಾಸ

ದೇವೀ ಮಂದಿರದ ಕೊಂಚ ದೂರದಲ್ಲಿ ಸಣ್ಣದಾದದೊಂದು ಸರೋವರವಿರುವುದು. ಆ ಸರೋವರದ ತಡಿಯಲ್ಲಿ ಲಲಿತಸಿಂಹನು ಏಕಾಕಿಯಾಗಿ ಕುಳಿತುಕೊಂಡು ಚಿಂತಾ ಸಾಗರದಲ್ಲಿ ಆಕಂಠಮಗ್ನನಾಗಿರುವನು.

ಇಂದಿಗೆ ಒಂದು ವರ್ಷದ ಕಾಲವು ಕಳೆದು ಹೋಗಿರುವುದು. ಆದರೂ ಕುಮುದಿನಿಯ ಯೋಗಕ್ಷೇಮವೇ ಆತನಿಗೆ ತಿಳಿಯಲು ಅವಕಾಶವಾಗಲಿಲ್ಲ. ಲಲಿತನು ಒಂದು ವರ್ಷದಿಂದಲೂ ಬೇಡನಿಗೆ ಅಂಜಿದ ಜಿಂಕೆಯಂತೆ ಪ್ರಾಣಭಯದಿಂದ ಕಾಡು ಮೇಡುಗಳಲ್ಲಿ ಅಲೆದಾಡುತ್ತಿರುವನು. ಮಹಾರಾಜಸಿಂಹನು ಲಲಿತಸಿಂಹನನ್ನು ಸೆರೆ ಹಿಡಿಯ ಬೇಕೆಂದು ಆಗಿಂದಾಗ ಸೈನ್ಯವನ್ನು ಕಳುಹುತ್ತಲೇ ಇರುವನು. ಅಲ್ಲದೆಯೂ ಮಾರವಾಡದ ಗೂಢಚಾರರು ಲಲಿತನನ್ನು ಹುಡುಕಿಕೊಂಡು ಸಂಚರಿಸುತ್ತಲೇ ಇರುವರು. ಇವಕ್ಕಾಗಿ ಲಲಿತನು ಇಂದು ಇಲ್ಲಿಯೂ, ನಾಳೆ ಮತ್ತೊಂದೆಡೆಯಲ್ಲಿಯೂ ಅವಿತುಕೊಂಡು ಕಾಲವನ್ನು ಕಳೆಯಲಾರಂಭಿಸಿದನು. ಇಂತಹ ಲಲಿತನು ಇಂದು ಆ ಸರೋವರದ ತಡಿಯಲ್ಲಿ ಕುಳಿತುಕೊಂಡು ಭೂವ್ಯೋಕಾಶಗಳನ್ನೇ ಚಿಂತಿಸುತ್ತಿರುವನು.

ಆವ ರಾತ್ರಿಯಲ್ಲಿ ಲಲಿತನು ರಾಜಧಾನಿಯನ್ನು ತ್ಯಾಗಮಾಡಿ ದಕ್ಷಿಣ ದಿಕ್ಕಿನಲ್ಲಿದ್ದ ಶಿವಾಲಯಕ್ಕೆ ಬಂದನೋ, ಆಗ ಆ ದೇವಾಲಯದಲ್ಲಿಯೇ ಆತನು ಜುಮೇಲಿಯನನ್ನು ಕಂಡನು. ಬಳಿಕ ಇಬ್ಬರೂ ಕುದುರೆಗಳನ್ನೇರಿ ಭಿಲ್ಲರಾಜ್ಯದ ಕಡೆಗೆ ಹೊರಟು ಬಂದರು. ಅಂದು ಮೊದಲು ಇವರಿಬ್ಬರೂ ಎಡೆಬಿಡದೆ ಒಂದೆಡೆಯಲ್ಲಿಯೇ ವಾಸವಾಗಿರುವರು. ಇದೇ ರೀತಿಯಲ್ಲಿ ಒಂದು ವರ್ಷದ ಕಾಲವು ಕಳೆದು ಹೋದರೂ, ಲಲಿತನಿಗೆ ರಾಜ್ಯವು ಮತ್ತೆ ಕೈಸೇರುವ ಆವ ಭರವಸೆಯೂ ಕಾಣಲಿಲ್ಲ.

ಲಲಿತನೂ ಜುಮೇಲಿಯನೂ ಬಹುಕಾಲದಿಂದಲೂ ಒಂದೆಡೆಯಲ್ಲಿಯೇ ಇರುತ್ತಿದ್ದರೂ, ಲಲಿತನಿಗೆ ಜುಮೇಲಿಯನ ನೀತಿರೀತಿಗಳಾಗಲಿ, ಸ್ಥಿತಿಗತಿಗಳಾಗಲಿ, ಹಾವಭಾವಗಳಾಗಲಿ ಒಂದೂ ತಿಳಿವಿಗೆ ಬರದೇ ಹೋಯಿತು. ಜುಮೇಲಿಯನು ಆಗಿಂದಾಗ ಲಲಿತನನ್ನು ಬಿಟ್ಟು, ತನ್ನ

ಕೆಲಸದ ಮೇಲೆ ಹೋಗಿ ಬರುತ್ತಿದ್ದನು. ಲಲಿತನು ಇದರ ತತ್ತ್ವವನ್ನು ಕೊಂಚವೂ ಅರಿಯದವನಾಗಿದ್ದನು.

ಲಲಿತನು ಒಂದೊಂದು ವೇಳೆ ಈ ವಿಷಯದಲ್ಲಿ ಆವುದಾವರೂ ಪ್ರಶ್ನೆ ಹಾಕಿದಲ್ಲಿ, ಜುಮೇಲಿಯನು ವೀಣೆಯನ್ನು ತೆಗೆದುಕೊಂಡು ಮಧುರ ವಾಗಿ ಬಾರಿಸಿ ಲಲಿತನನ್ನು ಮುಗ್ಧನನ್ನಾಗಿ ಮಾಡಿಬಿಡುತ್ತಿದ್ದನು. ಇದರಿಂದ ಲಲಿತನು ತನ್ನ ಪ್ರಶ್ನೆಯನ್ನು ಮರೆತು ಮುಂದಣ ಮತ್ತಾವುದೋ ಕೆಲಸದಲ್ಲಿ ವ್ಯಗ್ರನಾಗಿಬಿಡುತ್ತಿದ್ದನು.

ಇದೇ ರೀತಿಯಲ್ಲಿಯೇ ಒಂದು ವರ್ಷದ ಕಾಲವು ಕಳೆದು ಹೋದುದು. ಲಲಿತನು ಜುಮೇಲಿಯನ ಸಹವಾಸದಲ್ಲಿದ್ದರೂ ಪ್ರಾಣ ಭಯದಿಂದ ತತ್ತರಿಸಿ ಹೋಗಿ, 'ಏನ ಮಾಡಲಿ? ಎಲ್ಲಿಗೆ ಹೋಗಲಿ?' ಎಂಬ ಚಿಂತೆಯಿಂದ ಕೊರಗುತ್ತಲೇ ಇರುವನು. ಲಲಿತನಿಗೆ ಆವಾಗಲೂ ಕುಮುದಿನಿಯ ಚಿಂತೆ; ಆತನು ಆಕೆಯ ವಿಷಯವಾಗಿ ಚಿಂತಿಸಿದ ನೇನೆಂದರೆ :—

"ಕುಮುದಿನಿಯು ಏನನ್ನೂ ಅರಿಯದ ಹುಡುಗಿ. ಶತ್ರುಗಳ ಮಧ್ಯದಲ್ಲಿದ್ದುಕೊಂಡು ಆಕೆಯು ಎಷ್ಟು ಸಂಕಟಪಡುತ್ತಿರುವಳೋ! ವೀರೇಂದ್ರನು ಆಕೆಯನ್ನು ರಕ್ಷಿಸಿಕೊಂಡು ಬರುವುದಾಗಿ ಮಾತ ಕೊಟ್ಟಿದ್ದನು. ಅದು ಅವನಿಂದ ಸಾಧ್ಯವಾದುದೋ ಇಲ್ಲವೋ? ಆತನಿಂದ ಆವ ಸಮಾಚಾರವು ಬಾರದಿರುವುದನ್ನು ನೋಡಿದರೆ, ಅವನಿಗೆ ವಿಶೇಷವಾದ ತೊಂದರೆಯೇ ಉಂಟಾಗಿರಬೇಕು. ಜುಮೇಲಿಯನನ್ನು ಕೇಳಿದರೆ, ಆತನು 'ಸಮಾಚಾರವು ಬಂದಿರುವುದು; ನಿಮ್ಮ ಕುಮುದಿನಿಯು ಸುಖ ದಿಂದಿರುವಳು' ಎಂದು ಹೇಳಿಬಿಡುವನು. ಇಷ್ಟರಿಂದಲೇ ನನ್ನ ಮನವು ಶಾಂತವಾಗಲಿಕ್ಕಿಲ್ಲ. ಈ ಸಂದರ್ಭದಲ್ಲಿ ನಾನೇನ ಮಾಡಲಿ?"

ಲಲಿತಸಿಂಹನು ಸರೋವರದ ತಡಿಯಲ್ಲಿ ಕುಳಿತುಕೊಂಡು ಈ ರೀತಿ ಯಾಗಿ ಚಿಂತಿಸುತ್ತಿದ್ದನು. ಆಗ ಅವನ ಹಿಂದೆ ಆರೋ ಬಂದು ನಿಂತಂತಾಗಲು, ಲಲಿತನು ತಟ್ಟನೆ ಹಿಂದಿರುಗಿ ನೋಡಲಾಗಿ, ಆ ವ್ಯಕ್ತಿಯು ಜುಮೇಲಿಯನಾಗಿದ್ದನು. ಲಲಿತನು ಜುಮೇಲಿಯನನ್ನು ಸಂಬೋಧಿಸಿ—

ಜುಮೇಲಿಯಾ! ಇಂದು ನೀನು ಕುಮುದಿನಿಯ ಸಮಾಚಾರವನ್ನು ತಿಳಿಸುವುದಾಗಿ ಹೇಳಿರಲಿಲ್ಲವೇ? ನಿನಗೆ ಸಮಾಚಾರವೇನಾದರೂ ಬಂದಿರುವುದೇ? ಎಂದು ಕೇಳಿದನು.

ಜುಮೇ—ಕುಮುದಿನಿಯು ಸುಖವಾಗಿರುವಳೆಂದು ಮಟ್ಟಿಗೆ ಸಮಾಚಾರವು ಬಂದಿರುವುದು

ಲಲಿತ—ಬಹು ದಿನಗಳಿಂದಲೂ ಇದೇ ಸುದ್ದಿಯೇ ಕೇಳಿ ಬರುತ್ತಿರುವುದು. ಇಷ್ಟು ಮಾತ್ರದಿಂದ ನನಗೆ ಸಂತೋಷವಾಗುವಂತಿಲ್ಲ.

ಜುಮೇ—ತಮ್ಮ ಕುಮುದಿನಿಯು ಗಂಡು ಗೂಸನ್ನು ಹೆತ್ತಿರುವಳು.

ಲಲಿತ—ಕುಮುದಿನಿಯು ಸುಖವಾಗಿರುವಳಷ್ಟೇ?

ಜುಮೇ—ಅವಳು ಆರೋಗ್ಯದಿಂದಿದ್ದರೂ ಸುಖದಿಂದಿಲ್ಲ. ಆಕೆಯು ಚಿತ್ತೂರು ದುರ್ಗದಲ್ಲಿ ಬಂದಿಯಂತೆ ವಾಸಮಾಡಿಕೊಂಡಿರುವಳು.

ಲಲಿತನು ಈ ಸುದ್ದಿಯನ್ನು ಕೇಳಿ ತನ್ನ ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ಮಾತಿಲ್ಲದೆ ಸುಮ್ಮನೇ ಕುಳಿತು ಬಿಟ್ಟನು. ಅವನಿಗೆ ಆವ ಮಾತನಾಡುವುದಕ್ಕೂ ಶಕ್ತಿಯೇ ಇರಲಿಲ್ಲ. ಎಷ್ಟೋ ಹೊತ್ತಿನ ಮೇಲೆ ಲಲಿತನು ತನ್ನ ಮನದ ಆವೇಗವನ್ನು ಕೊಂಚ ಮಟ್ಟಿಗೆ ಸಮಾಧಾನಕ್ಕೆ ತಂದುಕೊಂಡು—ಜುಮೇಲಿಯಾ! ಇಹ ಸಂಸಾರದಲ್ಲಿ ನಿನ್ನನ್ನು ಹೊರತಾಗಿ ನನಗೆ ಮತ್ತಾರೂ ಆಪದ್ಬಾಂಧವರಿಲ್ಲ. ನನಗಾದರೋ ರಾಜ್ಯದ ಆಶೆಯೇ ಇಲ್ಲವೆಂದು ತೋರುತ್ತಿರುವುದು. ಆಸೆಯನ್ನಿಟ್ಟುಕೊಂಡು ವ್ಯರ್ಥವಾಗಿ ಕಾಲ ಕಳೆಯುವುದಕ್ಕಿಂತಲೂ ನಿರಾಶನಾಗಿ ಪ್ರಾಣಬಿಡುವುದು ಮೇಲೆಂದು ಅಭಿಪ್ರಾಯ ಪಡತಕ್ಕವನಾಗಿರುವೆನು, ಎಂದು ತಿಳಿಸಿದನು.

ಜುಮೇ—ಸ್ವಾಮಿಾ! ನಾನು ಕೆಲಸ ಮಾಡದೆ ಸುಮ್ಮನೇ ಕುಳಿತಿರುವೆನೆಂದು ತಾವು ತಿಳಿದಿರೇನು?

ಲಲಿತ—ಸಖನೇ! ಕೋಪಮಾಡಬೇಡ. ನನ್ನ ಮನೋ ಭಾವವು ನಿನಗೆ ಗೊತ್ತಾಗಿದ್ದಿದ್ದರೆ, ನೀನು ಎಂದಿಗೂ ಕೋಪ ಮಾಡು ತ್ತಿರಲಿಲ್ಲ.

ಲಲಿತನು ಹೀಗೆ ಹೇಳಿ ಜುಮೇಲಿಯನನ್ನು ಅಪ್ಪಿಕೊಂಡು ಮಗು ವಿನಂತೆ ಅತ್ತು ಬಳಿಕ—ಮಿತ್ರನೇ! ರಾಜ್ಯದಿಂದ ನನಗಾಗುವುದೇನು? ಸಿಂಹಾಸನಾರೋಹಣವು ನನಗೆ ಬೇಡ. ಕುಮುದಿನಿಯ ದುಃಖವ ನ್ನಾದರೂ ಹೋಗಲಾಡಿಸಿ ನನ್ನನ್ನು ಉದ್ಧರಿಸು. ಜುಮೇಲಿಯಾ! ಆಕೆಯನ್ನು ನನ್ನ ಬಳಿಗೆ ಕರೆತಂದು ಬಿಡಲಾರೆಯಾ? ನಾವಿಬ್ಬರೂ ಗುಡಿ ಸಲನ್ನು ಕಟ್ಟಿಕೊಂಡು ಇಲ್ಲಿಯೇ ವಾಸಮಾಡಿಕೊಂಡಿರುವೆವು, ಎಂದು ಸುರಿದನು.

ಈ ಮಾತ ಕೇಳಿದ ಕೂಡಲೆ ಜುಮೇಲಿಯನ ಕಣ್ಣುಗಳಿಂದ ನೀರು ವರ್ಷಾಕಾಲದ ಪ್ರವಾಹದಂತೆ ಉಕ್ಕಿ ಹರಿಯಿತು. ಬಳಿಕ ಜುಮೇಲಿ ಯನು ತನಗೆ ತಾನೇ ಬುದ್ಧಿ ಹೇಳಿಕೊಂಡು ಲಲಿತನನ್ನು ಕುರಿತು— ಲಲಿತ ಮಹಾಶಯ! ಯುದ್ಧವಿಲ್ಲದೆಯೇ ಆಕೆಯನ್ನು ಕರೆತರಲು ಹೇಗೆ ಸಾಧ್ಯ? ತಮಗೆ ಏನು ಕಷ್ಟವಾದರೂ, ಇನ್ನೂ ಕೆಲವು ಕಾಲ ಹೀಗೆಯೇ ನಿರೀಕ್ಷಿಸೋಣವಾಗಲಿ. ನಾನು ತಮಗಾಗಿ ಎಲ್ಲವನ್ನೂ ಸಿದ್ಧಪಡಿ ಸುತ್ತಿರುವೆನು. ತಾವು ಈಯುಂಗುರವನ್ನು ಎಂದಾದರೂ ನೋಡಿದೋಣ ವಾಗಿದೆಯೇ? ಎಂದು ಹೇಳಿ ಉಂಗುರವನ್ನು ತೋರಿದನು.

ಲಲಿತನು ಜುಮೇಲಿಯನ ಬಳಿಯಲ್ಲಿದ್ದ ಮಾರವಾಡದ ರಾಜ ಮುದ್ರೆಯನ್ನು ನೋಡಿ ಪರಮಾನಂದ ಭರಿತನಾಗಿ ಹೋದನು. ಆ ಕೂಡ ಲೆಯೇ ಆತನು ಆವುಂಗುರವನ್ನು ಜುಮೇಲಿಯನಿಂದ ತೆಗೆದುಕೊಂಡು ತನ್ನ ಬೆರಳಿನಲ್ಲಿ ಧಾರಣಮಾಡಿ—ಜುಮೇಲಿಯಾ! ಇನ್ನು ಭಯವಿಲ್ಲ. ಈಯುಂಗುರವು ಅವನ ಕೈಯಲ್ಲಿರುವುದೋ ಆತನೇ ಮಾರವಾಡದ ಮಹಾ ರಾಣನು. ಪುರಪ್ರಮುಖರು ರಾಜನಿಗಿಂತಲೂ ರಾಜಮುದ್ರೆಗೆ ಹೆಚ್ಚಿನ

ಗೌರವವನ್ನು ತೋರುವರು. ಜುಮೇಲಿಯಾ! ನಾನು ಪುರಪ್ರಮುಖರನ್ನು ಇಂತಹ ಸಂದರ್ಭದಲ್ಲಿ ಹೇಗೆ ನೋಡಲು ಸಾಧ್ಯವಹುದು? ಎಂದು ಕೇಳಿದನು.

ಜುಮೇ—ನಾನು ಎಲ್ಲವನ್ನೂ ಸರಿಯಾಗಿಯೇ ಏರ್ಪಡಿಸಿರುವೆನು. ಇನ್ನು ಎರಡು ಮೂರು ದಿನಗಳೊಳಗಾಗಿ ಈ ದೇವತಾಮಂದಿರದ ಬಳಿಯಲ್ಲಿ ಐವತ್ತು ಸಾವಿರ ಭಿಲ್ಲ ಸೈನಿಕರು ಯುದ್ಧಕ್ಕೆ ಸಿದ್ಧರಾಗಿ ನಿಮಗೋಸುಗ ಪ್ರಾಣಬಿಡಲು ಇಲ್ಲಿಗೆ ಬರುವವರಾಗಿರುವರು. ಆದರೆ—

ಲಲಿತ—ಆದರೆ, ಎಂಬ ಅರ್ಧೋಕ್ತಿಯ ತಾತ್ಪರ್ಯವೇನು? ಬೇಗ ತಿಳಿಸೋಣವಾಗಲಿ. ನಾನು ಕಾಲವಿಲಂಬವನ್ನು ಸಹಿಸಲಾರದವನಾಗಿರುವೆನು, ಜುಮೇಲಿಯಾ!

ಜುಮೇ—ಭಿಲ್ಲ ಜಾತಿಯ ಹುಚ್ಚಿಯೊಬ್ಬಳಿರುವರು. ಆಕೆಯನ್ನು ತಾವು ಬಲ್ಲಿರಾ?

ಲಲಿತ—ಭಿಲ್ಲರ ಕಾತ್ಯಾಯನಿಯೇ?

ಜುಮೇ—ಅಹುದು, ಭಿಲ್ಲರ ಕಾತ್ಯಾಯನಿ. ಭಿಲ್ಲರೆಲ್ಲರೂ ಆಕೆಯನ್ನು ದೇವತೆಯೆಂದು ತಿಳಿದಿರುವರು. ತಾವು ಆಕೆಯನ್ನು ಮದುವೆಯಾಗಬೇಕು.

ಲಲಿತ—ಅದೇಕೆ?

ಜುಮೇ—ತಾವು ಆಕೆಯನ್ನು ಮದುವೆಯಾದರೇ, ಭಿಲ್ಲರು ತಮಗಾಗಿ ಪ್ರಾಣ ಕೊಡುವರು.

ಲಲಿತ—ನಾನು ಮದುವೆಯಾಗೆನು. ಹುಚ್ಚಿಯನ್ನು ಮದುವೆಯಾಗುವುದೆಂದರೇನು?

ಜುಮೇ—ಹುಚ್ಚಿಯು ಭಿಲ್ಲರ ದೇವತೆಯು. ತಾವು ಹುಚ್ಚಿಯನ್ನು ಬಿಟ್ಟು ದೇವತೆಯನ್ನು ವರಿಸೋಣವಾಗಲಿ.

ಲಲಿತ—(ಪರ್ಯಾಲೋಚಿಸಿ) ಹುಚ್ಚಿಯ ಸೆರೆಯನ್ನು ಬಿಡಿಸುವುದಕ್ಕಾಗಿ ಆಕೆಯೊಡನೆ ನಾಮ ಮಾತ್ರ ವಿವಾಹವಾಗುವುದಾದರೆ, ಆಗಲಿ. ನಾನು ಕುಮುದಿನಿಗಾಗಿ ಆವ ಕೆಲಸವನ್ನಾದರೂ ಮಾಡಬಲ್ಲವನಾಗಿರುವೆನು.

ಜುಮೇ—ಲಲಿತ ಮಹಾಶಯ! ಲೋಕದಲ್ಲಿ ಆರು ತಾನೇ ಹೆಂಡಿತಿಯನ್ನು ಪ್ರೀತಿಸುವುದಿಲ್ಲ. ಅದರಲ್ಲಿಯೂ ತಮ್ಮಂತಹ ಸದಾಶಯರ ಸ್ವಭಾವವನ್ನು ಕುರಿತು ಹೇಳತಕ್ಕುದೇನಿರುವುದು? ಏತಕೆಂದರೆ– ತಾವು ವಿವಾಹಿತೆಯಾದ ಕುಮುದಿನಿಯನ್ನು ಆವ ರೀತಿಯಲ್ಲಿ ಪ್ರೀತಿಸುತ್ತಿರುವಿರೆಂಬುದನ್ನು ನಾನು ಚೆನ್ನಾಗಿಯೂ ಬಲ್ಲೆನು. ತಮ್ಮ ಪ್ರೀತಿಯು ನಿರ್ದುಷ್ಟವಾದುದು ; ತಮ್ಮ ಪ್ರೀತಿಯು ಸತ್ಯವಾದುದು. ತಾವು ಹುಚ್ಚಿಯನ್ನು ವರಿಸಿ ಆಕೆಯನ್ನು ಪ್ರೀತಿಸಕೂಡದೇನು? ಹುಚ್ಚಿಯಾದ ಮಾತ್ರಕ್ಕೆ ಅವಳಿಗೆ ಹೃದಯವಿಲ್ಲವೇ? ಅವಳಿಗೆ ಪತಿಯೆಂಬ ಅಭಿಮಾನವಿರುವುದಿಲ್ಲವೇ? ಹುಚ್ಚಿಯೂ ತಮ್ಮನ್ನು ಪ್ರೀತಿಸುವಳು. ತಾವೂ ಆಕೆಯನ್ನು ಅತಿಶಯವಾಗಿಯೇ ಪ್ರೀತಿಸೋಣವಾಗುವುದು.

ಲಲಿತ—ಮಿತ್ರನೇ! ಪ್ರೀತಿಯ ಮರ್ಮವನ್ನು ನೀನೇನು ಬಲ್ಲೆ? ನೀನು ಆವಾಗಲಾದರೂ ಆರನ್ನಾದರೂ ಪ್ರೀತಿಸಿದ್ದ ಪಕ್ಷದಲ್ಲಿ, ನಿನಗೆ ನಿಜವಾದ ಪ್ರೀತಿಯೆಂಥದೆಂಬುದು ಗೋಚರಿಸುತ್ತಿದ್ದಿತು. ನನ್ನ ಪ್ರೀತಿಯ ಸ್ವರೂಪವನ್ನು ಈಗ ಹೇಗೆ ವರ್ಣಿಸಲಿ?

ಜುಮೇಲಿಯನ ಕಣ್ಣುಗಳಲ್ಲಿ ತಟ್ಟನೆ ನೀರು ತುಂಬಿತು. ಆತನ ದೇಹವೆಲ್ಲವೂ ಸಾತ್ವಿಕಭಾವದಿಂದ ಥರಥರನೆ ನಡುಗಿತು. ಇದನ್ನು ನೋಡಿ ಲಲಿತನು—ಇದೇನು, ಜುಮೇಲಿಯಾ! ನೀನು ಹೀಗೆ ಅಳುತ್ತಿರುವೆ? ಎಂದು ಪಶ್ನೆ ಮಾಡಿದನು.

ಜುಮೇ—ಇಲ್ಲ, ನಾನೇನೂ ಅಳುತ್ತಿಲ್ಲ. ಅಳುವುದಕ್ಕೆ ಕಾರಣ ತಾನೇ ಏನಿರುವುದು? ನನ್ನ ಕಣ್ಣಿನಲ್ಲಿ ಧೂಳು ಬಿದ್ದಿತಾದುದರಿಂದ, ನೀರು ಬಂದಿರಬಹುದು.

ಜುಮೋಲಿಯನು ಹೀಗೆ ಹೇಳಿ ಅಲ್ಲಿ ಒಂದು ಕ್ಷಣಕಾಲವೂ ನಿಲ್ಲದೆ ಬೇರೆಯ ಕಡೆಗೆ ಹೊರಟು ಹೋದನು. ಲಲಿತನು ಇದನ್ನು ಬಲು ಹೊತ್ತು ಎವೆಯಿಕ್ಕದೆ ನೋಡುತ್ತಾ ಕುಳಿತಿದ್ದ ಬಳಿಕ, ತನ್ನಲ್ಲಿ ತಾನೇ 'ಜುಮೋಲಿಯಾ! ನಿನ್ನ ಹೃದಯವನ್ನು ನಾನು ಇಷ್ಟು ದಿನಗಳಾದರೂ ಅರಿಯಲಾರದವನಾಗಿರುವೆನು,' ಎಂದುಕೊಂಡನು.

---

## ನಲವತ್ತನಾಲ್ಕನೆಯ ವಿಲಾಸ

ಐವತ್ತು ಸಾವಿರ ಭಿಲ್ಲ ಸೈನಿಕರು ದೇವತಾಮಂದಿರದ ಸುತ್ತಲೂ ಠಾಣ್ಯವನ್ನು ಹೂಡಿರುವರು. ನೋಡಿದರೆ, ಮಂದಿರದ ಸುತ್ತಲೂ ಒಂದು ದೊಡ್ಡ ನಗರವೇ ಹೊಸವಾಗಿ ಸೃಷ್ಟವಾದಂತೆ ತೋರಿಬರುತ್ತಿರುವುದು. ಭಿಲ್ಲರು ಯುದ್ಧಕ್ಕೆಂದು ಶಸ್ತ್ರಪಾಣಿಗಳಾಗಿ ಬಂದಿದ್ದುದರಿಂದ, ಅವರ ಬಳಿಯಲ್ಲಿ ೫೦೦ ಆನೆಗಳೂ ೫೦೦೦ ಕುದುರೆಗಳೂ ಇದ್ದುವು. ಅಲ್ಲದೆಯೂ ಸೈನಿಕರು ತಮ್ಮ ಸಂಗಡ ಒಂದು ತಿಂಗಳಿಗೆ ಸಾಕಾಗುವಷ್ಟು ಆಹಾರ ಸಾಮಗ್ರಿಗಳನ್ನೂ ತಂದು ಕೊಂಡಿದ್ದರು. ಆದುದರಿಂದ ಭಿಲ್ಲರಿಗೆ ಆವ ಆತಂಕವೂ ಇರಲಿಲ್ಲ.

ಭಿಲ್ಲರೆಲ್ಲರೂ ದೇವೀ ಮಂದಿರದ ಸುತ್ತಲೂ ಬೀಡಾರಗಳನ್ನು ಕಲ್ಪಿಸಿಕೊಂಡು ವಾಸಮಾಡುತ್ತಾ ಜುಮೋಲಿಯನನ್ನು ನಿರೀಕ್ಷಿಸಿಕೊಂಡಿರುತ್ತಿದ್ದರು. ಈ ಸಲದ ಸಮಾವೇಶದಲ್ಲಿ ಭಿಲ್ಲರ ಕಾತ್ಯಾಯನಿಯ ಸುಳಿವೇ ಇರಲಿಲ್ಲ. ಆಕೆಗೆ ಪ್ರತಿಯಾಗಿ ಮಂದಿರದಲ್ಲಿದ್ದ ಜುಮೋಲಿಯನೇ ಅವರ ಕಣ್ಣಿಗೆ ಕಾಣಿಸಿಕೊಂಡನು. ಆತನೇ ಇದ್ದುಕೊಂಡು ಭಿಲ್ಲರಿಗೆ ಶಿಬಿರ ಸನ್ನಿವೇಶಗಳನ್ನು ಕಲ್ಪಿಸಿಕೊಡುತ್ತಿದ್ದನು. ಆರಿಗೆ ಆವ ರೀತಿಯಾಗಿರಲು ಇಷ್ಟವೋ, ಅವರಿಗೆ ಅದೇ ರೀತಿಯಲ್ಲಿಯೇ ಅನುಕೂಲ್ಯಗಳು ಏರ್ಪಾಡಾಗುತ್ತಿದ್ದುವು. ಆರಿಗೆ ಯುದ್ಧವಿದ್ಯೆಯಲ್ಲಿ ಪರಿಚಯವಿಲ್ಲವೋ, ಅಂತಹವರಿಗೆ ಜುಮೋಲಿಯನು ತಾನೇ ನಿಂತುಕೊಂಡು ಯುದ್ಧದ ಪ್ರಕ್ರಮವನ್ನು ಕಲಿಸುತ್ತಿದ್ದನು. ಆರಲ್ಲಿ ಆವ ಅಸ್ತ್ರಗಳಿಲ್ಲವೋ, ಅವರಿಗೆ ಆ ಅಸ್ತ್ರಗಳನ್ನು ಹವಣಿಸಿಕೊಡುತ್ತಿದ್ದನು. ಜುಮೋಲಿಯನ ಬಳಿಯಲ್ಲಿ

ಶಸ್ತ್ರಾಸ್ತ್ರಗಳೆಲ್ಲಿದ್ದುವೆಂದು ಆರಾದರೂ ಪ್ರಶ್ನೆಮಾಡುವುದಾದರೆ, ಜುಮೋಲಿಯನು ದೇವೀ ಮಂದಿರದ ಹಿಂಗಡೆಯಲ್ಲಿದ್ದ ಗೃಹದಲ್ಲಿ ಅಪರಿಮಿತವಾಗಿ ಆಯುಧಗಳನ್ನು ಬಹು ಕಾಲದಿಂದಲೂ ಸಂಗ್ರಹ ಮಾಡಿಟ್ಟುಕೊಂಡಿರುತಿದ್ದನು. ಜುಮೋಲಿಯನು ಸೈನಿಕರಿಗೆ ಅಸ್ತ್ರಗಳನ್ನು ಕೊಟ್ಟುದು ಮಾತ್ರವೇ ಅಲ್ಲದೆ, ಅವುಗಳ ಪ್ರಯೋಗೋಪಸಂಹಾರ ಕ್ರಮಗಳನ್ನೂ ಸ್ಪಷ್ಟವಾಗಿ ಕಲಿಸಿಕೊಟ್ಟನು. ಈ ಸಲದ ಜುಮೋಲಿಯನು ಭಿಲ್ಲರಾಜನಾಗಿರದೇ ಭಿಲ್ಲರೆಲ್ಲರಿಗೂ ಸರ್ವ ಪ್ರಧಾನ ಸೇನಾಪತಿಯಾಗಿಬಿಟ್ಟಿದ್ದನು.

ಅಸಭ್ಯಜಾತಿಗೆ ಸೇರಿದ ಭಿಲ್ಲರು ಯುದ್ಧದ ಪರಿಪಾಟಿಯನ್ನೇ ಅರಿಯದವರು. ವಂಶಾನುಕ್ರಮವಾಗಿ ಬೆಟ್ಟಗುಡ್ಡಗಳಲ್ಲಿಯೇ ವಾಸವಾಗಿರುತ್ತಿದ್ದ ಭಿಲ್ಲರಿಗೆ ಕ್ರಮಯುದ್ಧದ ನೀತಿರೀತಿಗಳು ಹೇಗೆ ಗೊತ್ತಾಗಬೇಕು? ಕ್ರಮಯುದ್ಧದ ಲಕ್ಷಣವನ್ನು ಅರಿಯದಿದ್ದರೂ ಅವರು ಬಲಿಷ್ಠರೂ, ಸಾಹಸಿಗಳೂ, ಪರಾಕ್ರಮಿಣ ಧುರೀಣರೂ ಆಗಿದ್ದರು. ಅವರು ಆವಾಗಲೂ ಭಯವೆಂಬುದನ್ನೇ ಅರಿಯರು. ಈ ಅಸಭ್ಯ ಜನ ಸಾಮಾನ್ಯವಾದ ನಿರ್ಭೀಕತೆಯಿಂದ, ಎಂತಹ ಪ್ರಬಲವಾದ ಸೈನ್ಯವನ್ನಾದರೂ ಭಯಭೀತರನ್ನಾಗಿ ಮಾಡಿ ಚದರಿಸಿಬಿಡುವುದರಲ್ಲಿ ಚತುರರಾಗಿದ್ದರು.

ಈ ಸಮಯದಲ್ಲಿ ಜುಮೋಲಿಯನ ಉಪದೇಶಬಲದಿಂದ ಅವರ ಶಕ್ತಿಸಾಹಸಗಳು ನೂರ್ಮಡಿಯಾಗಿ ಹೋಗಿರುವುವು. ಅಲ್ಪ ಕಾಲದ ಶಿಕ್ಷಣದಿಂದಲೇ ಭಿಲ್ಲರೆಲ್ಲರೂ ಸುಶಿಕ್ಷಿತರಾದ ಸೈನಿಕರಾಗಿ ಯುದ್ಧವು ಆವಾಗ ಸಂಭವಿಸುವುದೋ ಎಂದು ತಹತಹ ಪಡುತಿದ್ದರು. ಹೀಗೆಯೇ ಒಂದು ವಾರದ ಕಾಲವು ಕಳೆದು ಹೋಯಿತು.

ದಿನಗಳು ಕಳೆದ ಹಾಗೆಲ್ಲಾ 'ಮಾರವಾಡಕ್ಕೆ ಹೋಗಬೇಕು. ಮಾರವಾಡದ ಸೈನ್ಯದೊಡನೆ ಯುದ್ಧಮಾಡಬೇಕು, ಮಹಾರಾಜಸಿಂಹನನ್ನು ಸಿಂಹಾಸನದಿಂದ ಕೆಳಗುರುಳಿಸಬೇಕು, ಯುವರಾಜ ಲಲಿತಸಿಂಹನನ್ನು ಮಾರವಾಡದ ಮಹಾರಾಣನನ್ನಾಗಿ ಮಾಡಬೇಕು' ಎಂಬ ವಿಷಯವು ಕ್ರಮಕ್ರಮವಾಗಿ ಹೇಗೋ ಭಿಲ್ಲರ ಸೈನ್ಯದವರಿಗೆ ಗೋಚರ

ವಾಗುತ್ತಾ ಬಂದಿತು. ಈ ಸುದ್ದಿಯಿಂದ ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಏತಕೆಂದರೆ—ಪರಹಿಂಸಾ ಪರಾಯಣತೆಯಿಂದ ದುರ್ದಾಂತನಾದ ಮಹಾರಾಜಸಿಂಹನನ್ನು ಧ್ವಂಸಮಾಡಬೇಕೆಂಬುದೇ ಭಿಲ್ಲರ ಪರಮೋದ್ದೇಶವಾಗಿದ್ದುದರಿಂದ, ಮಾರವಾಡದ ಮೇಲೆ ಯುದ್ಧಕ್ಕೆ ತೆರಳುವುದು ಅವರಿಗೆ ಇಷ್ಟವಾದ ಕೆಲಸವೇ ಆಗಿದ್ದಿತು. ಇದರ ಮೇಲೂ ಅವರಿಗೆ ಮಾರವಾಡದ ಸೈನಿಕರ ಮೇಲೆ ಪ್ರಬಲವಾದ ಆಗ್ರಹವೂ ಇದ್ದಿತು. ಇದಕ್ಕೆ ಕಾರಣವೇನೆಂದರೆ—ಮಹಾರಾಜಸಿಂಹನ ಆಜ್ಞಾನುಸಾರವಾಗಿ ಆತನ ಸೈನಿಕರು ಜುಮೇಲಿಯನನ್ನೂ ಭಿಲ್ಲರ ಕಾತ್ಯಾಯನಿಯನ್ನೂ ಹಿಡಿದುಕೊಂಡು ಹೋಗಬೇಕೆಂದು ಭಿಲ್ಲರಾಜ್ಯದೊಳಗೆ ನುಗ್ಗಿ ಗ್ರಾಮಗಳನ್ನು ಲೂಟಿಮಾಡಿ ಮನೆಗಳನ್ನು ಸುಟ್ಟು ದುರ್ಬಲರನ್ನೂ, ಮಕ್ಕಳನ್ನೂ, ಹೆಂಗುಸರನ್ನೂ, ಶಿಶುಗಳನ್ನೂ ನಿರ್ದಯರಾಗಿ ಕೊಂದಿದ್ದರು. ಅವರ ಅತ್ಯಾಚಾರವು ತಡೆಯಲು ಅಸಾಧ್ಯವಾಗಿ ಹೋಗಿದ್ದಿತು. ಜುಮೇಲಿಯನ ಅಪ್ಪಣೆಯಾಗಿರಲಿಲ್ಲವಾಗಿ ಭಿಲ್ಲರೆಲ್ಲರೂ ಬಾಯಿ ಮುಚ್ಚಿಕೊಂಡು ಶತ್ರುಗಳ ಬಾಧೆಗಳೆಲ್ಲವನ್ನೂ ಸಹಿಸಿಕೊಂಡು ಬಂದರು. ಇಂದು ವೈರ ನಿರ್ಯಾತನಕ್ಕೆ ಸರಿಯಾದ ಕಾಲವು ಒದಗಿ ಬಂದಿರುವುದಕ್ಕಾಗಿ ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಈ ತೆರನಾದ ಸಂತೋಷದಿಂದ ಭಿಲ್ಲರು ಮೈಯ್ಯುಬ್ಬಿದವರಾಗಿ ಮತ್ತೆ ಕೆಲವು ದಿನಗಳನ್ನು ಕಳೆಯ ಲಾರಂಭಿಸಿದರು.

ಹೀಗಿರಲೊಂದು ದಿನ ಮಂದಿರದ ಒಳಗಡೆಯಿಂದ ವೇಣುನಾದವು ಕೇಳಿ ಬರಲಾರಂಭಿಸಿತು. ಜುಮೇಲಿಯನು ಒಳಗೇ ಕುಳಿತುಕೊಂಡು ಮನೋಹರವಾಗಿ ವೇಣುಗಾನ ಮಾಡುತ್ತಿರುವನು. ಯಮುನಾ ತೀರದಲ್ಲಿ ಶ್ರೀಕೃಷ್ಣಪರಮಾತ್ಮನ ಮುರಳೀನಿನಾದವನ್ನು ಕೇಳಿ ವ್ಯಾಕುಲಚಿತ್ತರಾದ ಗೋಪಗೋಪೀ ಜನರು ಯಾವ ರೀತಿಯಲ್ಲಿ ಕದಂಬವನವಾಟಿಯ ಕಡೆಗೆ ಆವುದನ್ನೂ ಲೆಕ್ಕಿಸದೆ ಓಡಿಹೋದರೋ, ಅದೇ ರೀತಿಯಲ್ಲಿಯೇ ಜುಮೇಲಿಯನ ವೇಣುಗಾನವನ್ನು ಕೇಳಿ ಭಿಲ್ಲರೆಲ್ಲರೂ ಅತ್ಯಾದರದಿಂದ ಮೈಮರೆತು ದೇವತಾಮಂದಿರದ ಬಾಗಿಲ ಬಳಿಯಲ್ಲಿ ಬಂದು ನಿಂತು ಗಾನಮಾಧುರ್ಯದ ಸುಖಾನುಭವ ಮಾಡಲಾರಂಭಿಸಿದರು. ಈ ಗಾನ

ವನ್ನು ಕೇಳಿದಾಗಿನಿಂದಲೂ ಅವರ ಧಮನಿಯಲ್ಲಿ ರಕ್ತವು ಅತಿವೇಗದಿಂದ ದರದರನೆ ಹರಿಯಲಾರಂಭವಾಯಿತು ; ಯುದ್ಧಾಭಿಲಾಷೆಯೂ ಅವರನ್ನು ಒಂದು ಕ್ಷಣಕಾಲವೂ ಸುಮ್ಮನೇ ಇರಗೊಡದೆ ಕುಣಿಸಿ ಬಿಟ್ಟಿತು.

ಈ ಸಮಯದಲ್ಲಿ ಮಂದಿರದ ಹೊರಬಾಗಿಲು ತೆರೆಯಲ್ಪಟ್ಟು, ಭಿಲ್ಲ ಬಾಲಕರಿಬ್ಬರು ಯುದ್ಧಪತಾಕೆಗಳನ್ನು ಹಿಡಿದುಕೊಂಡು ಹೊರಗೆ ಬಂದು ನಿಂತರು. ಭಿಲ್ಲರು ಈ ಪತಾಕೆಗಳನ್ನು ನೋಡಿದ ಕೂಡಲೆ ಆನಂದದಿಂದ ಜಯಧ್ವನಿಮಾಡಿದರು. ಆ ಜಯಧ್ವನಿಯು ಆ ಕಾನನದ ನಿಸ್ತಬ್ಧತೆಯನ್ನು ಭಂಗಪಡಿಸಿ ದಿಕ್ತಟಗಳಲ್ಲಿ ಪ್ರತಿಧ್ವನಿತವಾಗಿ ಅನಂತಧಾಮದಲ್ಲಿ ಲೀನವಾಗಿ ಹೋಯಿತು.

ಆಗ ಜುಮೇಲಿಯನು ಲಲಿತಸಿಂಹನ ಕೈಯನ್ನು ಹಿಡಿದುಕೊಂಡು ಮೆಲ್ಲ ಮೆಲ್ಲನೆ ಮಂದಿರದಿಂದ ಹೊರಗೆ ಬಂದನು. ಇದನ್ನು ನೋಡಿದ ಕೂಡಲೆ ಭಿಲ್ಲ ಸೈನಿಕರೆಲ್ಲರೂ ಗಗನ ಮಂಡಲವು ವಿದೀರ್ಣವಾಗಿ ಹೋಗುವಂತೆ ಜಯಧ್ವನಿಯನ್ನು ಮಾಡಿದರು.

---

## ನಲವತ್ತೈದನೆಯ ವಿಲಾಸ

ಜುಮೇಲಿಯನು ಮಂದಿರದ ಸೋಪಾನದ ಮೇಲೆ ನಿಂತುಕೊಂಡು ಭಿಲ್ಲರೆಲ್ಲರನ್ನೂ ಸಂಬೋಧಿಸಿ ಈ ರೀತಿಯಾಗಿ ಮಾತನಾಡಿದನು :—

"ಭಿಲ್ಲ ಮಹಾಜನಂಗಳಿರಾ! ಮತ್ತೆ ಒಂದು ವರ್ಷವು ಕಳೆದ ಬಳಿಕ, ನಾವು ನಿಮ್ಮೆಲ್ಲರನ್ನೂ ಯುದ್ಧಮಾಡುವುದಕ್ಕೆಂದು ಇಲ್ಲಿಗೆ ಬರಮಾಡಿಕೊಂಡಿರುವೆವು. ಮುಂದಣ ವರ್ಷದಲ್ಲಿ ಯುದ್ಧವು ಅವಶ್ಯಂಭಾವಿಯೆಂದು ಹಿಂದಣ ವರ್ಷದಲ್ಲಿ ತಿಳಿಸಿದ್ದ ಪ್ರಕಾರವಾಗಿ, ಈಗ ನಾವುಗಳೆಲ್ಲರೂ ಇಂದಿನ ದಿನದಲ್ಲಿ ಸೇರಿರುವೆವು. ಈಗ ನಾವು ಹೇಳುವುದಕ್ಕೆ ಬಂದುದೇನೆಂದರೆ—ಪ್ರಕೃತ ಮಾರವಾಡದ ಸಂಸ್ಥಾನದಲ್ಲಿ ವಿಪತ್ತಿನ ಮೇಲೆ ವಿಪತ್ತುಂಟಾಗುತ್ತಿರುವುದು. ದುರಂತ ಪರಿಣಾಮವುಳ್ಳ ದುರ್ದಾಂತನಾದ ಮಹಾರಾಜಸಿಂಹನು ವೃದ್ಧನಾದ ಮಹಾರಾಣ ಅಮರಸಿಂಹ

ನನ್ನು ಕೊಲೆ ಮಾಡಿ ತಾನೇ ಮಾರವಾಡದ ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರಮಾಡುತ್ತಿರುವನು. ಆತನ ಅತ್ಯಾಚಾರ, ಅನಾಚಾರ, ಅವಿಚಾರಗಳೆಂಬ ಅನರ್ಥತ್ರಯವು ನಿಮಗೆ ತಿಳಿಯದೇ ಇರತಕ್ಕ ವಿಷಯವೇನೂ ಅಲ್ಲ. ನಿಮ್ಮಗಳ ಇದಿರಿನಲ್ಲಿ ನಿಂತಿರತಕ್ಕ ಈ ಯುವರಾಜ ಲಲಿತಸಿಂಹನೇ ಮಾರವಾಡದ ಧರ್ಮಸಮ್ಮತನಾದ ಮಹಾರಾಣನು.''

ಈ ಮಾತನ್ನು ಕೇಳಿದ ಭಿಲ್ಲರು 'ಮಹಾರಾಣ ಲಲಿತಸಿಂಹಕೀ ಜಯ' ಎಂದು ಜಯ ಘೋಷಮಾಡಿದರು. ಜುಮೇಲಿಯನು ಮತ್ತೆ ಮಾತನಾಡಿದನು :—

"ಆರಿಗೆ ನ್ಯಾಯವಾಗಿಯೂ ಸಿಂಹಾಸನವು ದೊರೆಯ ಬೇಕೋ ಆತನು ರಾಜ್ಯಭ್ರಷ್ಟನಾಗಿ ಬೀದಿಯ ಬಿಕಾರಿಯಂತೆ ಅಲೆಯುತ್ತಿರುವನು. ಆತನು ನಿಮ್ಮಗಳ ಸಾಹಾಯ್ಯವನ್ನು ಬೇಡುವುದಕ್ಕಾಗಿ ಇಂದಿನ ದಿನ ನಿಮ್ಮಿದಿರಿನಲ್ಲಿ ಬಂದು ನಿಂದಿರುವನು. ನೀವುಗಳು ಆತನಿಗೆ ಒತ್ತಾಸೆಯಾಗಿರುವುದಕ್ಕೆ ಇಷ್ಟವುಳ್ಳವರಾಗಿರುವಿರೆಂದು ನಾವು ನಂಬಿರುವೆವು.''

ಜುಮೇಲಿಯನು ಇಷ್ಟು ಹೇಳಿ ಸುಮ್ಮನಾದ ಕೂಡಲೆ, ನಾಲ್ಕು ದಿಕ್ಕುಗಳಿಂದಲೂ 'ಮಹಾ ಪ್ರಭೂ! ಪ್ರಾಣವನ್ನಾದರೂ ಕೊಡುವೆವು. ಲಲಿತಸಿಂಹನಿಗಾಗಿ ನಾವುಗಳೆಲ್ಲರೂ ಸಾಯಲು ಸಿದ್ಧರಾಗಿಯೇ ಬಂದಿರುವೆವು. ಪಾಮರನಾದ ಮಹಾರಾಜಸಿಂಹನ ತಲೆಯನ್ನು ಚೆಂಡಾಡಿಬಿಡುವೆವು. ಅಪ್ಪಣೆಯಾಗಲಿ' ಎಂಬ ಶಬ್ದವು ಎದ್ದು ಸ್ಥಾವರ ಪ್ರಪಂಚದಲ್ಲಿ ಜೀವ ಕಳೆಯನ್ನು ತುಂಬಿಬಿಟ್ಟಿತು.

ಜುಮೇ—ಹಾಗಾದರೆ ನಾವುಗಳೆಲ್ಲರೂ ಮಾರವಾಡದ ಕಲಂಕವನ್ನು ಹೋಗಲಾಡಿಸುವುದಕ್ಕಾಗಿ ಅಲ್ಲಿಗೆ ತೆರಳೋಣ.

ಸೈನಿಕರು—(ಸಿಂಹನಾದ ಮಾಡುತ್ತಾ) ಮಹಾ ಪ್ರಭೂ! ತೆರಳೋಣವಾಗಲಿ. ಕಾಲಹರಣಕ್ಕೆಡೆಗೊಡದೆ, ಇಂದೇ ನಾವೆಲ್ಲರೂ ಅಲ್ಲಿಗೆ ತೆರಳುವೆವು.

ಜುಮೇ—ಭಿಲ್ಲ ಮಹಾಶಯರಿರಾ! ನಿಮ್ಮಲ್ಲಿ ಮತ್ತೊಂದು ಸಂತೋಷದ ಸುದ್ದಿಯನ್ನು ತಿಳಿಸಬೇಕೆಂದಿರುವೆವು. ಯುವರಾಜ ಲಲಿತ ಸಿಂಹನು ನಿಮ್ಮಗಳೊಡನೆ ಸಂಬಂಧವನ್ನು ಬಳೆಯಿಸುವುದಕ್ಕೋಸ್ಕರ ಶ್ರೀ ಪರಮಾನಂದ ಸ್ವಾಮಿಗಳವರ ಅಪ್ಪಣೆಗೆ ಅನುಸಾರವಾಗಿ ಭಿಲ್ಲರ ಕಾತ್ಯಾಯನಿಯನ್ನು ಮದುವೆಯಾಗುವುದಕ್ಕೆ ಇಷ್ಟಪಟ್ಟಿರುವನು. ಇಂದಿನ ವರೆಗೂ ಮಾರವಾಡದ ಸಿಂಹಾಸನಾಧಿಪತಿಗಳಿಗೂ ನಿಮಗೂ ಘನೀಭೂತ ವಾದ ಆವ ಸಂಬಂಧವೂ ಇರಲಿಲ್ಲ. ಇಂದು ಮೊದಲು ಆ ಸಂಬಂಧ ವನ್ನು ಸ್ಥಿರೀಕರಿಸುವುದಕ್ಕಾಗಿ ನಮ್ಮ ಲಲಿತಸಿಂಹ ಮಹಾಶಯನು ಮುಂದು ವರಿದು ಬಂದು ನಿಂದಿರುವನು. ಇಂದು ಮೊದಲು ನಿಮ್ಮ ಭಿಲ್ಲರ ಕಾತ್ಯಾಯನಿಯು ಮಾರವಾಡದ ಮಹಾರಾಣಿಯಾಗುವಳು.

ಈ ಸಂತೋಷದ ಸುದ್ದಿಯನ್ನು ಕೇಳಿದ ಕೂಡಲೆ ಭಿಲ್ಲರೆಲ್ಲರೂ ಆನಂದದಿಂದ 'ಕಾತ್ಯಾಯನೀ ಮಾಯಿಾಕಿ ಜಯ' ಎಂದು ಮತ್ತೆ ಜಯ ಘೋಷಮಾಡಿದರು. ಎಲ್ಲರ ಬಾಯಿಂದಲೂ ಹೊರಟ ಈ ಜಯಧ್ವನಿಯು ಪ್ರಪಂಚವನ್ನು ನಾದಬ್ರಹ್ಮಮಯವನ್ನಾಗಿ ಮಾಡಿಬಿಟ್ಟಿತು. ಜಯ ಘೋಷವು ಕಡಮೆಯಾದ ಬಳಿಕ ಜುಮೇಲಿಯನು ಮತ್ತೆ ಇಂತೆಂದನು:-

"ನಾಳೆಯ ಬೆಳಗ್ಗೆ ಶ್ರೀಗುರು ಮಹಾಶಯರು ಕಾತ್ಯಾಯನಿ ಯನ್ನು ಕರೆದುಕೊಂಡು ಈ ಮಂದಿರಕ್ಕೆ ಬಿಜಯಮಾಡಿಸುವರು. ಬಳಿಕ ನಿಮ್ಮಗಳ ಇದಿರಿನಲ್ಲಿಯೇ ಲಲಿತಸಿಂಹನಿಗೂ ಕಾತ್ಯಾಯನಿಗೂ ವಿವಾಹ ಮಹೋತ್ಸವವು ಅತಿವೈಭವದಿಂದ ನೆರವೇರತಕ್ಕುದಾಗಿರುವುದು. ವಿವಾಹ ಮಹೋತ್ಸವವು ಸಾಂಗವಾಗಿ ನೆರವೇರಿದ ಬಳಿಕ, ನಾವುಗಳೆಲ್ಲರೂ ಸೇರಿ ಕೊಂಡು ಕಾಳಿಕಾಂಬಿಕೆಗೆ ಮನದಣಿಯೆ ಪೂಜೆಗೈದು ಮಾರವಾಡಕ್ಕೆ ಯಾತ್ರೆ ತೆರಳುವ. ಮುಂದೆ ಮಾಡಬೇಕಾದುದೇನೆಂಬುದನ್ನು ಚೆನ್ನಾ ಗಿಯೂ ಬಲ್ಲ ನಿಮಗೆ ಮತ್ತೇನೂ ತಿಳಿಸಬೇಕಾದುದಿರುವುದಿಲ್ಲ. ನಾನು ಕಲಿಸಿಕೊಟ್ಟ ರೀತಿಯಲ್ಲಿ ನೀವುಗಳೆಲ್ಲರೂ ಯುದ್ಧಮಾಡಿ ಮಹಾರಾಜ ಸಿಂಹನನ್ನು ಅಡಗಿಸುವುದಾದರೆ, ನಮ್ಮ ಪ್ರಯತ್ನವೆಲ್ಲವೂ ಸಾರ್ಥಕ ವಾಗುವುದು. ಇನ್ನು ನಾನು ನಿಮ್ಮ ರಾಜನೂ ಅಲ್ಲ, ಸೇನಾಪತಿಯೂ ಅಲ್ಲ. ಇಂದಿನಿಂದ ಲಲಿತಸಿಂಹನೇ ನಿಮ್ಮೆಲ್ಲರ ರಾಜನೂ ಸೇನಾಪತಿಯೂ

ಆಗಿರುವನು. ನಾನಾದರೋ ಈಗಳಿಂದಲೇ ಲಲಿತಸಿಂಹನ ದಾಸಾನು ದಾಸನಾಗಿಬಿಟ್ಟಿರುವೆನು. ನೀವುಗಳೆಲ್ಲರೂ ಲಲಿತಸಿಂಹನ ಆಜ್ಞೆಯನ್ನು ಪಾಲನಮಾಡಿಕೊಂಡು ಆತನಿಗಾಗಿ ಪ್ರಾಣವನ್ನಾದರೂ ಒಪ್ಪಿಸಿ ನಿಮ್ಮ ಕುಲಗೌರವವನ್ನು ಹೆಚ್ಚಿಸಿಕೊಳ್ಳುವಿರೆಂದು ನಾವು ದೃಢವಾಗಿಯೂ ನಂಬಿರುವೆವು.

ನಾನು ಈಗಳೇ ಮಾರವಾಡಕ್ಕೆ ಹೋಗಿ ಅಲ್ಲಿ ಮಾಡಬೇಕಾದು ದನ್ನು ಮೊದಲೇ ಸರಿಪಡಿಸಿಟ್ಟುಕೊಳ್ಳುವೆನು. ನೀವುಗಳೆಲ್ಲರೂ ಲಲಿತ ಸಿಂಹನನ್ನು ಮುಂದಿಟ್ಟುಕೊಂಡು ಎರಡು ದಿನಗಳಾದ ಬಳಿಕ ಮಾರ ವಾಡಕ್ಕೆ ಪಯಣ ಬಳೆಯಿಸಿರಿ. ಭಗವತಿಯು ನಿಮಗೆ ಮಂಗಳವನ್ನುಂಟು ಮಾಡಲಿ.''

ಜುಮೇಲಿಯನು ಹೀಗೆ ಹೇಳಿ ಸುಮ್ಮನಾದ ಬಳಿಕ ಭಿಲ್ಲರೆಲ್ಲರೂ ಕಾಳಿಕಾಂಬಿಕೆಗೆ ನಮಸ್ಕರಿಸಿ ಈ ರೀತಿಯಾಗಿ ಪ್ರಾರ್ಥಿಸಿಕೊಂಡರು :—
'' ತಾಯೆ ! ನಿನ್ನಿದಿರಿನಲ್ಲಿ ಈಗ ಪ್ರತಿಜ್ಞೆಮಾಡುವೆವು. ಪ್ರತಿಜ್ಞೆಯನ್ನು ನೆರವೇರಿಸುವುದಕ್ಕೆ ನಮಗೆ ಶಕ್ತಿಯನ್ನು ದಯೆಪಾಲಿಸು. ತಾಯೆ ! ಈಗ ಯುದ್ಧಕ್ಕೆ ತೆರಳುವವರಾಗಿರುವೆವು. ಯುದ್ಧದಲ್ಲಿ ಗೆದ್ದರೆ ಹಿಂ ದಿರುಗಿ ಬರುವೆವು; ಇಲ್ಲವಾದರೆ ಯುದ್ಧದಲ್ಲಿಯೇ ಮಡಿದು ವೀರ ಸ್ವರ್ಗಕ್ಕಾದರೂ ತೆರಳುವೆವು. ಪರಾಜಯವನ್ನು ಹೊದ್ದಿ ಹಿಂದಿರುಗಿ ಬಂದು ನಿನ್ನ ದರ್ಶನವನ್ನು ತೆಗೆದುಕೊಳ್ಳಲಾರೆವು. ಅದು ಕಾರಣ ನಮ್ಮ ಮಹಾರಾಣ ಲಲಿತಸಿಂಹನು ಯುದ್ಧದಲ್ಲಿ ಜಯಶೀಲನಾಗುವಂತೆ ವರ ವನ್ನು ದಯೆಪಾಲಿಸು, ಮಾತಾಯೆ ! ''

ಭಿಲ್ಲರು ಹೀಗೆ ಪ್ರಾರ್ಥಿಸಿಕೊಂಡ ಬಳಿಕ, ಲಲಿತಸಿಂಹನು ಮಾತ ನಾಡಿದನು :—

'' ಭಿಲ್ಲಸೈನಿಕ ಮಹಾಶಯ ! ನಿಮ್ಮಗಳ ವೀರಪ್ರತಿಜ್ಞೆಗಾಗಿ ನಾನು ನಿಮ್ಮಲ್ಲಿ ಚಿರ ಋಣಿಯಾಗಿರುವೆನು. ಮುಂದಣ ಸಮಯಗಳಲ್ಲಿ ನಾನು ನನ್ನ ಕೃತಜ್ಞತೆಯನ್ನು ತೋರ್ಪಡಿಸಿಕೊಳ್ಳುವೆನು.''

'ಮಹಾರಾಣ ಲಲಿತಸಿಂಹಕೀ ಜಯ' ಎಂದು ಭಿಲ್ಲರು ಮತ್ತೆ ಮತ್ತೆ ಜಯಧ್ವನಿಯನ್ನು ಮಾಡಿದರು.

ಅದೇ ದಿನದ ರಾತ್ರಿಯಲ್ಲಿ ಜುಮೇಲಿಯನು ದೇವ ಮಂದಿರವನ್ನು ತ್ಯಾಗಮಾಡಿ ಮಾರವಾಡದ ಕಡೆಗೆ ತೆರಳಿದನು. ಲಲಿತನು ಮಾರವಾಡದ ಪುರಪ್ರಮುಖರನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ರಾಜಮುದ್ರೆಯನ್ನು ಜುಮೇಲಿಯನ ಕೈಗೆ ಕೊಟ್ಟು—ಜುಮೇಲಿಯಾ! ಮೊದಲು ಕುಮುದಿನಿಯ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬಾ, ಎಂದು ಆದರದಿಂದ ತಿಳಿಸಿದನು.

'ಪ್ರಿಯನೇ! ಈ ವಿಷಯವನ್ನು ಕುರಿತು ನನಗೆ ಮತ್ತೆ ಮತ್ತೆ ಹೇಳಬೇಕಾದುದೇನೂ ಇರುವುದಿಲ್ಲ' ಎಂದು ಜುಮೇಲಿಯನು ಉತ್ತರವಿತ್ತು ಬಳಿಕ, ತಾನು ಮಾರವಾಡಕ್ಕೆ ತೆರಳುವುದಾಗಿ ಹೇಳಿ ಅಂಧಕಾರದಲ್ಲಿ ಮಾಯವಾಗಿಬಿಟ್ಟನು.

ಮರು ದಿನದ ಪ್ರಾತಃಕಾಲದಲ್ಲಿ ಶ್ರೀ ಪರಮಾನಂದ ಸ್ವಾಮಿಯು ಭಿಲ್ಲರ ಕಾತ್ಯಾಯನಿಯನ್ನು ಕರೆದುಕೊಂಡು ಮಂದಿರದ ಬಳಿಗೆ ಬಂದನು. ಬಹುಕಾಲದ ಮೇಲೆ ಗುರುಮಹಾಶಯರ ದರ್ಶನ ವಾದುದಕ್ಕಾಗಿ ಭಿಲ್ಲರು ಪರಮಾನಂದ ಭರಿತರಾಗಿ 'ಗುರು ಮಹಾರಾಜಕಿ ಜಯ' ಎಂದು ಸಂತೋಷದ ಧ್ವನಿಯನ್ನು ಮಾಡಿ ಭಯ ಭಕ್ತಿಗಳಿಂದ ಗುರುಗಳ ಅಡಿದಾವರೆಗಳಿಗೆರಗಿ ನಿಂತರು.

ಅದೇ ದಿನದ ಪ್ರಾತಃಕಾಲದಲ್ಲಿ ಭಿಲ್ಲರೆಲ್ಲರೂ ಭಯಭಕ್ತಿಗಳಿಂದ ಕಾದು ನಿಂತಿರಲು, ಲಲಿತನಿಗೂ ಕಾತ್ಯಾಯನಿಗೂ ವಿವಾಹವು ಯಥಾವಿಧಿಯಾಗಿ ನೆರವೇರಿತು. ವಿವಾಹದ ವೇಳೆಯಲ್ಲಿ ಕಾತ್ಯಾಯನಿಯು ತನ್ನ ಹುಚ್ಚುತನವನ್ನು ತೋರಿಸದೆ ಗಂಭೀರಭಾವದಿಂದಿದ್ದಳು. ವಿವಾಹವಾದೊಡನೆಯೇ ಕಾತ್ಯಾಯನಿಯು ಬಿಲ್ಲರಿದಿರಿನಲ್ಲಿ ಹುಚ್ಚುಹುಚ್ಚಾಗಿ ಕುಣಿಯುತ್ತಲೂ ಹಾಡುತ್ತಲೂ ಓಡಾಡಿದಳು. ಈ ವೈಭವದಲ್ಲಿ ಅಂದಿನ ದಿನವು ಕಳೆದುಹೋಯಿತು.

ಮರು ದಿನ ಪರಮಾನಂದ ಸ್ವಾಮಿಯು ಮಹಾ ವಿಜೃಂಭಣೆಯಿಂದ ಕಾಳಿಕಾ ಪೂಜೆಯನ್ನು ನೆರವೇರಿಸಿದನು. ಬಳಿಕ ಭಿಲ್ಲರೆಲ್ಲರೂ ತಮ್ಮ ತಮ್ಮ ಇಷ್ಟಾಚಾರಗಳಿಗೆ ತಕ್ಕ ಹಾಗೆ ಕಾಳಿಕಾ ಪೂಜೆಯನ್ನು ನೆರವೇರಿಸಿಕೊಂಡರು. ಪೂಜೆಯು ನೆರವೇರಿದ ಕೂಡಲೆ, ಅವರೆಲ್ಲರೂ ವೀರಪಾಣ (ಯುದ್ಧಕ್ಕೆ ತೆರಳುವಾಗ ಮಾಡುವ ಸುರಾಪಾನ) ವನ್ನು ಮಾಡಿ ಆನಂದದಿಂದ ಆ ದಿನವನ್ನೂ ಕಳೆಯಲಾರಂಭಿಸಿದರು. ಅದರ ಮರುದಿನ ಎಲ್ಲರೂ ಠಾಣ್ಯವನ್ನು ಎತ್ತಿ ಮಾರವಾಡದ ಕಡೆಗೆ ಪಯಣ ಮಾಡಿದರು. ಹುಚ್ಚಿಯಾದ ಕಾತ್ಯಾಯನಿಯು ಮಟ್ಟಿಗೆ ಸೈನಿಕರೆಲ್ಲರೂ ಮುಂದಕ್ಕೆ ಪಯಣ ಮಾಡುವುದನ್ನು ನೋಡುತ್ತಾ ಅಲ್ಲಿಯೇ ನಿಂತು ಬಿಟ್ಟಳು.

ಪ್ರಯಾಣಕಾಲದಲ್ಲಿ ಲಲಿತಸಿಂಹನು ಗುರುದೇವನಾದ ಪರಮಾನಂದ ಸ್ವಾಮಿಗೆರಗಿದನು. ಗುರುದೇವನು ಲಲಿತನಿಗೆ ಆಶೀರ್ವದಿಸಿ— ಮಗು! ಯುದ್ಧದಲ್ಲಿ ಜಯಶೀಲನಾಗಿ ಬರುವುದಕ್ಕಾಗಿ ತೆರಳು. ಕಾತ್ಯಾಯನಿಯು ನಮ್ಮೊಡನೆ ಇಲ್ಲಿಯೇ ಇರುವಳು. ಆವಾಗಲಾದರೂ ನೀನು ಈ ಹುಚ್ಚಿಯನ್ನು ಮಾರವಾಡದ ಮಹಾರಾಣಿಯನ್ನಾಗಿ ಮಾಡಬೇಕೆಂದು ಬಯಸುವುದಾದರೆ, ಆಗ ನೀನು ಇಲ್ಲಿಗೆ ಬಂದು ಈಕೆಯನ್ನು ಕರೆದುಕೊಂಡು ಹೋಗಬಹುದು, ಎಂದು ತಿಳಿಸಿದನು. ಲಲಿತನು ಮತ್ತಾವ ಮಾತನ್ನೂ ಆಡದೆ ಗುರುವಿಗೆ ಮತ್ತೊಂದು ಸಲ ಪ್ರಣಾಮ ಮಾಡಿ ಭಿಲ್ಲ ಸೈನ್ಯವನ್ನು ನಡೆಯಿಸಿಕೊಂಡು ಮಾರವಾಡದ ಸಿಂಹಾಸನವನ್ನು ಪಡೆಯಬೇಕೆಂಬ ಆಸೆಯಿಂದ ಮಾರವಾಡಕ್ಕೆ ಅಭಿಮುಖವಾಗಿ ತೆರಳಿದನು.

---

## ನಲವತ್ತಾರನೆಯ ವಿಲಾಸ

ಇತ್ತ ಕಡೆ ಮಾರವಾಡದಲ್ಲಿ, ಹಿಂದೊಂದು ದಿನ ಸನ್ಯಾಸಿಯು ತನ್ನ ಭವಿಷ್ಯತ್ತನ್ನು ಗುಣಿಸಿ ಹೇಳಿದ್ದ ಪ್ರಕಾರವಾಗಿ, ಮಹಾರಾಜಸಿಂಹನು ನಿಶ್ಚಿಂತನಾಗಿ ಕಾಲವನ್ನು ಕಳೆಯುತ್ತಿರುವನು. ಆತನಿಗೆ

ಹುಚ್ಚಿಯ ಭಯವೂ ಇಲ್ಲ ; ಆವ ಸ್ವಪ್ನದ ಬಾಧೆಯೂ ಇಲ್ಲ. ಇಷ್ಟಾದರೂ ಪಿತೃಘಾತುಕನಿಗೆ ಹೃದಯದಲ್ಲಿ ಶಾಂತಿಯೆಂದರೇನು? ಪಿತೃಘಾತುಕನಾದ ಮಹಾಪಾಪಿಯ ಹೃದಯದಲ್ಲಿ ಆವ ಶೋಕಾಗ್ನಿಯು ಪ್ರಜ್ವಲಿತವಾಗಿರುವುದೋ ಅದನ್ನು ನಿವಾರಿಸುವುದಕ್ಕೆ ಇಹ ಸಂಸಾರದಲ್ಲಿ ಸರಿಯಾದ ಶಾಂತಿಜಲವೇ ಕಾಣಿಸುವುದಿಲ್ಲ. ಮಹಾರಾಜಸಿಂಹನು ಪಿತೃಹತ್ಯೆಯ ದುಃಖವನ್ನು ನಿವಾರಿಸಿಕೊಳ್ಳುವುದಕ್ಕಾಗಿ ಸುರೆಯನ್ನು ಪಾನ ಮಾಡಿದನು, ವಿಲಾಸ ಸಾಗರದಲ್ಲಿ ಮುಳುಗಿದನು, ರಾಜ್ಯಭಾರದ ಹಂಬಲನ್ನೇ ಬಿಟ್ಟು ಬಿಟ್ಟನು. ಇಷ್ಟಾದರೂ ಅಸಹನೀಯವಾದ ಅಂತಸ್ತಾಪವು ಆತನನ್ನು ಬಿಟ್ಟು ದೂರ ತೊಲಗಲೇ ಇಲ್ಲ. ಪ್ರಿಯ ಪಾಠಕ ಮಹಾಶಯ ! ಈ ಯಾತನೆಯು ಆವಾಗಲಾದರೂ ನಿವಾರಣೆಯಾಗುವ ಸಂಭವವುಂಟೆ ?

ಕಮಲಿನಿಯು ಮಹಾರಾಣಿಯಾಗಿ ಸಮಸ್ತ ದುಃಖಗಳನ್ನೂ ಒಂದೇ ತಡವೆಗೆ ಮರೆತುಬಿಟ್ಟಿರುವಳು. ಆಕೆಯು ತನ್ನ ಗಂಡನೊಡನೆ ವಿಲಾಸಸಾಗರದಲ್ಲಿ ಮುಳುಗಿ ಮುಳುಗಿ ಐಹಿಕ ಸುಖದ ಸಾರವನ್ನು ಅನುಭವಿಸುತ್ತಿರುವಳೋ ಎಂಬಂತೆ ಮೈಮರೆತಿರುವಳು. ದುಃಖವೆಂಬುದನ್ನೂ ಕಷ್ಟವೆಂಬುದನ್ನೂ ಆಕೆಯು ಅರಿತವಳಾಗಿಯೇ ಇರಲಿಲ್ಲ. ಕಮಲಿನಿಯು ಬಾಲ್ಯದಿಂದಲೂ ಆವ ಪದವಿಯನ್ನು ಪರಮ ಧ್ಯೇಯವನ್ನಾಗಿಟ್ಟುಕೊಂಡು ಕೆಲಸ ಮಾಡುತ್ತಿದ್ದಳೋ, ಆ ಪದವಿಯು ಆಕೆಗೆ ದೊರೆತಿರುವುದು,—ಎಂದ ಮೇಲೆ, ಆಕೆಗೆ ಅದಕ್ಕಿಂತಲೂ ಸ್ವರ್ಗದಲ್ಲಿ ಹೆಚ್ಚಿನ ಸುಖವೇನುಂಟು? ಕಮಲಿನಿಯು ಮಹಾರಾಣಿಯಾದರೆ ಸಾಕೆಂದಿದ್ದಳು. ಅದರಂತೆಯೇ ಆ ಪದವಿಯು ಆಕೆಗೆ ದೊರೆತುದು. ಆಕೆಗೆ ಈ ಪ್ರಪಂಚದಲ್ಲಿ ಆಗಬೇಕಾದುದು ಮತ್ತೇನೂ ಇರಲಿಲ್ಲ. ಆಕೆಯು ಹೆಸರಿಗೆ ಮಹಾರಾಣಿಯಾಗಿರಲಿಲ್ಲ. ಮಹಾರಾಜಸಿಂಹನು ಆವಾಗಲೂ ಆತ್ಮಸುಖದಲ್ಲಿಯೇ ಕಾಲವನ್ನು ಕಳೆಯುತ್ತಿದ್ದುದರಿಂದ, ಆತನು ರಾಜಕಾರ್ಯದ ಕಡೆಗೆ ತಿರುಗಿ ನೋಡುತ್ತಲೇ ಇರಲಿಲ್ಲ. ಅದಕ್ಕಾಗಿ ಕಮಲಿನಿಯು ರಾಜ್ಯಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತಾನೇ ನಾರವಾಡದ ಮಹಾರಾಣನಂತಾಗಿ ಬಿಟ್ಟಳು.

ಲೋಕದಲ್ಲಿ ಮೂಢರು ಸುಖವನ್ನು ಶಾಶ್ವತವೆಂದು ತಿಳಿದಿರುವರು. ಅದು ಅನುಭವವಿಲ್ಲದ ತಿಳಿವಳಿಕೆಯು. ಸುಖವೆಂಬುದು ಆರಿಗೂ ಆವಾಗಲೂ ಸ್ಥಿರವಲ್ಲ. ಸುಖವು ಅವಿಚ್ಛಿನ್ನವಾಗಿ ನಡೆದು ಬರುವುದೆಂದು ಕಮಲಿನಿಯು ಅರಿತುಕೊಂಡಿದ್ದಳು. ಅಯ್ಯೋ ಪಾಪ! ದೂರ ದೃಷ್ಟಿಯಿಲ್ಲದ ಆ ಹೆಂಗುಸಿಗೆ ಲೋಕದ ತತ್ತ್ವವು ಹೇಗೆ ಗೊತ್ತಾಗಬೇಕು? ಅಲ್ಪ ಮತಿಯಾದ ಮಾನವನ ಸ್ವಭಾವವೇ ಹೀಗೆ.

'ಸುಖಸ್ಯಾನಂತರಂ ದುಃಖಂ | ದುಃಖಸ್ಯಾನಂತರಂ ಸುಖಂ' ಎಂಬ ಈ ನಿಯತಿ ನಿಯಮಕ್ಕನುಸಾರವಾಗಿ ಕಮಲಿನಿಯ ಸುಖವೆಂಬ ಆಕಾಶದಲ್ಲಿ ದುಃಖವೆಂಬ ಕರಿಯ ಮೋಡವು ತಲೆದೋರಿತು. ಕಮಲಿನಿಯ ಶಾಂತಿಮಯವಾದ ಹೃದಯ ಸಾಗರದಲ್ಲಿ ಅಶಾಂತಿಯೆಂಬ ತರಂಗಗಳೆದ್ದುವು. ಹೀಗಾಗಲು ಕಾರಣವೇನೆಂದರೆ—ಕುಮುದಿನಿಗೆ ಪುತ್ರಸಂತಾನವಾಯಿತೆಂದು ಕಮಲಿನಿಯ ಕಿವಿಗೆ ಬಿದ್ದಿತು. ಕಮಲಿನಿಗೆ ಮಕ್ಕಳಾಗಲಿಲ್ಲ, ಕುಮುದಿನಿಗೆ ಪುತ್ರಸಂತಾನವಾದುದು. ಆವ ಹೆಂಗುಸು ತಾನೇ ಈ ದುಃಖವನ್ನು ಸಹಿಸಬಲ್ಲವಳಾಗಿರುವಳು? ಅದರಲ್ಲಿಯೂ ಯುವರಾಜ ಲಲಿತಸಿಂಹನ ಹೆಂಡಿತಿ ಕುಮುದಿನಿಗೆ ಮಗುವಾಯಿತೆಂದರೆ, ಕಮಲಿನಿಯ ಮನವು ಹೇಗೆ ಶಾಂತವಾಗಿರಬಲ್ಲುದು? ಕಮಲಿನಿಗೆ ಇದು ಸಹ್ಯವಲ್ಲ. ಮಕ್ಕಳಿಲ್ಲದ ಕಮಲಿನಿಯು ಇದನ್ನು ಎಂದಿಗೂ ಸಹಿಸಳು.

ಆನಂದ ಮಂದಾಕಿನಿಯಲ್ಲಿ ತೇಲಿ ಮುಳುಗುತ್ತಿದ್ದ ಕಮಲಿನಿಗೆ ಇಷ್ಟು ದಿನಗಳೂ ಕುಮುದಿನಿಯ ವಿಚಾರವೇ ಜ್ಞಾಪಕಕ್ಕೆ ಬಂದಿರಲಿಲ್ಲ. ಕಮುದಿನಿಗೆ ಮಗುವಾಯಿತೆಂದು ಕೇಳಿದ ಕೂಡಲೆ ಕಮಲಿನಿಯ ಸಂತೋಷದ ಪ್ರವಾಹಕ್ಕೆ ಅಡ್ಡಗಟ್ಟೆ ಕಟ್ಟಿದಂತಾಯಿತು. ಬಳಿಕ ಕಮಲಿನಿಯು ತನ್ನೊಳಗೆ ತಾನೇ 'ಅದು ಇನ್ನೂ ಬದುಕಿರುವುದೇ? ಹಾಗಾದರೆ ಅದು ಬದುಕಿರುವ ವರೆಗೂ ನನಗೆ ಸುಖವಿಲ್ಲ.' ಎಂದು ಕೊಳ್ಳುವಳು.

ಕುಮುದಿನಿಯು ಆವಾಗಲೂ ಒಳ್ಳೆಯ ಸ್ವಭಾವದವಳು. ಆಕೆಯು ತನ್ನ ಜನ್ಮದಲ್ಲಿ ಒಂದು ದಿನವಾದರೂ ಆರಿಗೂ ಕಿಡುಕನ್ನು ಬಯಸಿದವಳೇ

ಅಲ್ಲ. ಇಂಥವಳು ಇತರರಿಗೆ ಹೇಗೆ ದುಃಖವನ್ನುಂಟುಮಾಡಿಯಾಳು? ಅಹಂಕಾರ ಮದಮತ್ತೆಯಾದ ಕಮಲಿನಿಯು ಇದನ್ನರಿಯದೇ, "ಕುಮುದಿನಿಯು ತನ್ನ ಸುಖದಲ್ಲಿ ಕಂಟಕ ಸ್ವರೂಪಿಣಿಯು, ತನ್ನ ಪುರೋಭಿವೃದ್ಧಿಗೆ ವಿಘ್ನಕಾರಿಣಿಯು" ಎಂದು ತಿಳಿದು ಸ್ವರ್ಗದಲ್ಲಿ ನರಕಯಾತನೆಯನ್ನು ಅನುಭವಿಸುವುದಕ್ಕೆ ತೊಡಗಿದಳು.

ಆವ ದಿನ ಕಮಲಿನಿಯು ಕುಮುದಿನಿಗೆ ಪುತ್ರೋತ್ಪತ್ತಿಯಾಯಿತೆಂದು ಕೇಳಿದಳೋ, ಅಂದಿನಿಂದಲೂ ಆಕೆಯು ಕೊರಗುವುದಕ್ಕೆ ಪ್ರಾರಂಭಿಸಿದಳು. ಅಂದಿನಿಂದಲೂ ಶೋಕಾಗ್ನಿಯು ಆಕೆಯ ಹೃದಯದಲ್ಲಿ ಪ್ರಜ್ವಲಿಸಲುಪಕ್ರಮಿಸಿತು. ಆ ಶೋಕಾಗ್ನಿಯ ತಾಪದಿಂದಲೋ ಎಂಬಂತೆ, ಕಮಲಿನಿಯ ದೇಹವು ಶೀರ್ಣವಾಯಿತು. ಆ ಶೋಕಾಗ್ನಿಯ ಹೊಗೆಯಿಂದಲೋ ಎಂಬಂತೆ ಆಕೆಯ ಸರ್ವಾಂಗವೆಲ್ಲವೂ ಮಾಲಿನ್ಯದಿಂದ ಕಾಂತಿಹೀನವಾಯಿತು. ಇಂತಹ ಕಮಲಿನಿಯು ಭಾವಿಸಿದಳೇನೆಂದರೆ:-

"ಈಗ ನಾನು ಏನ ಮಾಡಿದ ಹಾಗಾಯಿತು? ನಾನು ಇಷ್ಟು ಪ್ರಯಾಸಪಟ್ಟುದೂ ನೀರಿನಲ್ಲಿ ಹೋಮಮಾಡಿದಂತಾಗಲಿಲ್ಲವೇ? ಇನ್ನೇನು? ಕುಮುದಿನಿಯೇ ಮಹಾರಾಣಿ. ಅಷ್ಟೇಕೆ! ಆಕೆಯೇ ಮಹಾರಾಣನಿಗೆ ಮಹಾರಾಣಿ. ಮಹಾರಾಣನ ತಾಯಿಯು ಮತ್ತೇನಾಗಬಲ್ಲಳು? ಆಕೆಗೆ ಒಂದು ಮಗುವಾದುದರಿಂದಲ್ಲವೇ, ನಾನು ಇಷ್ಟೆಲ್ಲಾ ಆಲೋಚಿಸಬೇಕಾಯಿತು! ನನಗೆ ಮಕ್ಕಳಾಗಬಾರದೇ? ಬೇಕಾದವರಿಗೆ ಆಗದಿರುವುದೂ, ಬೇಡದವರಿಗೆ ಮೇಲಿಂದ ಮೇಲೆ ಆಗುವುದೂ ದೈವದ ವಿಪರೀತ ವರ್ತನೆಯು. ಆಲೋಚಿಸಿ ನೋಡಲಾಗಿ, ಈಗ ನನಗೆ ಮಕ್ಕಳಾದರೂ ಕುಮುದಿನಿಗೇ ಗೌರವವು. ಆಕೆಯೇ ಮಹಾರಾಣಿ. ಹೀಗೆಂದ ಮೇಲೆ ನಾನೇನಾಗಬೇಕು? ನಾನು ಆಕೆಗೆ ದಾಸಿಯಾಗಿ ಬದುಕಬೇಕಾಗುವುದು. ಈ ಯಪಮಾನವನ್ನು ಆರು ತಾನೇ ಸಹಿಸಬಲ್ಲರು? ಇಲ್ಲ ಇಲ್ಲ; ಪ್ರಾಣವಿರುವ ವರೆಗೂ ನಾನು ಈಯಪಮಾನವನ್ನು ಸಹಿಸಲಾರೆನು."

ಈ ಬಗೆಯಾದ ಚಿಂತೆಯು ಆಕೆಯಲ್ಲಿ ತಲೆದೋರಿದ ಬಳಿಕ, ಕಮಲಿನಿಯು ಮೊದಲಿನ ಕಮಲಿನಿಯಾಗಿರಲಿಲ್ಲ. ಒಂದು ವರ್ಷವ

ಕೆಳಗೆ ಆಕೆಯು ಆವ ರೀತಿಯಲ್ಲಿ ವಿಷಣ್ಣವದನೆಯಾಗಿದ್ದಳೋ, ಈಗಳೂ ಹಾಗೆಯೇ ಕಾಣಿಸಿಕೊಳ್ಳುತ್ತಿರುವಳು. ಅವಳಲ್ಲಿ ಮೊದಲಿನಂತೆ ಉಲ್ಲಾಸವಿಲ್ಲ, ಮಾತುಕತೆಗಳಲ್ಲಿ ಆದರವಿಲ್ಲ. ಅವಳ ದೇಹದಲ್ಲಿ ಲಾವಣ್ಯವಿಲ್ಲ, ರೂಪದಲ್ಲಿ ಕಾಂತಿಯಿಲ್ಲ. ಅವಳ ಮುಖದಲ್ಲಿ ಆವಾಗಲೂ ಕಾರ್ಮುಗಿಲೆದ್ದು ಭಯಂಕರವಾದ ಮಿಂಚು ಗುಡುಗು ಸಿಡಿಲುಗಳು ಪ್ರಾಣಿವರ್ಗಕ್ಕೆ ಸಲ್ಲದ ಕಿರುಕುಳವನ್ನುಂಟುಮಾಡುವಂತಿದ್ದುವು.

ದಾಸದಾಸಿಯರು ಭಯದಿಂದ ಮ ಹಾ ರಾ ಣಿ ಯ ಬಳಿಗೆ ಹೋಗರು ; ಸಖಿಯರು ಜುಗುಪ್ಸೆಯಿಂದ ಮಹಾರಾಣಿಯೊಡನೆ ಮೊದಲಿನಂತೆ ಮುಖವನ್ನು ಕೊಟ್ಟು ಮಾತನಾಡರು. ಆಕೆಯಲ್ಲಿ ಮೊದಲಿನ ಹಾಗೆ ಸುಖಶಾಂತಿಗಳಿಲ್ಲ, ಮಾತುಕತೆಗಳಿಲ್ಲ, ಗೀತವಾದ್ಯ ನೃತ್ಯಗಳಿಲ್ಲ. ಕಮಲಿನಿಯು ಆವಾಗಲೂ ಚಿಂತಾಶೀಲೆಯಾಗಿದ್ದುದರಿಂದ, ಆಕೆಯನ್ನು ಮಾತನಾಡಿಸುವುದಕ್ಕೆ ಆರಿಗೂ ಸಾಹಸವಿರಲಿಲ್ಲ. ಹಾಗೂ ಆಕೆಯ ಇದಿರಿನಲ್ಲಿ ಸುಳಿದಾಡುವುದಕ್ಕೆ ಕೂಡ ಆರಿಗೂ ಧೈರ್ಯವೆಂಬುದೇ ಇರಲಿಲ್ಲ.

---

## ನಲವತ್ತೇಳನೆಯ ವಿಲಾಸ

ಈ ಸಮಯದಲ್ಲಿ ಕಮಲಿನಿಯು ತನ್ನ ಗಂಡನನ್ನು ವಿಶೇಷವಾಗಿ ನೋಡಲು ಅವಕಾಶವಿರಲಿಲ್ಲ. ಕಾರಣವೇನೆಂದರೆ—ಆತನು ಆವಾಗಲೂ ಪ್ರಮದ ವನದಲ್ಲಿದ್ದುಕೊಂಡು ವಾರಾಂಗನೆಯರಿಂದ ಪರಿವೇಷ್ಟಿತನಾಗಿ ಕಾಲವನ್ನು ಕಳೆಯುತ್ತಿರುವನು. ಕಮಲನಿಯು ತನ್ನ ಅಂತಃಪುರಕ್ಕೆ ಒಂದು ಸಲವಾದರೂ ಬಂದು ಹೋಗಬೇಕೆಂದು ಗಂಡನಿಗೆ ನಾಲ್ಕಾರು ಸಲ ಹೇಳಿ ಕಳುಹಿದ್ದಳು. ಇದು ಆತನ ಕಿವಿಗೆ ಬೀಳಲೇ ಇಲ್ಲ. ಕಮಲಿನಿಯು ಇದನ್ನು ಕಂಡುಕೊಂಡು, ಆವ ವಿಷಯಕ್ಕೂ ಗಂಡನನ್ನು ಕೇಳುವುದನ್ನೇ ಬಿಟ್ಟುಬಿಟ್ಟಳು. ಆದರೂ ತನ್ನ ಮನದ ಅಶಾಂತಿಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಆತನ ಸಲಹೆಗಳು ಆಕೆಗೆ ಬೇಕಾಗಿದ್ದಿತಾದಕಾರಣ, ಆಕೆಯು ಅಡಿಗಡಿಗೂ ಮಹಾರಾಜಸಿಂಹನಿಗೆ ಹೇಳಿ ಕಳುಹುತ್ತಿದ್ದಳು. ಇಷ್ಟಾದರೂ ಮಹಾರಾಜನಿಗೆ ಹೆಂಡಿತಿಯನ್ನು ನೋಡುವುದಕ್ಕೆ ಒಂದು ನಿಮಿಷದಷ್ಟು ಅವಕಾಶವೂ ದೊರೆಯಲಿಲ್ಲ.

ಮಹಾರಾಣನ ಈ ವರ್ತನೆಯನ್ನು ಕಂಡು ಕಮಲಿನಿಯು ಕ್ರೋಧ ದಿಂದ ಸಿಂಹಿಯಂತಾಗಿಬಿಟ್ಟಳು. ಆಕೆಯ ಮೊದಲೇ ಭಯಂಕರ ವಾಗಿದ್ದ ರೂಪವು ಕೋಪದಿಂದ ಮತ್ತಷ್ಟು ಭಯಂಕರವಾಯಿತು. ಬಳಿಕ ಆಕೆಯು ಆತನನ್ನು ನೋಡಿಕೊಂಡು ಬರುವುದಕ್ಕೆ ತಾನೇ ಹೊರ ಡುವುದಾಗಿ ಸಂಕಲ್ಪಮಾಡಿಕೊಂಡಳು ಈ ಸುದ್ದಿಯನ್ನು ಕೇಳಿದ ಕೂಡಲೆ ಮಹಾರಾಣನ ಪರಿವಾರದವರು ಪ್ರಮದವನವನ್ನು ಬಿಟ್ಟು ದೂರ ವಾಗಿ ಹೊರಟುಹೋದರು; ನರ್ತಕಿಯರೂ ಗಾಯಿಕೆಯರೂ ಗಿಡು ಮರಗಳ ಮರೆಯಲ್ಲಿ ಅವಿತುಕೊಂಡರು. ಪರಿಚಾರಕರು ಓಡಿಹೋಗಲು ಯತ್ನವಿಲ್ಲದವರಾಗಿ ನಡುಗುತ್ತಾ ಅಲ್ಲಿಯೇ ನಿಂತುಬಿಟ್ಟರು. ಏತ ಕೆಂದರೆ—ಮಾರವಾಡದಲ್ಲಿ ಆರೇ ಆಗಲಿ ಕಮಲಿನಿಯನ್ನು ಕಂಡರೆ ಹೆದರುವ ಹಾಗೆ ಮತ್ತಾರನ್ನು ಕಂಡರೂ ಹೆದರುತ್ತಿರಲಿಲ್ಲ.

ಕಮಲಿನಿಯು ತನ್ನ ಸಂಕಲ್ಪಕ್ಕನುಸಾರವಾಗಿ ಪ್ರಮದವನಕ್ಕೆ ಬಂದು ನೋಡಲಾಗಿ, ಎಲ್ಲರೂ ದೂರದೂರವಾಗಿ ಸರಿದುಬಿಟ್ಟಿದ್ದರು. ಮಹಾರಾಣನು ಸುರಾಪಾನದಿಂದ ಅರ್ಧ ಮೃತನಾದಂತಾಗಿ ಮಂಚದ ಮೇಲೆ ಬಿದ್ದಿರುವನು. ಅವನಿಗೆ ಸರಿಯಾದ ಜ್ಞಾನವೇ ಇಲ್ಲ. ಇದನ್ನು ನೋಡಿ ಕಮಲಿನಿಯು ಜುಗುಪ್ಸೆಯಿಂದಲೂ, ಅಹಂಕಾರದಿಂದಲೂ, ಕ್ರೋಧದಿಂದಲೂ ಉನ್ಮತ್ತೆಯಾಗಿ ಗಂಡನ ಬಳಿಗೆ ಬಂದು ಆತನನ್ನು ಒಡಿದು ಅಲ್ಲಾಡಿಸಿದಳು. ಮಹಾರಾಣನು ಅತಿ ಪ್ರಯಾಸದಿಂದ ಕಣ್ಣು ತೆರೆದು ನೋಡಿ-ಚಂದ್ರವದನೇ! 'ಮಾತಾಡಬಾರದೇನೋ, ಮಾರಮಣ!' ಎಂಬುವರ ಭಾವವನ್ನು ಅಭಿನಯದಿಂದ ತೋರು, ಎಂದು ಅಸ್ಫುಟವಾಗಿ ಮಾತನಾಡಿದನು.

ಕಮಲಿನಿಗೆ ಇನ್ನು ಕ್ರೋಧದ ಆವೇಶವನ್ನು ತನ್ನಲ್ಲಿ ಅಡಗಿಸಿ ಕೊಂಡಿರುವುದಕ್ಕೆ ಸಾಧ್ಯವಾಗದೇ ಹೋಯಿತು. ತರುವಾಯ ಆಕೆಯು ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ—ಮಹಾರಾಜಸಿಂಹ! ನೀನು ಇಷ್ಟು ದೂರ ಕೆಳಗಿಳಿದಿರುವೆಯೆಂದು ನನಗೆ ತಿಳಿದಿರಲಿಲ್ಲ, ಎಂದ ಕೂಡಲೆ, ಮಹಾರಾಜಸಿಂಹನ ಮದವು ಸರ್ರನೆ ಇಳಿದು ಹೋಯಿತು. ಬಳಿಕ ಆತನು ಎದ್ದು ಕುಳಿತುಕೊಂಡು ಚೆನ್ನಾಗಿ ತೆರೆದ ಕಣ್ಣುಗಳಿಂದ ಕಮಲಿನಿ

ಯನ್ನು ನೋಡಿದನು, ಆಗ ಕಮಲಿನಿಯು—ಪ್ರಿಯನೇ! ಇದಕ್ಕಾಗಿಯೇ ನೀನು ಪಿತೃಹತ್ಯೆಯನ್ನು ಮಾಡಿ ಸಿಂಹಾಸನದ ಮೇಲೆ ಕುಳಿತುಕೊಂಡುದು? ಎಂದು ಹೇಳಿದೊಡನೆಯೇ ಆತನು ಭಯದಿಂದ ನಡುನಡುಗಿ—ಪ್ರಿಯೆ! ಸುಮ್ಮನಿರು. ಮತ್ತಾರಾದರೂ ಕೇಳಿಯಾರು, ಎಂದು ಕಂಪಿತ ಸ್ವರದಿಂದ ಮಾತನಾಡಿದನು.

ಕಮಲಿನಿ—ಸುರಾಪಾನದಿಂದ ಸತ್ತವನಂತೆ ಬಿದ್ದಿರು. ಇದರಿಂದ ನಿನಗೆ ತುಂಬಾ ಲಾಭವುಂಟು. ನೀನು ಹೀಗೆಯೇ ಮಾಡುತ್ತಿರುವುದಾದರೆ, ನಾನು ಒಂದೊಂದು ಮನೆಗೂ ಹೋಗಿ, 'ಪಿತೃಹತ್ಯೆಮಾಡಿ ರಾಜ್ಯವನ್ನು ಪಡೆದುಕೊಂಡಾತನು ಈಗ ಆವ ರೀತಿಯಲ್ಲಿ ಕೆಳಗೆ ಬಿದ್ದು ಹೋಗಿ ಪಾಪದ ಫಲವನ್ನು ಹೇಗೆ ಅನುಭವಿಸುತ್ತಿರುವನು, ಎಂಬುದನ್ನು ಆರು ಬೇಕಾದರೂ ಬಂದು ನೋಡಬಹುದು' ಎಂದು ಪ್ರಚಾರಪಡಿಸಿ ನಿನ್ನ ಮಾನವನ್ನು ಕಳೆದು ಬಿಡುವೆನು. ಬಳಿಕ ಆಗುವುದು ಆಗಿಯೇ ಹೋಗಲಿ.

ಮಹಾ—ಕಮಲಿನಿ, ಓ ಕಮಲಿನಿ! ನಿನ್ನ ಕಾಲಿಗೆ ಬೀಳುವೆನು, ನೀನು ಮಟ್ಟಗೆ ಗದ್ದಲಮಾಡಬೇಡ.

ಕಮಲಿನಿ—ಏನು! ನಾನು ಸುಮ್ಮನಿರಬೇಕೇ? ನಿನಗೆ ಬುದ್ಧಿಗಲಿಸದೇ ಹೋದರೆ, ನೀನು ಸರಿಯಾಗುವುದೆಂದಿಗೆ?

ಮಹಾ—ನಾನು ಏನ ಮಾಡಬೇಕು? ಹೇಳು.

ಕಮಲಿನಿ—ಕೊಂಚ ತಾಳು; ಇಲ್ಲಿ ಆರು ಇರುವರೆಂಬುದನ್ನು ನೋಡಿಕೊಂಡು ಬರುವೆನು.

ಹೀಗೆ ಹೇಳಿ ಕಮಲಿನಿಯು ಸತ್ತಲೂ ನೋಡಿಕೊಂಡು ಬಂದು ಬಾಗಿಲನ್ನು ಹಾಕಿ ಗಂಡನ ಬಳಿಯಲ್ಲಿ ಕುಳಿತುಕೊಂಡು—ಕುಮುದಿನಿಗೆ ಮಗುವಾಗಿರುವ ಸುದ್ದಿಯನ್ನು ನೀನು ಕೇಳಿದೆಯಾ? ಎಂದಳು.

ಮಹಾ—(ಚಕಿತನಾಗಿ) ಆರಿಗೆ?

ಕಮಲಿನಿ—ಹೇಳಿದ ಮಾತು ಕಿವಿಗೆ ಬೀಳುವಂತಿಲ್ಲ. ಸುಟ್ಟ ಮೋರೆಯ ಆ ಕುಮುದಿನಿಗೆ; ಗೊತ್ತಾಯಿತೇ?

ಮಹಾ—(ಸಂತೋಷದಿಂದ) ಒಳ್ಳೆಯದೇ ಆಯಿತು.

ಕಮಲಿನಿ—(ಹುಬ್ಬು ಗಂಟಿಕ್ಕಿ) ಒಳ್ಳೆಯದೇ ಆಯಿತಲ್ಲವೇ! ನಿನ್ನ ಸಂತೋಷವನ್ನು ಸುಟ್ಟರು. ನಿನ್ನಂತಹ ಬುದ್ಧಿಯಿಲ್ಲದ ಪಶುವನ್ನು ನಾನು ಮತ್ತೆಲ್ಲಿಯೂ ಕಾಣೆನು.

ಮಹಾ—ಕಮಲಿನಿ! ಮತ್ತಾವ ತಪ್ಪಿಗಾಗಿ ನನ್ನನ್ನು ಹೀಗೆ ಹೀಯಾಳಿಸುತ್ತಿರುವೆ?

ಕಮಲಿನಿ—ಕುಮುದಿನಿಯ ಮಗನೇ ಮಹಾರಾಣನಾಗುವನು. ನಿನಗೆ ಮತ್ತೇನಾಗಬೇಕು?

ಈ ಮಾತು ಕಿವಿಗೆ ಬಿದ್ದ ಕೂಡಲೆ, ಮಹಾರಾಜಸಿಂಹನು ಬಳಿಯಲ್ಲಿದ್ದ ಸುರಾಪಾತ್ರೆಯ ಕಡೆಗೆ ಕೈ ನೀಡಿದನು. ಇದನ್ನು ಕಂಡೂ ಕಾಣದ ಕಮಲಿನಿಯು—ಇಷ್ಟು ಭಯಂಕರವಾದ ವ್ಯಾಪಾರವನ್ನು ಮಾಡಿ ಸಿಂಹಾಸನದ ಮೇಲೆ ಕುಳಿತು ಫಲವೇನಾಯಿತು? ನಿನಗೆ ಮಕ್ಕಳಾದರೂ ಪ್ರಯೋಜನವಿಲ್ಲ. ಆಕೆಯ ಮಗನೇ ಸಿಂಹಾಸನಾಧಿಪತಿ; ಇದು ಅಪರಿಹಾರ್ಯವಾದುದು, ಎಂದು ನುಡಿದಳು.

ಮಹಾರಾಜಸಿಂಹನು ಪಾತ್ರೆಯನ್ನು ತೆಗೆದುಕೊಂಡು ಸುರೆಯನ್ನು ಕುಡಿಯುವುದರಲ್ಲಿದ್ದನು. ಇದನ್ನು ನಿಷೇಧಿಸಿ ಕಮಲಿನಿಯು—ಇನ್ನೂ ಈ ವಿಷದ ಸೇವನೆಯೇ? ಎಂದು ನುಡಿದಳು.

ಮಹಾ—ಕಮಲಿನಿ! ಅಡ್ಡಗಿಸಬೇಡ. ಕೊಂಚವಾಗಿಯೇ ಕುಡಿಯುವೆನು. ನನ್ನ ದೇಹದಲ್ಲಿ ಶಕ್ತಿಯೆಂಬುದೇ ಮಾಯವಾಗಿಬಿಟ್ಟರುವುದು.

ಕಮಲಿನಿ—ಈಗ ನೀನು ಶಕ್ತಿಯನ್ನು ಪಡೆದುಕೊಂಡು ಆಗಬೇಕಾದುದೇನು? ಈಗ ನಿನಗಿರುವ ಶಕ್ತಿಯೇ ಸಾಕು.

ಮಹಾ—ಮಹಾರಾಣಿ! ಶಕ್ತಿಗೆ ಪ್ರಯೋಜನವುಂಟು. ನೀನು ಹೇಳುವ ಮಾತು ನನಗೆ ಅರ್ಥವಾಯಿತು.

ಕಮಲಿನಿ—ನಿನಗೆ ಅರ್ಥವಾದುದೇನೋ ನನಗೆ ಗೊತ್ತಾಗಲಿಲ್ಲ. ಅದೇನು ಹೇಳು, ನೋಡುವ?

ಮಹಾ—ಕುಮುದಿನಿಯ ಸಂತಾನವನ್ನು ಸ್ವಾಮಿಪಾದದಲ್ಲಿ ಸೇರಿಸಿಬಿಡಬೇಕೆಂದಲ್ಲವೇ ನಿನ್ನ ಇಚ್ಛೆ?

ಕಮಲಿನಿ—ಈಗೆ ಗೊತ್ತಾಯಿತು. ನಿನಗೆ ಈಗ ಸಾಹಸವಿಲ್ಲದಿದ್ದರೂ, ಬುದ್ಧಿಯಿರುವುದು. ಈ ಕೆಲಸವು ಆಗಲೇಬೇಕು.

ಮಹಾ—ಈ ಕೆಲಸಕ್ಕೆ ನಾನೇತಕೆ? ಇದರಲ್ಲಿ ನನ್ನ ಅಭಿಪ್ರಾಯದಿಂದ ತಾನೇ ಏನು ಪ್ರಯೋಜನ? ನೀನೇ ಮಾರವಾಡದ ಮಹಾರಾಣಿಯಾಗಿರುವಲ್ಲಿ ಆರಿಗಾದರೂ ಅಪ್ಪಣೆ ಮಾಡಿದರಾಯಿತು. ನಿಮಿಷಮಾತ್ರದಲ್ಲಿ ಕೆಲಸವು ನಡೆದುಹೋಗುವುದು.

ಕಮಲಿನಿ—ತಾವೇ ಈ ಕೆಲಸ ಮಾಡಬೇಕು.

ಮಹಾ—ಮಹಾರಾಣಿ! ನನ್ನನ್ನು ಮನ್ನಿಸು, ನನ್ನನ್ನು ಮನ್ನಿಸು. ಕಮಲಿನಿ! ನನ್ನನ್ನು ಹಿಡಿದುಕೊಳ್ಳು, ನನ್ನನ್ನು ಹಿಡಿದುಕೊಳ್ಳು. ಇದು ಅದೇ ಕಠಾರಿ. ಇವಳೇ ಅವಳು; ಇವಳೇ ಆ ಹುಚ್ಚಿ. (ಉಚ್ಚ ಸ್ವರದಿಂದ) ಆರಿದ್ದೀರಿ? ಎಲಾ! ಕತ್ತಿಯನ್ನು ತಂದುಕೊಡು. ಸಾಯುವುದಾದರೆ ಯುದ್ಧಮಾಡಿಯೇ ಸಾಯುವೆನು. ನಾನು ಹೇಡಿಯಲ್ಲ.

ಕಮಲಿನಿಯು ತನ್ನ ಗಂಡನ ಈ ದುರವಸ್ಥೆಯನ್ನು ನೋಡಿ ಪಶ್ಚಾತ್ತಾಪಪಟ್ಟುಕೊಂಡು ಆತನಿಗೆ ತಾನೇ ಸುರೆಯನ್ನು ಪಾನಮಾಡಿಸಿದಳು. ಉಷ್ಣವಾದ ಸುರೆಯು ಹೊಟ್ಟೆಗೆ ಹೋದ ಕೂಡಲೆ, ಮಹಾರಾಜಸಿಂಹನು ತನ್ನ ನೈಜಸ್ವಭಾವವನ್ನು ತಾಳಿದವನಾಗಿ ವ್ಯಾಕುಲಭಾವದಿಂದ ಸುತ್ತಲೂ ನೋಡಿ—ಕಮಲಿನಿ! ಇದೇನು, ಇಲ್ಲಿರುವೆ? ನಾನು ಈಗ ತಾನೇ ಆ ಸ್ವಪ್ನವನ್ನು ಕಂಡೆನು, ಎಂದನು.

ಕಮಲಿನಿ—ಮಹಾರಾಜಸಿಂಹ! ಇನ್ನು ಮೇಲೆ ಮತ್ತಾವ ರಾಜಕಾರ್ಯವೂ ನಿನ್ನಿಂದ ನೆರವೇರುವುದೆಂಬ ಭರವಸೆಯು ಇಂದಿಗೆ ಹೋಗಿಬಿಟ್ಟಿತು. ನೀನು ಹೀಗೆಯೇ ಸುರೆಯನ್ನು ಪಾನಮಾಡಿಕೊಂಡು ನರಕಕ್ಕೆ ಹೋಗುತ್ತಿರು. ನಿನಗೆ ನಾನು ಮತ್ತೇನನ್ನೂ ಹೇಳತಕ್ಕುದಿಲ್ಲ.

ಹೀಗೆ ಹೇಳಿ ಕಮಲಿನಿಯು ಅಸಹ್ಯವಾದ ಕೋಪಾವೇಶದಿಂದ ಸಿಡಿಮಿಡಿಗುಟ್ಟುತ್ತಾ ದಡಬಡನೆ ಹೊರಗೆ ಹೊರಟು ಹೋದಳು. ಆಕೆಯನ್ನು ಮತ್ತೆ ಕರೆಯುವುದಕ್ಕೆ ಮಹಾರಾಜಸಿಂಹನಿಗೆ ಸಾಹಸವುಂಟಾಗಲಿಲ್ಲ. ಮಹಾರಾಣಿಯು ಹೊರಟೇ ಹೋದಳೆಂದು ಆತನಿಗೆ ನಂಬುಗೆಯುಂಟಾದ ಬಳಿಕ, ಮಹಾರಾಜನು ಪರಿವಾರದವರನ್ನು ಮತ್ತೆ ಕರೆದನು. ತರುವಾಯ ಸುರಾನದಿಯು ಮೊದಲಿನಂತೆಯೇ ಉಕ್ಕಿ ಹರಿಯಿತು. ಸಂಗೀತ ಸಾಗರದಲ್ಲಿ ತರಂಗಗಳೆದ್ದುವು. ಸಂತೋಷವೃಷ್ಟಿಯ ಶೀಕರಗಳು ಗಾಳಿಯಲ್ಲಿ ಸೇರಿದುವು. ಆದರೂ ವಿಷಾದಾನಲದ ಜ್ವಾಲೆಯು ಶಾಂತವಾಗಲೇ ಇಲ್ಲ.

ಆ ಜ್ವಾಲೆಯು, ನಿವಾರಣೆಯಾಗುವುದಕ್ಕಾಗಿ ಆತನನ್ನು ಆವರಿಸಲಿಲ್ಲ. ಆವನು ಮಾರವಾಡದ ಅಜೇಯ ಸೇನಾಪತಿಯಾಗಿದ್ದನೋ, ಆವನ ಪರಾಕ್ರಮದಿಂದ ಭರತಖಂಡವೆಲ್ಲವೂ ನಡುಗಿಹೋಗುತ್ತಿದ್ದಿತೋ, ಆವನ ಹೆಸರನ್ನು ಕೇಳಿದ ಮಾತ್ರದಿಂದಲೇ ಮಹಾರಾಷ್ಟ್ರದವರ ಪ್ರಾಣಗಳೇ ಹಾರಿಹೋಗುತಿದ್ದುವೋ, ಅಂತಹ ಮಹಾರಾಜಸಿಂಹನು ಈಗ ಹುಡುಗನಿಗಿಂತಲೂ ಕಡೆಯಾಗಿ ಹೆಂಗುಸರ ಕೈಯಲ್ಲಿ ಆಟದ ಬೊಂಬೆಯಂತೆ ಕುಣಿಯುತ್ತಿರುವನು. ಹೀಗಾಗುವುದಕ್ಕೆ ಆ ಜ್ವಾಲೆಯೇ ಕಾರಣವು. ಆ ಭಯಂಕರವಾದ ಜ್ವಾಲೆಯಿಂದ ಆತನ ಹೃದಯವು ದುರ್ಬಲವಾಗಿಯೂ, ದೇಹವು ಶಕ್ತಿಹೀನವಾಗಿಯೂ, ಮುಖವು ಕಳೆಗುಂದಿದುದಾಗಿಯೂ ಕಾಣಬರಲಾರಂಭಿಸಿತು.

---

## ನಲವತ್ತೆಂಟನೆಯ ವಿಲಾಸ

ಕಮಲಿನಿಯು ತನ್ನ ಅಂತಃಪುರಕ್ಕೆ ಹಿಂದಿರುಗಿ ಬಂದ ಕೂಡಲೆ, ನಗರಾಧ್ಯಕ್ಷನಾದ ವಿಜಯಸಿಂಹನಿಗೆ ಹೇಳಿಕಳುಹಿದಳು. ಕೊಂಚ ಕಾಲದೊಳಗಾಗಿ ವಿಜಯನು ಬಂದು ತಲೆವಾಗಿ ನಿಂತನು. ಕಮಲಿನಿಯು ತನ್ನ ಪರಿವಾರದವರೆಲ್ಲರನ್ನೂ ದೂರ ಹೋಗುವಂತೆ ಅಪ್ಪಣೆ ಮಾಡಿ— ವಿಜಯಸಿಂಹ! ನಿನ್ನ ಕಾರ್ಯದಕ್ಷತೆಗಾಗಿ ನಾನು ವಿಶೇಷವಾಗಿ ಸಂತುಷ್ಟೆಯಾಗಿರುವೆನು, ಎಂದಳು.

ವಿಜಯ—(ನಮ್ರತೆಯಿಂದ) ಇದೆಲ್ಲವೂ ಮಹಾರಾಣಿಯ ಅನುಗ್ರಹವು.

ಕಮಲಿನಿ—ಮಾರವಾಡದ ಪ್ರಧಾನ ಸೇನಾಪತಿಯಾಗಲು ನೀನೇ ತಕ್ಕವನು.

ವಿಜಯ—(ಸಂತೋಷದಿಂದ) ಇದೂ ಸನ್ನಿಧಾನದ ಅನುಗ್ರಹ ವಿಶೇಷವು.

ಕಮಲಿನಿ—ಈಗ ನಾನು ಗುರುತರವಾದೊಂದು ಕಾರ್ಯ ಭಾರವನ್ನು ನಿನ್ನಲ್ಲಿಡಬೇಕೆಂದು ಬಯಸಿರುವೆನು. ಆ ಕೆಲಸವನ್ನು ನೀನು ತೃಪ್ತಿಕರವಾಗಿ ನೆರವೇರಿಸಿದ ಕೂಡಲೆ, ನಿನಗೆ ಪ್ರಧಾನಸೇನಾಪತಿಯ ಪದವಿಯು ದೊರೆಯುವುದು.

ವಿಜಯ—ಅಪ್ಪಣೆಯಾಗಲಿ. ಕೂಡಲೆಯೇ ನಾನು ಅದನ್ನು ನೆರವೇರಿಸುವೆನು. ಮಹಾರಾಣಿಯ ಆಜ್ಞೆಯನ್ನು ನೆರವೇರಿಸುವುದರಲ್ಲಿ, ವಿಜಯಸಿಂಹನಿಗೆ ಅಸಾಧ್ಯವೆಂಬುದನ್ನು ನಾನು ಇಂದಿನ ವರೆಗೂ ಕಂಡರಿಯೆನು.

ಕಮಲಿನಿ—ವಿಜಯ! ಇದನ್ನು ನಾನೂ ಬಲ್ಲೆನು. ನಿನ್ನಂತಹ ಆಜ್ಞಾಧಾರಕನು ನಮ್ಮ ಮಾರವಾಡದಲ್ಲಿ ಎಲ್ಲಿಯೂ ಇರಲಿಕ್ಕಿಲ್ಲ.

ವಿಜಯ—ಇದೆಲ್ಲವೂ ಸನ್ನಿಧಾನದ ಅನ್ನಪ್ರಭಾವವು.

ಕಮಲಿನಿ—ಕುಮುದಿನಿಗೆ ಮಗುವಾಗಿರುವುದು.

ವಿಜಯ—ಆಕೆಗೆ ಮಗುವೇ! ಇದೇನು ದೈವಲೀಲೆ!

ಕಮಲಿನಿ—ಅದು ಹೇಗಾದರೂ ಹೋಗಲಿ. ಆ ಮಗುವನ್ನು ನಿಮಿತ್ತಮಾಡಿಕೊಂಡು ನಮ್ಮ ರಾಜ್ಯದಲ್ಲಿ ಮತ್ತೆ ಘೋರ ಸಂಗ್ರಾಮವೇ ಉಂಟಾಗುವುದು. ಅದುಕಾರಣ ರಾಜ್ಯದ ನೆಮ್ಮದಿಗಾಗಿ ಆ ಮಗು ಬದುಕಿರಲಾಗದು.

ವಿಜಯ—ಅದೆಂದಿಗೂ ಬದುಕಿರಲಾಗದು, ತಾಯೇ! ಅದು ಬದುಕಿದರೆ ಅನರ್ಥವೇ ಉಂಟಾದೀತು, ಮಾತಾಯಿ!

ಕಮಲಿನಿ—ಈ ಕಾರ್ಯಭಾರವನ್ನು ನೀನೇ ವಹಿಸಿಕೊಳ್ಳ ಬೇಕಾಗಿದೆ.

ವಿಜಯ—ನನ್ನ ಕರ್ತವ್ಯವನ್ನು ಆಜ್ಞಾಪಿಸೋಣವಾಗಲಿ.

ಕಮಲಿನಿ—ನೀನು ಈಗಲೇ ಚಿತ್ತೂರು ದುರ್ಗಕ್ಕೆ ತೆರಳಬೇಕು. ಮುಂದೆ ನಾನೇನೂ ಹೇಳುವುದಿಲ್ಲ.

ವಿಜಯ—ತಾಯಿ! ನಾನು ಯುದ್ಧಮಾಡುವುದನ್ನು ಚೆನ್ನಾಗಿಯೂ ಬಲ್ಲೆನು, ಆದರೆ ಘಾತುಕ ಕೃತ್ಯವನ್ನು ಮಾಡಲು ನನಗೆ ಅಭ್ಯಾಸವಿಲ್ಲ.

ವಿಜಯನಾಡಿದ ಮಾತು ಕಮಲಿನಿಯ ಕಿವಿಯಲ್ಲಿ ಬಿದ್ದ ಕೂಡಲೆ, ಅವಳ ಮನವು ಕದಡಿದಂತಾಯಿತು. ಬಳಿಕ ಆಕೆಯು ಆತನ ಮುಖವನ್ನೇ ನೋಡುತ್ತಾ ಕುಳಿತಳು. ವಿಜಯನು ನಾಚುಗೆಯಿಂದ ತಲೆಯನ್ನು ತಗ್ಗಿಸಿ ನಿಂತನು. ಕಮಲಿನಿಯು ವಿಜಯನನ್ನು ಕುರಿತು—ಹಾಗಾದರೆ ಈ ಕೆಲಸವು ನಿನ್ನಿಂದಾಗಲಾರದೆಂದು ಹೇಳಿದಂತಾಗಲಿಲ್ಲವೇ? ಎಂದು ಪ್ರಶ್ನೆಮಾಡಿದಳು.

ವಿಜಯ—ಮಹಾರಾಣಿ! ಹಿಂದೆಂದೂ ಅಭ್ಯಾಸಮಾಡಿದವನಲ್ಲ. ಈಗ ಅಭ್ಯಾಸಮಾಡಿದಲ್ಲಿ, ಆ ಕೆಲಸವು ಎಷ್ಟರದು?

ಕಮಲಿನಿ—ನಿನಗೆ ಇವನ್ನು ಆರು ಅಭ್ಯಾಸಮಾಡಿಸಬೇಕು, ವಿಜಯಸಿಂಹ?

ವಿಜಯ—ಆವ ರೀತಿಯಲ್ಲಿ ಮಾಡಬೇಕೆಂಬುದನ್ನು ಸನ್ನಿಧಾನದಿಂದ ತಿಳಿದು ಬಂದರೆ ಸಾಕು. ಇಷ್ಟರ ಮಟ್ಟಿನ ಅಭ್ಯಾಸದಿಂದಲೇ ನಾನು ಆವ ಕೆಲಸವನ್ನಾದರೂ ಮಾಡಿಬಿಡುವೆನು.

ಕಮಲಿನಿ—ವಿಜಯ! ನೀನು ಚಿತ್ತೂರು ದುರ್ಗಕ್ಕೆ ಹೋಗು, ಆ ಮಗುವನ್ನು ತಾಯಿಯಿಂದ ಬೇರ್ಪಡಿಸು. ತರುವಾಯ ಆ ಮಗುವನ್ನು ಕಠಾರಿಯಿಂದಲಾದರೂ ಇರಿದು ಬಿಡು—ಇಲ್ಲವೇ, ಅದರ ಕುತ್ತಿಗೆಯನ್ನಾದರೂ—

ವಿಜಯ—ಗೊತ್ತಾಯಿತು ಗೊತ್ತಾಯಿತು, ತಾಯಿ! ಮುಂದೆ ಹೇಳಬೇಕಾದುದೇನೂ ಇರುವುದಿಲ್ಲ. ನಾನು ಈಗಳೇ ಅಲ್ಲಿಗೆ ತೆರಳುವೆನು.

ಹೀಗೆ ಹೇಳಿ ವಿಜಯನು ಮಹಾರಾಣಿಗೆ ಅಭಿವಂದಿಸಿ ಹೊರಟು ಹೋದನು. ಈ ಸಮಯದಲ್ಲಿ ಆರಾದರೂ ವಿಜಯಸಿಂಹನನ್ನು ನೋಡಿದ್ದರೆ, ಅವರು ಆತನ ತಲೆಯಲ್ಲಿ ಭೂತವು ಹೊಕ್ಕಿರುವುದೆಂದು ತಪ್ಪದೆಯೇ ತಿಳಿದುಕೊಂಡುಬಿಡುತ್ತಿದ್ದರು. ವಿಜಯಸಿಂಹನು ಮನೆಗೆ ಬಂದು ಆ ದಿನವೆಲ್ಲಾ ಪರಿಪರಿಯಾಗಿ ಆಲೋಚಿಸಿದನೇನೆಂದರೆ—"ಒಂದು ಕಡೆ ಮಾರವಾಡದ ಪ್ರಧಾನ ಸೇನಾಪತಿಯ ಪದವಿಯು ಕಣ್ಣಿಗೆ ಕಟ್ಟಿದಂತಿರುವುದು. ಮತ್ತೊಂದು ಕಡೆ ಏನನ್ನೂ ಅರಿಯದ ಮಗುವಿನ ಆನಂದಿತವಾದ ಮಂದಹಾಸದಿಂದ ಕೂಡಿದ ಮುಖಮಂಡಲವು ಹೃದಯ ಫಲಕದಲ್ಲಿ ಪ್ರತಿಬಿಂಬಿತವಾಗುತ್ತಿರುವುದು. ಈ ಕೆಲಸವು ನನ್ನಿಂದ ಸಾಧ್ಯವೇ? ಈ ಘೋರ ಕೃತ್ಯವು ಪಿಶಾಚನಿಂದಲ್ಲದೆ ಮನುಷ್ಯಮಾತ್ರದವನಿಂದ ಸಾಗದು. ಶಿಶುಹತ್ಯೆಯನ್ನಾದರೂ ಮಾಡಿ ಅಧಿಕಾರವನ್ನು ಪಡೆದು ನಾನು ಮಾಡುವುದೇನು? ನಾನು ಯಮುನ ಬಳಿಗೆ ಹೇಗೆ ಹೋಗಲಿ? ಆತನ ಮುಖವನ್ನು ಹೇಗೆ ನೋಡಲಿ? ಆತನಿಗೆ ಏನುತ್ತರ ಕೊಡಲಿ? ದುರಾಶೆಯು ಮನುಷ್ಯನನ್ನು ಪಿಶಾಚನನ್ನಾಗಿ ಮಾಡಿ ಕುಣಿಸುವುದಲ್ಲಾ."

ಈ ರೀತಿಯಾಗಿ ವಿಜಯನು ಚಿಂತಿಸಿ ನೋಡಿದನು. ಇಷ್ಟಾದರೂ ಅವನ ತಲೆಯಲ್ಲಿ ಆವ ಸಿದ್ಧಾಂತವೂ ಹೊಳೆಯಲಿಲ್ಲ.

ವಿಜಯಸಿಂಹನು ಆವಾಗಲೂ ಉಚ್ಚಪದಾಭಿಲಾಷಿಯು. ರಾಜ್ಯದಲ್ಲಿ ಉನ್ನತಿಯನ್ನು ಪಡೆಯಬೇಕೆಂದು ಆತನು ಆವಾಗಲೂ ಯತ್ನ ಮಾಡುತ್ತಲೇ ಇರುವನು. ಈಗ ಅನಾಯಾಸವಾಗಿ ಉಚ್ಚಾಧಿಕಾರವು ದೊರೆಯುವುದಕ್ಕೆ ಕಾದುನಿಂತಿರುವುದು. ಇದನ್ನು ಚೆನ್ನಾಗಿಯೂ ಬಲ್ಲವನಾದ ವಿಜಯನು ಮತ್ತೆ ದ್ವೈವಿಧ್ಯದಲ್ಲಿ ಸಿಲುಕಿಕೊಂಡು ಚಿಂತಿಸತೊಡಗಿದನು:—" ಈ ಕೆಲಸವು ಸತ್ಯವಾಗಿಯೂ ನನ್ನಿಂದಾಗಲಾರದು. ಹಣವನ್ನು ಚೆಲ್ಲಿದರೆ ಆರಾದರೂ ಈ ಕೆಲಸವನ್ನು ನಿಮಿಷಮಾತ್ರದಲ್ಲಿ ನೆರವೇರಿಸಿಬಿಡುವರು. ಹಾಗೇಕೆ ಮಾಡಬಾರದು? ದೊಡ್ಡ ದೊಡ್ಡ ಪದವಿಗಳನ್ನು ಹೊಸ್ಸಬೇಕಾದರೆ, ಇಂತಹ ಸಣ್ಣ ಸಣ್ಣ ಕೆಲಸಗಳನ್ನು ಮಾಡಲೇಬೇಕಾಗುವುದು. ಈ ವಿಷಯದಲ್ಲಿ ನೀತಿಕಾರರು ಹೀಗೆ ಸಾರಿ ಸಾರಿ ಹೇಳುತ್ತಿರುವರು. ಅದೇನೆಂದರೆ—

ನಸ್ವಲ್ಪಸ್ಯ ಕೃತೇ ಭೂರಿ । ನಾಶಯೇ ನ್ಮತಿಮಾನ್ನರಃ ॥
ಏತದೇವಹಿ ಪಾಂಡಿತ್ಯಂ । ಯತ್ಸ್ವಲ್ಪಾದ್ಭೂರಿ ರಕ್ಷಣಂ ॥

ತಾತ್ಪರ್ಯವೇನೆಂದರೆ—ಬುದ್ಧಿಮಂತನು ಅಲ್ಪದ ಲಾಭಕ್ಕಾಗಿ ಹೆಚ್ಚಿನ ವೆಚ್ಚವನ್ನೆಸಲಾಗದು. ಅಲ್ಪ ವ್ಯಯದಿಂದ ಹೆಚ್ಚಿನ ಲಾಭ ಪ್ರಯೋಜನಗಳನ್ನು ಪಡೆದುಕೊಳ್ಳುವುದೇ ಬುದ್ಧಿಮಂತಿಕೆಯು.

ಆದರೆ ಈ ಅಲ್ಪವನ್ನು ನೆರವೇರಿಸುವುದರಲ್ಲಿಯೂ ವಿಪತ್ತುಂಟೆಂದು ತೋರಿಬರುತ್ತಿರುವುದು. ಈ ಗುಟ್ಟು ಹೇಗಾದರೂ ರಟ್ಟಾಗುವುದಾದರೆ, ನಾನು ಸಮಾಜದಲ್ಲಿ ತಲೆಯೆತ್ತಿಕೊಂಡು ತಿರುಗಾಡುವುದು ಹೇಗೆ? ಇಷ್ಟೇ ಅಲ್ಲ. ಈ ನೀಚಕಾರ್ಯವು ನನ್ನಿಂದಾದುದೆಂದು ಪುರಪ್ರಮುಖರು ಅರಿವುದಾದರೆ, ಅವರು ಕೂಡಲೆಯೇ ನನ್ನನ್ನು ಗಲ್ಲಿಗೇರಿಸಿಬಿಡುವರು. ಹೀಗೆಂದ ಮೇಲೆ, ನಾನು ದೊಡ್ಡ ಪದವಿಯನ್ನು ಹೊದ್ದಿಯೂ ಪ್ರಯೋಜನವಿಲ್ಲದೆಯೇ ಹೋಗುವುದು. ಆದುದರಿಂದ ನನಗೆ ಪ್ರಧಾನ ಸೇನಾಪತಿಯ ಪದವಿಯು ಎಂದೆಂದಿಗೂ ಬೇಡ."

ವಿಜಯಸಿಂಹನು ಈ ರೀತಿಯಾದ ಚಿಂತಾತರಂಗಗಳಲ್ಲಿ ತೇಲಿ ಮುಳುಗುತ್ತಾ ರಾತ್ರಿಯನ್ನು ಹೇಗೋ ಹಾಗೆ ಕಳೆದನು. ಆತನ ಜೀವಿತ ಕಾಲದಲ್ಲಿ ಒಂದು ದಿನವಾದರೂ ಇಂತಹ ಚಿಂತೆಯು ಮನವನ್ನು ಆವರಿಸಿ ಕಿರುಕುಳವನ್ನುಂಟುಮಾಡಿರಲಿಲ್ಲ.

ಸೇನಾಪತಿಯಾಗುವ ಪ್ರಲೋಭನವು ಬಲು ದೊಡ್ಡ ಪ್ರಲೋಭನವು. ಒಂದೊಂದು ವೇಳೆ ಈ ಪ್ರಲೋಭನವು ವಿಜಯಸಿಂಹನನ್ನು ಅತ್ತ ಕಡೆಗೆ ಓಡಿದೆಳೆಯುವುದು. ಒಂದೊಂದು ವೇಳೆ ಶಿಶುಹತ್ಯೆಯ ಸ್ಮರಣೆಯು ಬಂದ ಕೂಡಲೆ, ಆತನ ಎದೆಯು ಪುಡಿಪುಡಿಯಾಗಿ ಹೋಗುವುದು. ಇಂತಹ ಉಭಯ ಸಂಕಟದ ಮಧ್ಯದಲ್ಲಿ ಸಿಲುಕಿಕೊಂಡು ಆತನೇನ ಮಾಡಬಹುದು? ಆತನು ಹುಚ್ಚನಾಗಬೇಕಲ್ಲದೆ, ಬೇರೆಯ ಮಾರ್ಗವೇ ಇಲ್ಲ.

ಮರುದಿನದ ಪ್ರಾತಃಕಾಲದಲ್ಲಿ ವಿಜಯನು ಏಕಾಕಿಯಾಗಿ ರಾಜಧಾನಿಯನ್ನು ಬಿಟ್ಟು ಹೊರಟು ಹೋದನು. ವಿಜಯನು ತಟ್ಟನೆ ಪಟ್ಟಣವನ್ನು ಬಿಟ್ಟು ಹೋದುದಕ್ಕಾಗಿ ಅನೇಕರು ವಿಸ್ಮಿತರಾದರು. ನಮ್ಮ ಪಾಠಕ ಮಹಾಶಯರು ವಿಸ್ಮಿತರಾಗಲು ಕಾರಣವೇನೂ ಇಲ್ಲ. ಏತಕೆಂದರೆ—ವಿಜಯಸಿಂಹನು ಚಿತ್ತೂರು ದುರ್ಗಕ್ಕೆಯಾತ್ರೆ ತೆರಳಿರುವನು. ಪಾಪಪುಣ್ಯಗಳ ಯುದ್ಧದಲ್ಲಿಯೂ, ಲೋಭ ಹತ್ಯೆಗಳ ಘೋರ ಸಮರದಲ್ಲಿಯೂ ಪಾಪಲೋಭಗಳೇ ಜಯಿಸುವುವು.

ವಿಜಯನು ಚಿತ್ತೂರು ದುರ್ಗಕ್ಕೆ ತೆರಳಿರುವನು. ಆಗ ಅವನ ಹೇಳಿಕೊಂಡುದೇನೆಂದರೆ—"ಯುದ್ಧದಲ್ಲಿ ನಾನು ಎಷ್ಟೋ ಜನರನ್ನು ಕೊಂದಿರುವೆನು. ಅಲ್ಲದೆಯೂ ನಾನು ಬೇಟೆಗೆ ಹೋಗಿ ಎಷ್ಟೋ ಪ್ರಾಣಗಳನ್ನೂ ಕೊಂದಿರುವೆನು. ಇಷ್ಟು ಪ್ರಾಣಹತ್ಯೆ ಮಾಡಿದವನಿಗೆ ಶಿಶುಹತ್ಯೆಯು ಅದೊಂದು ಅಸಾಧ್ಯವೇ? ಈ ಕೆಲಸವನ್ನು ಆರಿಗೂ ಗೋಚರವಾಗದಂತೆ ನೆರವೇರಿಸಿಬಿಟ್ಟರಾಯಿತು. ಈ ವಿಷಯದಲ್ಲಿ ನೀತಿಯು ಹೀಗಿರುವುದು :—

ಷಟ್ಕರ್ಣೋಭಿದ್ಯತೇ ಮಂತ್ರಃ। ಚತುಃ ಕರ್ಣೋನ ಭಿದ್ಯತೇ ॥
ದ್ವಿಕರ್ಣಸ್ಯ ಚ ಮಂತ್ರಸ್ಯ। ಬ್ರಹ್ಮಾಪ್ಯಂತಂ ನ ಗಚ್ಛತಿ ॥

ತಾತ್ಪರ್ಯವೇನೆಂದರೆ—ಆರು ಕಿವಿಗಳಿಗೆ,—ಎಂದರೆ, ಮೂರು ಜನರಿಗೆ ಗೊತ್ತಾದ ಆಲೋಚನೆಯು ಎಲ್ಲೆಲ್ಲಿಯೂ ಹರಡುವುದು. ನಾಲ್ಕು ಕಿವಿಗಳಿಗೆ,—ಎಂದರೆ, ಇಬ್ಬರಿಗೆ ಗೊತ್ತಾದುದು ರಹಸ್ಯವಾಗಿರುವುದು. ಎರಡು ಕಿವಿಗಳಿಗೆ,—ಎಂದರೆ, ಒಬ್ಬನಲ್ಲಿಯೇ ಅಡಗಿರುವ ಆಲೋಚನೆಯು ಬ್ರಹ್ಮನಿಂದಲೂ ಅರಿಯಲು ಅಸಾಧ್ಯವು.

ಈ ನೀತಿಗನುಸಾರವಾಗಿ ನಾನು ಈ ಕೃತ್ಯವನ್ನು ಆರಿಗೂ ತಿಳಿಸದೆಯೇ ಗುಟ್ಟಿನಲ್ಲಿಯೇ ನೆರವೇರಿಸಿಬಿಡುವೆನು.''

ಪಾಪಿಯು ಹೀಗೆಲ್ಲಾ ಆಲೋಚಿಸುವನು, ಆದರೆ ಆ ಪಾಪ ಕಾರ್ಯವು ಎಂದಿಗೂ ಗುಟ್ಟಾಗಿರಲೊಲ್ಲದು. ಪಾಪಕಾರ್ಯದಲ್ಲಿ ನಿರತನಾದವನು, ತನ್ನ ಅಂತಃಕರಣವು ಬೇಡವೆಂದು ನಿಷೇಧಿಸುತ್ತಿದ್ದರೂ, ಅದನ್ನು ಲೆಕ್ಕಿಸದೆಯೇ ತನ್ನ ದುಷ್ಕಾರ್ಯದಲ್ಲಿ ಮುಂದೆ ನುಗ್ಗುವನು. ಆಗ ಅವನ ಹಿತಾಹಿತ ಜ್ಞಾನವು ಹಾಳಾಗಿಯೇ ಹೋಗಿರುವುದು.

---

## ನಲವತ್ತೊಂಬತ್ತನೆಯ ವಿಲಾಸ

ವಿಜಯಸಿಂಹನು ಚಿತ್ತೂರು ದುರ್ಗಕ್ಕೆ ಬಂದಿರುವನು, ಆದರೂ ಕುಮುದಿನಿಯನ್ನು ನೋಡುವುದಕ್ಕೆ ಮುಟ್ಟಿಗೆ ಅವನ ಮನವು ಒಡಂಬಡಲಿಲ್ಲ. ಆತನು ಮೊದಲು ಕುಮುದಿನಿಯ ಸ್ಥಿತಿಗತಿಗಳನ್ನು ಅರಿವುದಕ್ಕೆ ಪ್ರಾರಂಭಮಾಡಿದನು. ಆಕೆಯ ವಿಷಯದಲ್ಲಿ ಆತನಿಗೆ ತಿಳಿದು ಬಂದುದೇನೆಂದರೆ :—

"ಕುಮುದಿನಿಯು ಆವಾಗಲೂ ವಿಲಾಸವನ್ನು ಬಯಸುತ್ತಿಲ್ಲ. ಆಕೆಯು ವಿಶೇಷವಾಗಿ ಆರೊಡನೆಯೂ ಮಾತನಾಡುತ್ತಿಲ್ಲ. ಆಕೆಯು ಮನೆಯಿಂದ ಹೊರಗೆ ಬಂದವಳೇ ಅಲ್ಲ. ಆಕೆಗೆ ಆಹಾರದಲ್ಲಿ ರುಚಿಯಿಲ್ಲದುದರಿಂದ, ಆಕೆಯು ಇಷ್ಟಪಟ್ಟರೆ ಊಟಮಾಡುವಳು ; ಇಲ್ಲವಾದರೆ, ಉಪವಾಸಮಾಡುವಳು.

ಆಕೆಯ ಮುಖವನ್ನು ನೋಡಿದರೆ, ಎಂಥವರ ಹೃದಯವಾದರೂ ಒಡೆದು ಹೋಗದಿರದು, ಎಂಥವರ ಕಣ್ಣುಗಳಲ್ಲಿಯಾದರೂ ನೀರು ಬರುವು

ವಕ್ಕೆ ಪ್ರತಿಯಾಗಿ ರಕ್ತವೇ ಬಂದುಬಿಡುವುದು. ದಾಸದಾಸಿಯರಾರೂ ಬಲು ತೆರನಾಗಿ ಆಕೆಯ ಬಳಿಯಲ್ಲಿರುವುದಿಲ್ಲ. ಎಂತಹ ಕಠಿನ ಹೃದಯರಾದ ಸೇವಕರು ಕೂಡ ಕುಮುದಿನಿಗಾಗಿ ಅಡಿಗಡಿಗೂ ಸಂಕಟಪಡುತ್ತಿರುವರು. ಆಕೆಯ ಬಳಿಯಲ್ಲಿ ಸಖಿಯಾದ ಮಾಲತಿಯೊಬ್ಬಳು ಆವಾಗಲೂ ಇರುತ್ತಿರುವಳು. ಬೇಕಾದಲ್ಲಿ ಕುಮುದಿನಿಯು ಮಾಲತಿಯೊಡನೆ ಒಂದೆರಡು ಮಾತುಗಳನ್ನಾಡುವಳು, ಆದರೆ ಆಕೆಗೆ ಮಾತನಾಡುವುದಕ್ಕೇ ಇಷ್ಟವಿಲ್ಲ. ಆಕೆಗೆ ಆವುದೂ ಬೇಡವೆನಿಸಿರುವುದು. ಆಕೆಯು ಹಗಲಿರುಳೂ ಗಂಡನನ್ನೂ, ಮಾಳವದ ಸಿಂಹಾಸನಾಧಿಪತ್ಯವನ್ನೂ, ತನ ಮಗುವನ್ನೂ ಜ್ಞಾಪಿಸಿಕೊಂಡು ಅಳುವುದನ್ನು ಹೊರತಾಗಿ ಮತ್ತಾವುದನ್ನೂ ಬಯಸಳು. ಆಕೆಯು ಅತ್ತು ಅತ್ತು ಕಣ್ಣೀರಿನಿಂದ ಕೈತೊಳೆಯುತ್ತಾ ಆಯುಶ್ಶೇಷದಿಂದ ಬದುಕಿರುವಳು. ನೋಡಿದವರೆಲ್ಲರೂ ಆಕೆಯನ್ನು ಜೀವಚ್ಛವನೆಂದು ಹೇಳಿಕೊಳ್ಳುತ್ತಿರುವರು.''

ವಿಜಯಸಿಂಹನು ಈ ಸಂಗತಿಯನ್ನು ಕೇಳಿ ತಿಳಿದುಕೊಂಡ ಬಳಿಕ, ಅವನಿಗೆ ಮತ್ತೂ ತಿಳಿದುಬಂದುದೇನೆಂದರೆ :—'' ರಾಜಕುಮಾರಿಯು ಆವಾಗಲೂ ತನ್ನ ಮಗುವನ್ನು ಮತ್ತಾರ ಕೈಯಲ್ಲಿಯೂ ಕೊಡದೆ ತಾನೇ ಎತ್ತಿಕೊಂಡು ಕಾಪಿಡುತ್ತಿರುವಳು. ಆಕೆಯು ಆ ಮಗುವನ್ನು ಮಾಲತಿಯ ಕೈಗೆ ಕೊಡುವುದಕ್ಕೂ ಮೇಲೆ ಕೆಳಗೆ ನೋಡುವಳು.''

ವಿಜಯನು ಮೇಲೆ ಕಂಡ ಈ ಸಂಗತಿಗಳನ್ನು ಕಿವಿಯಾರೆ ಕೇಳಿ ಚಕಿತನಾದನು. ಈ ಲೋಕದಲ್ಲಿ ಕುಮುದಿನಿಯ ಯೋಗಕ್ಷೇಮವನ್ನು ವಹಿಸುವವರಾರೂ ಇರಲಿಲ್ಲ. ಆಕೆಯು ದೇವರ ಮೇಲೆ ಭಾರಹಾಕಿ, ಮಗುವನ್ನು ಎತ್ತಿಕೊಂಡು ಅಳುವಳು ; ಹಾಗೂ ಕಣ್ಣೀರ ಸುರಿಸುವಳು.

ಕುಮುದಿನಿಗೆ ಆಕೆಯ ಮಗುವೇ ಏಕಮಾತ್ರಾವಲಂಬನವು. ಆದುದರಿಂದ ಅರೆಗಳಿಗೆಯಾದರೂ ಆಕೆಯು ತನ್ನ ಮಗುವನ್ನು ಕಣ್ಮರೆಯಾಗುವುದಕ್ಕೆ ಬಿಡಳು. ಆವಾಗಲೂ ಮಗುವಿಗಾಗಿ ಕೊರಗಿಕೊರಗಿ ಕುಮುದಿನಿಯು ಕೃಶೆಯಾಗಿ ಹೋಗಿರುವಳು. ಅವಳ ದೇಹದಲ್ಲಿ ಮೊದಲಿನ ಸೌಂದರ್ಯವಿಲ್ಲ, ಮೊದಲಿನ ರೂಪವಿಲ್ಲ, ಮೊದಲಿನ ಅಲೌಕಿಕವಾದ

ಆ ಲಾವಣ್ಯವಿಲ್ಲ. ಆವಳು ಒಂದಾನೊಂದು ಕಾಲದಲ್ಲಿ ಸುವರ್ಣದ ಪುತ್ತಳಿಯಾಗಿದ್ದಳೋ, ಆಕೆಯು ಈಗ ಶೋಕದುಃಖಗಳ ಭಯಂಕರಪ್ರತಿಮೆಯಾಗಿ ಹೋಗಿರುವಳು.

ವಿಜಯನು ಇದೆಲ್ಲವನ್ನೂ ಕೇಳಿ ಚಿಂತಿಸಿದನು :—

" ತಾಯಿಯು ತನ್ನ ಮಗುವಿನಲ್ಲಿ ಇಷ್ಟು ಪ್ರೀತಿಯನ್ನಿಟ್ಟಿರುವಲ್ಲಿ, ನಾನು ನಿರ್ದಯನಾಗಿ ಆ ಮಗುವನ್ನು ಆಕೆಯಿಂದ ಹೇಗೆ ಬೇರ್ಪಡಿಸಲಿ? ಈಕೆಯು ಮೊದಲೇ ದುಃಖದಿಂದ ಕೊರಗಿ ಕೊರಗಿ ಸಾಯುತ್ತಿರುವಳು. ಇಂತಹವಳಿಂದ ನಾನು ಮಗುವನ್ನು ಕಿತ್ತುಕೊಂಡು ಹೋಗುವುದಾದರೆ, ಇವಳ ಗತಿಯೇನಾಗಬೇಕು? ಇವಳು ಸತ್ತೇ ಹೋಗುವಳು—ಎಂದ ಮೇಲೆ, ನಾನು ಶಿಶು ಹತ್ಯೆಯನ್ನು ಮಾಡುವುದರ ಜತೆಗೆ ಸ್ತ್ರೀಹತ್ಯೆಯನ್ನೂ ಮಾಡಿದಂತಾಗುವುದು. ಇದು ಆರು ಮಾಡುವ ಕೆಲಸ? ನಾನು ಖಂಡಿತವಾಗಿಯೂ ಈ ಕೆಲಸವನ್ನು ಮಾಡಲಾರೆನು.''

ವಿಜಯನು ಹೀಗೆ ಭಾವಿಸಿಕೊಂಡು ಹಿಂದಿರುಗಿ ಹೊರಟುಹೋಗುವುದಕ್ಕೆ ಸಿದ್ಧನಾದನು. ಆಗ ಅವನ ಮನದಲ್ಲಿ ಹೊಳೆದುದೇನೆಂದರೆ :— " ನಾನು ಕೆಲಸವನ್ನು ನೆರವೇರಿಸದೇ ಹಿಂದಿರುಗಿ ಹೋಗುವುದಾದರೆ, ಮಹಾರಾಣಿಯು ನನ್ನನ್ನು ಕಂಡು ರೇಗಿ ರೇಗಿ ಬೀಳುವಳು. ಬಳಿಕ ನಾನು ಆಕೆಯ ಕೋಪಾಗ್ನಿಯಲ್ಲಿ ಆಹುತಿಯಾಗಬೇಕಾಗುವುದು. ಹೀಗಾಗುವುದಾದರೆ, ನಾನು ಮೊದಲಿನ ಕೆಲಸವನ್ನೂ ಕಳೆದುಕೊಂಡು ಸಾಯುವ ವರೆಗೂ ಸೆರೆಮನೆಯಲ್ಲಿ ವಾಸಮಾಡಿಕೊಂಡಿರಬೇಕಾಗುವುದು. ನಾನು ಬದುಕಿಕೊಂಡಿರಬೇಕಾದರೆ, ಮಹಾರಾಣಿಯ ಇಷ್ಟವನ್ನು ನೆರವೇರಿಸಲೇ ಬೇಕು. ಇಲ್ಲವಾದರೆ ನನಗೆ ಉತ್ತಾರಣೆಯೇ ಇಲ್ಲ.''

ಇದಾದ ಬಳಿಕ ವಿಜಯನು ತನ್ನ ಮನದಲ್ಲಿ ಕೊಂಚಕೊಂಚವಾಗಿ ಧೈರ್ಯವನ್ನು ತೆಗೆದುಕೊಂಡು ಮತ್ತೆ ಆಲೋಚಿಸಿದನು :— " ನಾನು ಇಷ್ಟುದೂರ ಬಂದ ಮೇಲೆ ಕುಮುದಿನಿಯನ್ನು ನೋಡದೇ ಹೋಗುವುದು ತರವಲ್ಲ. ನಾನು ಆಕೆಯನ್ನು ನೋಡಿದ ಮೇಲೆ, ಆ ಮಗುವನ್ನು ಆಕೆಯಿಂದ ಹೇಗಾದರೂ ಬೇರ್ಪಡಿಸಲೇ ಬೇಕು. ಬೇರ್ಪಡಿಸಿದ ಮೇಲೆ, ಆ

ಮಗುವನ್ನು ಕೊಲ್ಲದೇ ಇದ್ದರಾಯಿತು. ಬಳಿಕ ಆ ಮಗುವನ್ನು ಆರಿಗಾದರೂ ಕೊಟ್ಟುಬಿಟ್ಟು ಮಹಾರಾಣಿಗೆ 'ಮಗುವನ್ನು ಕೊಂದುಬಿಟ್ಟೆನು' ಎಂದು ತಿಳಿಸಿಬಿಟ್ಟರೆ, ನನ್ನ ರೊಟ್ಟಿ ಜಾರಿ ತುಪ್ಪದಲ್ಲಿಬಿದ್ದಂತಾಗುವುದು. ಹೀಗೆ ಮಾಡುವುದರಿಂದ, ಆವ ಪಾತಕಕ್ಕೂ ಎಡೆಯಾಗದೆ, ಸ್ವಕಾರ್ಯವನ್ನು ಸಾಧಿಸಿಕೊಂಡಂತಾಗುವುದು. ಈಗ ನಾನು ಆವ ಉಪಾಯವನ್ನು ಅವಲಂಬಿಸಿ ಆ ಮಗುವನ್ನು ಹೊತ್ತುಕೊಂಡು ಬರಲಿ? ಬಲಾತ್ಕಾರದಿಂದ ಆ ಮಗುವನ್ನು ಆಕೆಯ ಕೈಯಿಂದ ಕಿತ್ತುಕೊಂಡು ಬರುವುದಕ್ಕೆ ನನ್ನ ಮನವು ಇಷ್ಟಪಡಲಾರದು. ಇರಲಿ; ಆಕೆಯನ್ನು ನೋಡಿದ ಬಳಿಕ, ಹೇಗೆ ಬುದ್ಧಿ ಹುಟ್ಟುವುದೋ ಹಾಗೆ ಮಾಡುವೆನು."

ವಿಜಯನು ಹೀಗೆ ಸ್ಥಿರಮಾಡಿಕೊಂಡು ಕುಮುದಿನಿಯನ್ನು ನೋಡುವುದಕ್ಕೆ ಹೋದನು. ದಾಸಿಯು ಸ್ವಾಮಿನಿಯ ಬಳಿಗೆ ಬಂದು—ತಾಯೆ! ಮಾರವಾಡದಿಂದ ನಗರಾಧ್ಯಕ್ಷನಾದ ವಿಜಯಸಿಂಹನು ಬಂದಿರುವನು. ಆವುದೋ ಗುರುತರವಾದ ರಾಜಕಾರ್ಯಕ್ಕಾಗಿ ತಮ್ಮನ್ನು ನೋಡಬೇಕೆಂದು ಆತನು ಬಯಸುತ್ತಿರುವನು, ಎಂದು ತಿಳಿಸಿದಳು.

ಕುಮುದಿನಿಯು ಈ ಮಾತನ್ನು ಕೇಳಿ ಕೇವಲವಾದ ವ್ಯಾಕುಲತೆಯಿಂದ ಅಧೀರೆಯಾಗಿ ಸುಮ್ಮನೆಯೇ ಕುಳಿತಳು. ಇದನ್ನು ಕಂಡು ಮಾಲತಿಯು—ತಾಯೆ! ಧೈರ್ಯವನ್ನು ತಾಳು. ಇಷ್ಟು ಕಾತರೆಯಾಗಬಾರದು. ಆರಾದರೂ ನಿನ್ನ ದುರವಸ್ಥೆಯನ್ನು ನೋಡಿದರೆ, ಏನೆಂದುಕೊಂಡಾರು? ನೀನೇ ನ್ಯಾಯವಾಗಿ ಮಾರವಾಡದ ಮಹಾರಾಣಿಯಾಗಿ ಹೀಗಾಡುವುದು ತರವಲ್ಲ, ಎಂದು ತಿಳಿಸಿದಳು. ಇಷ್ಟಾದರೂ ಕುಮುದಿನಿಗೆ ನಂಬುಗೆಯೇ ಇಲ್ಲ. ಆರೋ ತನ್ನ ಮಗುವನ್ನು ಕಿತ್ತುಕೊಂಡು ಹೋಗುವುದಕ್ಕಾಗಿ ಬಂದಿರಬಹುದೆಂದು ತಿಳಿದು ವ್ಯಸನದಿಂದ ಆವ ಮಾತನ್ನೂ ಆಡದಿರಲು, ಮತ್ತೆ ಮಾಲತಿಯು—ತಾಯೆ! ವಿಜಯಸಿಂಹನನ್ನು ಒಳಗೆ ಬರಹೇಳಲಿ? ಎಂದು ಕೇಳಿದಳು.

ಕುಮುದಿನಿ—ವಿಜಯಸಿಂಹನಾರು?

ಮಾಲತಿ—ಆತನು ನಗರಾಧ್ಯಕ್ಷನು. ಆವುದೋ ರಾಜ ಕಾರ್ಯಕ್ಕಾಗಿ ಆತನು ಬಂದಿರುವನಂತೆ. ಯುವರಾಜನು ಇಲ್ಲದಿರುವಾಗ ನೀನೇ ಮಾರವಾಡದ ಮಹಾರಾಣಿಯಲ್ಲವೇ? ಇದನ್ನು ನೀನು ಮರೆತೇ ಬಿಡುವೆಯಲ್ಲಾ?

ಕುಮುದಿನಿ—(ಅಧೀರೆಯಾಗಿ) ಮಾಲತಿ! ನಾನು ಭಾಗ್ಯಹೀನೆಯು. ನನ್ನೊಡನೆ ಅದೆಂತಹ ರಾಜಕಾರ್ಯವಿದ್ದೀತು? ನಿನಗಾದರೋ ಒಂದೂ ತಿಳಿಯುವುದಿಲ್ಲ. ನನ್ನ ಮಗುವನ್ನು ಅಪಹರಿಸಿಕೊಂಡು ಹೋಗುವುದಕ್ಕೆ ಆತನು ಬಂದಿರುವಂತೆ ನನಗೆ ಹೊಳೆಯುತ್ತಿರುವುದು.

ಮಾಲತಿ—ಸಖಿ! 'ಅತಿ ಸ್ನೇಹಃ ಪಾಪಶಂಕೀ.' ನೀನು ಮಗುವಿನಲ್ಲಿ ಅತಿ ಪ್ರೀತಿಯನ್ನಿಟ್ಟಿರುವುದರಿಂದ ನಿನಗೆ ಆರಲ್ಲಿಯೂ ನಂಬುಗೆಯೇ ಇಲ್ಲ. ಇದರಿಂದ ನೀನು ಅಡಿಗಡಿಗೂ ಭಯವನ್ನೇ ಚಿಂತಿಸುತ್ತಿರುವೆ. ಪ್ರೇಮಾಸ್ಪದವಾದ ಶಿಶುವನ್ನು ತಾಯಿಯಿಂದ ಕಿತ್ತುಕೊಂಡು ಹೋಗುವ ರಾಕ್ಷಸನು ಈ ಸಂಸಾರದಲ್ಲಿ ಆವನಿರುವನು?

ಕುಮುದಿನಿ—ಹಾಗಾದರೆ ಆತನನ್ನು ಒಳಗೆ ಬರಹೇಳು.

ಇದನ್ನು ಕೇಳಿ ದಾಸಿಯು ವಿಜಯನನ್ನು ಕರೆದುಕೊಂಡು ಬರಲು ಹೋದಳು.

---

## ಐವತ್ತನೆಯ ವಿಲಾಸ

ವಿಜಯಸಿಂಹನು ಕುಮುದಿನಿಯ ಸಮ್ಮುಖದಲ್ಲಿ ಬಂದು ನಿಂತನು. ನಿಂತ ಕೂಡಲೆ ಆತನು ಕುಮುದಿನಿಯ ವಿಷಣ್ಣ ಮೂರ್ತಿಯನ್ನು ನೋಡಿ ದುಃಖದಿಂದ ಎದೆಯೊಡೆದವಂತಾಗಿಬಿಟ್ಟನು. ಆತನ ಹೃದಯದಲ್ಲಿ ಶೋಕಾಗ್ನಿಯು ಧಕ್ ಎಂದು ಪ್ರಜ್ವಲಿತವಾಗಲು, ರಕ್ತವು ವಿದ್ಯುದ್ವೇಗದಿಂದ ಆತನ ಶರೀರದಲ್ಲಿ ಹರಿಯಲಾರಂಭಿಸಿತು. ವಿಜಯನು ಮೊದಲು ಕುಮುದಿನಿಯ ವೃತ್ತಾಂತವನ್ನು ಕೇಳಿ ತನ್ನ ಹೃದಯ ಫಲಕದಲ್ಲಿ ಆಕೆಯ ವಿಷಣ್ಣ ಮೂರ್ತಿಯನ್ನು ಆವ ತೆರನಾಗಿ ಚಿತ್ರಿಸಿಕೊಂ

ಡಿದ್ದನೋ, ಈಗ ಆತನು ಆಕೆಯನ್ನು ಕಣ್ಣಾರೆ ನೋಡಿದ ಕೂಡಲೆ, ತನ್ನ ಪೂರ್ವಭಾವನೆಯು ಶತಾಂಶದಲ್ಲಿ ಒಂದಂಶದಷ್ಟೂ ಹೋಲಲಾರದೆಂದು ತಿಳಿದುಕೊಂಡನು. ವಿಜಯನು ಕುಮುದಿನಿಯನ್ನು ನೋಡಿ, ಜಗತ್ತಿನ ಸುಖವೆಲ್ಲವೂ ಮೂರ್ತೀಭವಿಸಿ ಕುಮುದಿನಿಯ ರೂಪದಲ್ಲಿ ಅವತರಿಸಿದೆಯೋ ಎಂಬಂತೆ ಭಾವಿಸಿಕೊಂಡವನಾಗಿ ಮರದ ಬೊಂಬೆಯಂತೆ ಒಂದು ಕ್ಷಣಕಾಲ ನಿಂತುಬಿಟ್ಟನು. ಬಳಿಕ ಆತನು ಚಿಂತಿಸಿದು ದೇನೆಂದರೆ :—

"ನಾನೆಂತಹ ಪಾಷಂಡನು, ನಾನೆಂತಹ ನರಾಧಮನು! ನಾನು ಸತ್ಯವಾಗಿಯೂ ಹೃದಯ ಹೀನನಾದ ಪಶು. ಕುಮುದಿನಿಯ ಪ್ರಾಣಕ್ಕೆ ಏಕಮಾತ್ರಾವಲಂಬನನಾಗಿಯೂ, ಜೀವನದ ಆನಂದಮಯ ಗ್ರಂಥಿಯಾಗಿಯೂ, ಹೃದಯದ ಸಾರ ಸರ್ವಸ್ವನಾಗಿಯೂ, ಪುರಾತನ ರಾಜಪುತ್ರ ಕುಲಾಂಕುರನಾಗಿಯೂ ಇರುವ ಶಿಶುವನ್ನು ವಿಷಾದಿನಿಯಾದ ಕುಮುದಿನಿಯಿಂದ ನಾನು ಅಪಹರಿಸಿಕೊಂಡು ಹೋಗಲು ಬಂದೆನಲ್ಲಾ! ಇದು ಮನುಷ್ಯತ್ವವನ್ನು ಪಡೆದು ಬಾಳಬೇಕೆಂದಿರುವವನ ಕೆಲಸವೇ? ಶಿವ ಶಿವ! ನನಗೆ ಇನ್ನು ಪ್ರಧಾನ ಸೇನಾಪತಿಯ ಕೆಲಸವು ಆವಶ್ಯಕವಿಲ್ಲ. ನನಗೆ ಮಾರವಾಡದ ಸಿಂಹಾಸನವು ದೊರೆಯುವಂತಿದ್ದರೂ, ಜಗತ್ತಿನ ಸಮಸ್ತವಾದ ಸಂಪತ್ತು ಕೈಸೇರುವ ಹಾಗಿದ್ದರೂ, ನಾನು ಮಟ್ಟಿಗೆ ಈ ಜಘನ್ಯವಾದ ಕೆಲಸವನ್ನು ಎಂದಿಗೂ ಮಾಡೆನು."

ಈ ಬಗೆಯ ಚಿಂತೆಯಿಂದ ವಿಜಯನು ಕಾತರನಾಗಿ ಮಗುವಿನಂತೆ ಅತ್ತು, ರಾಜಕುಮಾರಿಯ ಇದಿರಿನಲ್ಲಿ ಮೊಳಕಾಲೂರಿ ನಮಸ್ಕರಿಸಿ—ಮಹಾರಾಣಿ! ಇಂದು ಪರಪ್ರೇರಿತನಾದ ನಾನು ಭಯಂಕರವಾದ ಕಾರ್ಯವನ್ನು ನೆರವೇರಿಸಲೋಸುಗ ಇಲ್ಲಿಗೆ ಬಂದೆನು. ಆ ಕಾರ್ಯದ ಸ್ವರೂಪವನ್ನು ಕುರಿತು ಮಾತನಾಡಿ ಪ್ರಯೋಜನವಿರಲಾರದು. ಭಗವಂತನು ನನ್ನನ್ನು ಮಹಾಪಾತಕದಿಂದ ಇಂದು ಪಾರಗಾಣಿಸಿರುವನು. ದೇವಿ! ಇಂದು ಮೊದಲು ವಿಜಯಸಿಂಹನು ನಿನ್ನ ಪಾದಮೂಲದಲ್ಲಿ ಆಕ್ರೀತದಾಸನಾಗಿರುವನು. ನಾನು ಈಗಳೇ ಯುವರಾಜ ಲಲಿತಸಿಂಹನನ್ನು ಕಂಡುಕೊಂಡು ಆತನಿಗೆ ಒತ್ತಾಸೆಯಾಗಿ ನಿಲ್ಲುವೆನು. ತಾಯಿ!

ಇನ್ನು ನೀನು ಭಯಪಡಲು ಕಾರಣವೇನೂ ಇರುವುದಿಲ್ಲ. ಯುವರಾಜನು ೫೦,೦೦೦ ಭಿಲ್ಲ ಸೈನಿಕರೊಡನೆ ರಾಜಧಾನಿಯ ಕಡೆಗೆ ಬರುತ್ತಿರುವುದಾಗಿ ನಾನು ಕೇಳಿರುವನು. ಆತನು ಇಷ್ಟರಲ್ಲಿಯೇ ಬಂದು ನಿನ್ನ ಕಷ್ಟಗಳನ್ನು ನಿವಾರಿಸುವನು, ಎಂದು ವಿನಯ ನಮ್ರನಾಗಿ ಅರಿಕೆ ಮಾಡಿಕೊಂಡನು.

ಕುಮುದಿನಿಯೂ, ಮಾಲತಿಯೂ ವಿಜಯಸಿಂಹನ ಮಾತನ್ನು ಕೇಳಿ ವಿಸ್ಮಿತರಾಗಿ ಹೋದರು. ಇವರಿಬ್ಬರೂ ಆತನಾಡಿದ ಮಾತಿನ ಮರ್ಮ ವನ್ನು ಅರಿಯದವರಾಗಿ ಎವೆಯಿಕ್ಕದೆ ವಿಜಯನನ್ನು ನೋಡುತ್ತಾ ಕುಳಿ ತರು. ವಿಜಯನು ಇಂತೆಂದನು :-—'' ಮಾರಾಣಿ! ಅಪ್ಪಣೆಯಾದರೆ ಈ ಅಧಮನು ಈಗಳೇ ತೆರಳುವವನಾಗಿರುವನು. ನಾನು ಇಲ್ಲಿಂದ ಹೊರಟುಹೋಗುವುದಕ್ಕೆ ಮೊದಲು, ತಮ್ಮ ಅಪ್ಪಣೆಯನ್ನು ತೆಗೆದು ಕೊಂಡು ಒಂದು ವಿಷಯವನ್ನು ತಿಳಿಸಬೇಕೆಂದಿರುವೆನು. ತಾವು ಬಲು ಎಚ್ಚರಿಕೆಯಿಂದ ಈ ರಾಜಕುಮಾರನನ್ನು ರಕ್ಷಿಸಿಕೊಂಡು ಬರಬೇಕು. ನಿಮ್ಮ ಮಗುವನ್ನು ಕೊಲ್ಲುವುದಕ್ಕೆ ಬೇಕಾದ ಪ್ರಯತ್ನಗಳೆಲ್ಲವೂ ನಡೆ ಯುತ್ತಿರುವುವು.''

ಕುಮುದಿನಿಯು ಈ ಮಾತನ್ನು ಕೇಳಿದೊಡನೆಯೇ ತನ್ನ ಮಗುವನ್ನು ಗಟ್ಟಿಯಾಗಿ ಅಪ್ಪಿ ಕಂಬನಿಗರೆಯುತ್ತಾ ಮಾಲತಿಯನ್ನು ನೋಡಿ— ಸಖಿ! ನೋಡಿದೆಯಾ. ನಾನು ಈ ವಿಷಯವನ್ನು ನಿನಗೆ ಮೊದಲೇ ತಿಳಿಸಲಿಲ್ಲವೇ? ಎಂದಳು.

ಮಾಲತಿಯು ಇದನ್ನು ಕೇಳಿದ ಕೂಡಲೆ ಅಳುತ್ತಾ—ತಾಯೆ! ನನ್ನ ಪ್ರಾಣವಿರುವ ವರೆಗೂ, ನಾನು ಈ ಮಗುವನ್ನು ಮತ್ತಾರ ಕೈಗೂ ಕೊಡೆನು. ಈ ವಿಷಯದಲ್ಲಿ ನೀನು ಧೈರ್ಯವಾಗಿರು, ಎಂದು ಸಮಾ ಧಾನೋಕ್ತಿಗಳನ್ನಾಡಿದಳು.

ವಿಜಯ—(ನಮ್ರನಾಗಿ) ದೇವಿ! ನಾನು ಈಗಳೇ ಯುವರಾಜ ನಲ್ಲಿಗೆ ತೆರಳುವೆನು. ಅವರಿಗೇನಾದರೂ ಹೇಳಬೇಕಾದುದು ಇರುವು ದಾದರೆ, ತಿಳಿಸೋಣವಾಗಲಿ. ನಾನು ಅದನ್ನು ಅವರಲ್ಲಿ ಅರಿಕೆಮಾಡಿ ಕೊಳ್ಳುವೆನು.

ಕುಮುದಿನಿ—ವಿಜಯಮಹಾಶಯ! ನೀವು ಅವರನ್ನು ನೋಡುವುದಾದರೆ, 'ಕುಮುದಿನಿಯು ಬಹುಕಾಲ ಬದುಕುವುದಿಲ್ಲ,' ಎಂದು ಮಟ್ಟಿಗೆ ತಿಳಿಸೋಣವಾಗಲಿ. ಅವರಿಗೆ ನನ್ನ ವಿಷಯವಾಗಿ ಮತ್ತೇನನ್ನೂ ತಿಳಿಸಬೇಕಾದುದಿಲ್ಲ. ಅವರು ಸುಖವಾಗಿದ್ದರೆ ಸಾಕು. ಆದರೆ ಈ ಮಗುವು—

ಕುಮುದಿನಿಯು ಮುಂದೆ ಆವ ಮಾತನ್ನೂ ಆಡಲಾರದೇ ಹೋದಳು. ಬಳಿಕ ಆಕೆಯು ಮಾಲತಿಯನ್ನು ಅಪ್ಪಿಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಮಾಲತಿಯೂ ಈ ದೃಶ್ಯವನ್ನು ನೋಡಿ ಅಳಲಾರಂಭಿಸಿದಳು. ವಿಜಯನು ಇವರಿಬ್ಬರ ಸಂಕಟವನ್ನು ನೋಡಲಾರದವನಾಗಿ ಅಲ್ಲಿಂದೆದ್ದು ಬೇರೆಯ ಕಡೆಗೆ ಹೊರಟು ಹೋದನು.

ಈ ಘಟನೆಯು ನಡೆದ ಕೆಲವು ದಿನಗಳೊಳಗಾಗಿ, ಒಂದು ದಿನದ ಸೂರ್ಯೋದಯದ ವೇಳೆಯಲ್ಲಿ ಮಾರವಾಡದ ರಾಜಧಾನಿಯಲ್ಲಿ ಈ ರೀತಿಯಾಗಿ ಅದೊಂದು ಸುದ್ದಿಯೆದ್ದಿತು:—"ನಗರಾಧ್ಯಕ್ಷನಾದ ವಿಜಯಸಿಂಹನು ೧೦,೦೦೦ ಅಶ್ವಾರೋಹಿಗಳೊಡನೆ ನಗರವನ್ನು ಪರಿತ್ಯಾಗಮಾಡಿ ಹೊರಟುಹೋಗಿರುವನು. ಯುವರಾಜ ಲಲಿತಸಿಂಹನೊಡನೆ ಸೇರಿಕೊಳ್ಳಬೇಕೆಂಬುದೇ ಆತನ ಅಭಿಪ್ರಾಯವು."

ಈ ಸುದ್ದಿಯು ವಾಯುವಿನಿಂದ ಉತ್ತೇಜಿಸಲ್ಪಟ್ಟ ಅಗ್ನಿಯ ಜ್ವಾಲೆಯಂತೆ ಮನೆಯಿಂದ ಮನೆಗೆ ಹಬ್ಬಿತು. ಈ ಸುದ್ದಿಯು ಹಬ್ಬಿದ ಕೂಡಲೆ ನಗರದಲ್ಲೆಲ್ಲಾ ಕೋಲಾಹಲವೆದ್ದಿತು. ಮಹಾರಾಜಸಿಂಹನ ಅತ್ಯಾಚಾರದಿಂದ ಹೀಗೆಲ್ಲಾ ನಡೆದಿರುವುದೆಂದು ನಗರವಾಸಿಗಳೆಲ್ಲರೂ ಚೆನ್ನಾಗಿ ತಿಳಿದಿದ್ದರೂ, ಆರೂ ಗಟ್ಟಿಯಾಗಿ ಮಾತನಾಡಲು ಸಾಹಸವುಳ್ಳವರಾಗಿಯೇ ಇರಲಿಲ್ಲ. ರಾಜನಿಗೆ ತಿಳಿಸುವ ಮಾತಂತೂ ಅಸಾಧ್ಯವೇ ಆಗಿಹೋಗಿದ್ದಿತು.

ಇಂದಿನ ವರೆಗೂ ಪ್ರಜೆಗಳು ರಾಜನ ಹಾವಳಿಯನ್ನು ಸಹಿಸಿಕೊಂಡಾದರೂ ಸುಮ್ಮನೆ ಇದ್ದರೇ ಹೊರತು, ದೇಶದಿಂದ ಹೊರಟು ಹೋಗುವ ಆಲೋಚನೆಯು ಆರ ತಲೆಯಲ್ಲಿಯೂ ಉಂಟಾಗಲೇ ಇಲ್ಲ.

ಈಗ ರಾಜ್ಯದಲ್ಲಿ ಗೌರವಾಸ್ಪದನಾಗಿಯೂ, ರಾಜನಿಗೆ ಬೇಕಾದವನಾಗಿಯೂ, ನಗರಾಧ್ಯಕ್ಷನಾಗಿಯೂ ಇದ್ದ ವಿಜಯಸಿಂಹನು ಹಠಾತ್ತಾಗಿ ಹೊರಟುಹೋದುದನ್ನು ನೋಡಿ, ಎಲ್ಲರೂ ಭಯದಿಂದ ಚಕಿತರಾಗಿ ಹೋದರು. ಈ ಸುದ್ದಿಯು ಕ್ರಮಕ್ರಮವಾಗಿ ಮಹಾರಾಣಿ ಕಮಲಿನಿಗೂ ಗೊತ್ತಾಯಿತು. ಆಕೆಯು, ತಾನು ಹೇಳಿದ್ದ ಕೆಲಸವನ್ನು ವಿಜಯಸಿಂಹನು ನೆರವೇರಿಸದೆಯೇ ಶತ್ರುಪಕ್ಷವನ್ನು ಅವಲಂಬಿಸುವುದಕ್ಕೆ ಹೋದನೆಂದು ತಿಳಿದು ಕ್ರೋಧದಿಂದಲೂ, ದುಃಖದಿಂದಲೂ, ಅಭಿಮಾನದಿಂದಲೂ ಉನ್ಮತ್ತೆಯಾಗಿಹೋದಳು.

ಪ್ರಮದವನದಲ್ಲಿ ವಿಲಾಸಸಾಗರದಲ್ಲಿ ಮುಳುಗಿದ್ದ ಮಹಾರಾಜಸಿಂಹನಿಗೂ ಈ ಸುದ್ದಿಯು ಹೇಗೋ ಅರಿಕೆ ಮಾಡಲ್ಪಟ್ಟಿತು. ರಾಜನು ಇದನ್ನು ಕೇಳಿ—ಆತನು ಹೋದರೆ ಹೋಗಲಿ. ನನ್ನ ಕೆಲಸಕ್ಕೆ ಅಡ್ಡಲಾಗಿ ಬರಬೇಡ, ಎಂದು ಗದ್ದರಿಸಿದನು.

---

## ಐವತ್ತೊಂದನೆಯ ವಿಲಾಸ

ದಿವ್ಯಗಾನ ವಿಶಾರದೆಯೆನಿಸಿನ ಗಾಯಿಕೆಯೊಬ್ಬಳು ಎಲ್ಲಿಂದಲೋ ಬಂದು ಮಾರವಾಡದ ರಾಜಧಾನಿಯಲ್ಲಿ ವಾಸಮಾಡಿಕೊಂಡಿರುವಳು. ಆಕೆಯ ಕೋಕಿಲ ಕಂಠಕ್ಕೆ ಈ ಮೂರು ಲೋಕದಲ್ಲಿಯೂ ಹೋಲಿಕೆಯೇ ಇರಲಿಲ್ಲ. ಒಂದೆರಡು ದಿನಗಳೊಳಗಾಗಿ ಈಕೆಯ ಹೆಸರು ರಾಜಧಾನಿಯಲ್ಲೆಲ್ಲಾ ಹರಡಿ ಹೋಯಿತು. ಪುರನಿವಾಸಿಗಳೆಲ್ಲರೂ ಅಪೂರ್ವವಾದ ಈ ಸಂಗೀತವನ್ನು ಕೇಳುವುದಕ್ಕೆ ತಹತಹ ಪಡುತ್ತಿರುವರು. ಆದರೆ ಸುಲಭವಾಗಿ ಈ ಸಂಗೀತವನ್ನು ಕೇಳುವುದು ಎಲ್ಲರ ಪಾಲಿಗೂ ಬಂದುದಾಗಿರಲಿಲ್ಲ. ಆಕೆಯಾದರೋ ಕಂಡಕಂಡವರ ಮನೆಯಲ್ಲೆಲ್ಲಾ ಹಾಡತಕ್ಕವಳಾಗಿಯೂ ಇರಲಿಲ್ಲ. ಹಾಗೂ ಒಂದು ಲಕ್ಷ ಮುದ್ರೆಗಳನ್ನು ಕೊಟ್ಟಲ್ಲದೆ ಮತ್ತೊಂದು ಕಡೆಗೆ ಹೋಗಿ ಹಾಡತಕ್ಕವಳಾಗಿಯೂ ಇರಲಿಲ್ಲ.

ಆಕೆಯು ಸಂಗೀತದಲ್ಲಿ ಎಷ್ಟು ನಿಪುಣೆಯಾಗಿದ್ದಳೋ, ರೂಪ ದಲ್ಲಿಯೂ ಅಷ್ಟು ಅದ್ವಿತೀಯ ಸುಂದರಿಯಾಗಿದ್ದಳು. ರಾಜಪುತ್ರಸ್ಥಾನ ದಲ್ಲಿಯೇ ಅಂತಹ ರೂಪವತಿಯಿಲ್ಲವೆಂದು ಜನರು ಹೇಳಿಕೊಳ್ಳುವುದಕ್ಕೆ ಮೊದಲು ಮಾಡಿದರು. ಆಕೆಯ ರೂಪವನ್ನಾದರೂ ಒಂದು ಸಲದ ಮಟ್ಟಿಗೆ ನೋಡಿ ಧನ್ಯರಾಗಬೇಕೆಂದು ಎಷ್ಟೋ ಜನರು ಬಯಸಿ ಎಲ್ಲೆ ಲ್ಲಿಂದಲೋ ಬರುತ್ತಿದ್ದರು. ಆಕೆಯನ್ನು ಒಂದು ಸಲ ನೋಡಿದವರೆಲ್ಲರೂ ಆ ದಿವ್ಯ ರೂಪದಲ್ಲಿ ಮಗ್ನರಾಗಿ ಮೈಮರೆಯುತಿದ್ದರು. ಆಕೆಯು ಹೊರಗೆ ಬಂದಾಗ ನೋಡೋಣವೆಂದು ಕೆಲಕೆಲವರು ಹಗಲಿರುಳೂ ಕಾದಿರುವರು ; ಆದರೆ ಆಕೆಯು ಹೊರಗೆ ಬರುತ್ತಲೇ ಇರಲಿಲ್ಲ, ಹಾಗೂ ಆಕೆಯು ಆರನ್ನೂ ತನ್ನ ಮನೆಗೆ ಬರಮಾಡಿಕೊಳ್ಳುತ್ತಲೂ ಇರಲಿಲ್ಲ.

ಹೇಳುವುದಕ್ಕೆ ಬಂದುದೇನೆಂದರೆ:—ಅನೇಕರು ಆಕೆಯನ್ನು ಒಂದು ಸಲವಾದರೂ ನೋಡುವುದಕ್ಕೆ ಅನುಕೂಲಿಸದೇ ಹೋಯಿತು. ಅಲ್ಲದೆಯೂ ಆಕೆಯ ಸಂಗೀತವನ್ನು ಒಂದು ಕ್ಷಣಕಾಲದ ಮಟ್ಟಿಗಾದರೂ ಕೇಳಿ ಆನಂದಿಸುವುದಕ್ಕೆ ಆರಿಗೂ ಲಭ್ಯವಿಲ್ಲದೇ ಹೋದುದು. ಇಷ್ಟಾದರೂ ಆರ ಬಾಯಲ್ಲಿ ನೋಡಿದರೂ ಆಕೆಯ ಸ್ತೋತ್ರವು ತುಂಬಿ ಹೋಗಿದ್ದಿತು. ಇದಕ್ಕೆ ಕಾರಣವನ್ನು ಈ ರೀತಿಯಾಗಿ ಕಲ್ಪಿಸಬಹುದಾಗಿದ್ದಿತು. ಆಕೆಯು ಒಂದೊಂದು ವೇಳೆ ಬೇಸರವಾದಾಗ ಮನೆಯಲ್ಲಿಯೇ ಹಾಡಿಕೊಳ್ಳುವಳು, ಬೇಕಾದಾಗ ವೀಣೆಯನ್ನು ನುಡಿಸಿಕೊಳ್ಳುವಳು. ಇದನ್ನು ಅಕ್ಕಪಕ್ಕದ ಮನೆಯವರು ಕೇಳಿದ್ದರೂ ಕೇಳಿರಬಹುದು. ಆಕೆಯು ಒಂದೊಂದು ವೇಳೆ ವಾತಾಯನದ ಬಳಿಯಲ್ಲಿ ಬಂದು ನಿಂತು ಪ್ರವಾತಸೇವನೆಯನ್ನು ಮಾಡುತ್ತಿರುವಳು. ಆಗ ಬೀದಿಯಲ್ಲಿ ಸಂಚಾರ ಮಾಡತಕ್ಕವರು ಆಕೆಯ ರೂಪವನ್ನು ಒಂದು ಸಲ ನೋಡಿದ್ದರೂ ನೋಡಿರಬಹುದು. ಇಷ್ಟರಿಂ ದಲೇ ಆ ರಾಜಧಾನಿಯಲ್ಲಿ ಆ ಗಾಯಿಕೆಯು ಗಂಧರ್ವರಮಣಿಯೆಂದೂ, ತ್ರಿಪುರಸುಂದರಿಯೆಂದೂ ಹೊಗಳಿಸಿಕೊಳ್ಳಲಾರಂಭಿಸಿದಳು. ಈಕೆಯ ಖ್ಯಾತಿಯು ಎಲ್ಲೆಲ್ಲಿಯೂ ಹರಡುವುದಕ್ಕೆ ಒಬ್ಬರ ಬಾಯಿಂದ ಮತ್ತೊ ಬ್ಬರ ಕಿವಿಗೆ ಬೀಳುವುದೇ ಕಾರಣವಾಗಿದ್ದಿತು.

ಈಗ ಮಾರವಾಡದಲ್ಲಿ ಆ ದಿನಗಳು ಕಳೆದು ಹೋಗಿರುವುವು. ಈಗ ಮಾರವಾಡದಲ್ಲಿ ಮೊದಲಿನಂತೆ ಆನಂದೋತ್ಸವಗಳಿಲ್ಲ, ಮೊದಲಿನಂತೆ ನೃತ್ಯವಾದ್ಯಗೀತಗಳು ನಡೆಯುತ್ತಿಲ್ಲ. ಈಗಳಾದರೋ ಮಾರವಾಡವು ಭಯಂಕರವಾದ ರಾಜ್ಯಕ್ಕೆ ಅಧೀನವಾಗಿ ಹೋಗಿರುವುದು. ಮಹಾರಾಣನು ತಾನಾಗಿ ರಾಜ್ಯಭಾರ ಮಾಡದಿದ್ದರೂ, ಮಹಾರಾಣಿಯೇ ಪ್ರಬಲ ಪರಾಕ್ರಮದಿಂದ ರಾಜ್ಯಭಾರ ಮಾಡುತ್ತಿರುವಳು. ಮಹಾರಾಣಿ ಕಮಲಿನಿಯು ಅಂತಃಪುರದಲ್ಲಿದ್ದರೂ, ಆಕೆಯ ಪ್ರತಾಪವು ಮಾರವಾಡದಲ್ಲೆಲ್ಲಾ ಹರಡಿಹೋಗಿರುವುದು. ಎಲ್ಲಾ ರಾಜ್ಯಾಧಿಕಾರಿಗಳೂ ಆಕೆಯ ಕೈಯೊಳಗಿರುವರು; ಸೈನಿಕರೆಲ್ಲರೂ ಆಕೆಯ ಹೇಳಿಕೆಯಂತೆ ಕೇಳುವರು; ಪುರನಿವಾಸಿಗಳಂತೂ ಆಕೆಗೆ ಹೆದರಿ ಹೆದರಿ ಸಾಯುತ್ತಿರುವರು.

ಮಹಾರಾಣಿಯ ಗುಪ್ತಚರರು ಆವಾಗಲೂ ಎಲ್ಲೆಲ್ಲಿಯೂ ಸಂಚರಿಸುತ್ತಿರುವುದರಿಂದ, ಆರು ಆವ ಕೆಲಸ ಮಾಡಿದರೂ, ಅದು ನಿಮಿಷಮಾತ್ರದಲ್ಲಿಯೇ ರಾಣಿಯ ಕಿವಿಗೆ ಬಿದ್ದು ಹೋಗುತಿದ್ದಿತು. ಆರು ಆವ ಅಪರಾಧ ಮಾಡಿದರೂ, ಆರು ಆವ ಬಗೆಯ ರಾಜದ್ರೋಹದ ಕೆಲಸ ಮಾಡಿದರೂ, ಮಹಾರಾಣಿಯು ಅಂಥವರನ್ನು ಕೂಡಲೆಯೇ ಘೋರವಾದ ದಂಡನೆಗೆ ಗುರಿಮಾಡಿಬಿಡುವಳು. ಆಕೆಯು ಎಲ್ಲರಿಗೂ ಭಯವನ್ನು ತೋರುವುದಕ್ಕಾಗಿ, ಲಘುವಾದ ಅಪರಾಧಕ್ಕೂ ಗುರುವಾದ ದಂಡನೆಯನ್ನೇ ವಿಧಿಸುವವಳಾಗಿದ್ದಳು. ಇದರಿಂದ ಎಷ್ಟೋ ಜನರು ಸೆರೆಮನೆಗೆ ಹೋಗಿರುವರು; ಎಷ್ಟೋ ಜನರು ಗಲ್ಲಿಗೇರಿಸಲ್ಪಟ್ಟಿರುವರು; ಎಷ್ಟೋ ಜನರು ದಂಡನೆಯಿಂದ ಮರಣಾವಧಿ ಅಂಗಹೀನರಾಗಿ ಹೋಗಿರುವರು. ಬಲು ಮಾತಿನಿಂದೇನು? ಮಹಾರಾಣಿಯು ತನ್ನಿದಿರಿನಲ್ಲಿಯೇ ಪಡಿಸುಡಿಯಾಡಿದನೆಂದು ಒಬ್ಬ ಪುರಪ್ರಮುಖನನ್ನು ಕಟುಕರಿಂದ ತುಂಡುತುಂಡಾಗಿ ಕತ್ತರಿಸಿ ದಿಕ್ಕುದಿಕ್ಕಿಗೆ ಚೆಲ್ಲಾಡಿರುವಳು. ಅಲ್ಲದೆಯೂ ಮಹಾರಾಣಿಯ ಕಟುಕರು ಗೋಪ್ಯವಾಗಿ ಸಂಚರಿಸುತ್ತಾ ತಮಗೆ ಸಂಶಯತೋರಿಬಂದವರನ್ನು ಅಲ್ಲಲ್ಲಿಯೇ ಕತ್ತರಿಸಿ ಹೂತುಬಿಡುತ್ತಿದ್ದರು. ಅವರನ್ನು ಆರೂ ಮಾತನಾಡಿಸುವವರೇ ಇರುತ್ತಿರಲಿಲ್ಲ.

ಮಾರವಾಡದ ರಾಜ್ಯಭಾರವು ಈ ರೀತಿಯಾಗಿದ್ದುದರಿಂದ, ರಾಜಧಾನಿಯ ಆರ ಮನೆಯಲ್ಲಿಯೂ ಆನಂದೋತ್ಸವಗಳಿಗೆ ಆಸ್ಪದವೇ ಇರುತ್ತಿರಲಿಲ್ಲ. ಆರ ಮನದಲ್ಲಿಯೂ ಉತ್ಸಾಹವೆಂಬುದೇ ಇರುತ್ತಿರಲಿಲ್ಲ. ಎಲ್ಲರೂ ಆವ ಹೊತ್ತಿಗೆ ಏನು ಸಂಭವಿಸುವುದೋ ಎಂದು ಹೆದರಿ ಹೆದರಿ ಸಾಯುತ್ತಿದ್ದರು. ಆಕೆಯ ಕರಾಳ ಶಾಸನವು, ದೇಶದಲ್ಲಿ ಇಬ್ಬರು ಒಟ್ಟಿಗೆ ಸೇರಿ ಆವ ವಿಷಯವನ್ನೂ ಮಾತನಾಡಕೂಡದಷ್ಟು ಕಠಿಣವಾಗಿದ್ದಿತು. ಅಂತೂ ದುರಂತವಾದ ರಾಜ್ಯಭಾರವು ತಲೆಮೀರಿಹೋಗಿದ್ದಿತು; ಆದರೆ ಉಪಾಯವಿಲ್ಲ.

ಈ ರೀತಿಯಾಗಿ ಮಹಾರಾಣಿ ಕಮಲಿನಿಯು ರಾಜ್ಯಭಾರಮಾಡತೊಡಗಿದಳು. ಎಲ್ಲಿ ನೋಡಿದರೂ ಭಯವು ತಾನೇ ತಾನಾಗಿ ಆವರಿಸಿಕೊಂಡುಹೋಗಿರುವುದು. ಆರಿಗೂ ಆವುದೂ ಬೇಕಿಲ್ಲ; ಆರೂ ಆರನ್ನೂ ಮಾತನಾಡಿಸರು.

ಇಂತಹ ಸಮಯದಲ್ಲಿ ಅಪೂರ್ವ ಗಾಯಿಕೆಯೊಬ್ಬಳು ರಾಜಧಾನಿಯಲ್ಲಿ ಬಂದು ವಾಸಮಾಡತೊಡಗಿರುವಳು. ಆಕೆಯ ಹೆಸರು ಎಲ್ಲೆಲ್ಲಿಯೂ ಹರಡಿದ್ದರೂ, ಆಕೆಯು ಒಂದು ದಿನವಾದರೂ ಸಂಗೀತವನ್ನು ಹಾಡಿದವಳಲ್ಲ. ಸಂಗೀತವನ್ನು ಕೇಳಲು ಎಲ್ಲರಿಗೂ ಇಷ್ಟವಿದ್ದರೂ, ಸಂಗೀತಕ್ಕಾಗಿ ಕೂಟವನ್ನು ಕೂಡಿಸುವುದಕ್ಕೆ ಆರಿಗೂ ಸಾಹಸವಿರಲಿಲ್ಲ.

ಮಹಾರಾಜನಾದರೋ ಆವಾಗಲೂ ಕುಡಿದು ಸೂಳೆಯರ ಸಹವಾಸದಲ್ಲಿ ಕಾಲವನ್ನು ಕಳೆಯುತ್ತಿರುವನು. ರಾಜನು ಈಕೆಯ ಸಂಗೀತವನ್ನು ಕೇಳುವುದಕ್ಕೆ ಸಭೆಯನ್ನು ಏರ್ಪಡಿಸಬಹುದು, ಆದರೆ ಹತ್ತಿರವಿರತಕ್ಕವರು ಹೊಟ್ಟೆಯ ಕಿಚ್ಚಿನಿಂದ ಇತರರಿಗೆ ಆಸ್ಪದ ಕೊಡತಕ್ಕವರಾಗಿರಲಿಲ್ಲ. ಹೀಗೆಂದ ಮೇಲೆ, ಈ ಸುದ್ದಿಯು ಮಹಾರಾಣಿ ಮಹಾರಾಜಸಿಂಹನ ಕಿವಿಗೆ ಮುಟ್ಟುವುದು ಹೇಗೆ? ಮಾರವಾಡದ ಸಂಸ್ಥಾನದಲ್ಲೆಲ್ಲಾ ಈ ಗಾಯಿಕೆಯ ಹೆಸರು ಪ್ರಸಿದ್ಧವಾಗಿದ್ದರೂ ಮಹಾರಾಜಸಿಂಹನ ಕಿವಿಗೆ ಮಟ್ಟಿಗೆ ಬಿದ್ದಿರಲಿಲ್ಲ. ದುಷ್ಟರನ್ನೂ, ಪರೋತ್ಕರ್ಷಾಸಹಿಷ್ಣುಗಳನ್ನೂ ಹತ್ತಿರದಲ್ಲಿಟ್ಟುಕೊಂಡಿರತಕ್ಕ ರಾಜರ ಸ್ಥಿತಿಗತಿಗಳೆಲ್ಲವೂ ಹೀಗೆಯೇ ಸರಿ.

ರಾಜಧಾನಿಯ ಹಣಗಾರರು ಈಕೆಯ ಸಂಗೀತವನ್ನು ಕೇಳ ಬೇಕೆಂದು ತುಂಬಾ ಕುತೂಹಲಿಗಳಾಗಿದ್ದರು. ಆದರೆ ಮಹಾರಾಣಿಯ ಭಯದಿಂದ ಆರೂ ಆವ ಕೆಲಸ ಮಾಡುವುದಕ್ಕೂ ಮುಂದು ವರಿದು ಬರುವವರಾಗಿರಲಿಲ್ಲ. ಹೀಗಿರಲೊಂದು ದಿನ ಶೈಲೇಂದ್ರ ಸಿಂಹನೆಂಬ ಪುರಪ್ರಮುಖನೊಬ್ಬನು ಧೈರ್ಯಮಾಡಿ ಈ ಗಾಯಿಕೆಯನ್ನು ತನ್ನ ಮನೆಗೆ ಕರೆಯಿಸಿಕೊಂಡನು. ಶೈಲೇಂದ್ರನು ಇನ್ನೂ ಯುವಕನು; ಅವ ನಿಗೆ ಇನ್ನೂ ಇಪ್ಪತ್ತು ವರ್ಷಗಳು ತುಂಬಿರಲಿಲ್ಲ. ಆತನು ತನ್ನಲ್ಲಿ ತಾನೇ ಆಲೋಚಿಸಿಕೊಂಡುದೇನೆಂದರೆ :—

"ನಾನು ನನ್ನ ಮನೆಯಲ್ಲಿ ಸಂತೋಷದ ಕೂಟವನ್ನು ಏರ್ಪಡಿಸಿ ಕೊಂಡರೆ, ಮಹಾರಾಣಿಗಾದುದೇನು? ನಾನು ಸೂಳೆಯಿಂದ ಸಂಗೀತ ವನ್ನು ಹಾಡಿಸಿದರೆ, ಅದರಿಂದ ರಾಜ್ಯಕ್ಕೆ ಸಂಭವಿಸಬಹುದಾದ ಕುಂದು ಕೊರತೆಯೇನು? ಲೋಕದಲ್ಲಿ ನಮಗೆ ಇಷ್ಟರ ಮಟ್ಟಿನ ಸ್ವಾತಂತ್ರ್ಯವೂ ಇಲ್ಲದ ಮೇಲೆ, ನಾವು ಈ ದೇಶದಲ್ಲಿ ಇದ್ದು ಮಾಡುವುದೇನು? ಆವ ದೇಶ ದಲ್ಲಿ ಇಷ್ಟು ಪರಾಧೀನತೆಯಿರುವುದೋ, ಅಲ್ಲಿ ಅರೆಗಳಿಗೆಯಾದರೂ ವಾಸ ಮಾಡಬಾರದೆಂದು ಬಲ್ಲವರು ನುಡಿದಿರುವರು."

ಶೈಲೇಂದ್ರನು ಈ ರೀತಿಯಲ್ಲಿ ಆಲೋಚಿಸಿ ಆಗಾಯಿಕೆಯನ್ನು ತನ್ನ ಮನೆಗೆ ಬರಬೇಕೆಂದು ಕೇಳಿಕೊಂಡನು. ಆತನು ಆಕೆಯನ್ನು ಕರೆದು ಕೊಂಡು ಬರುವುದಕ್ಕಾಗಿ ತಾನೇ ಹೊರಟನು. ಆತನು ಹೋಗಿ ನೋಡು ವಲ್ಲಿ, ಆ ಗಾಯಿಕೆಯು ಹದಿನಾಲ್ಕು ವರ್ಷದ ಸನ್ಯಾಸಿನಿಯಾಗಿದ್ದಳು. ಆತನು ಭಾವಿಸಿದ್ದಂತೆ ಆಕೆಯು ದೊಡ್ಡವಳೂ ಆಗಿರಲಿಲ್ಲ, ವಾರಾಂ ಗನೆಯೂ ಆಗಿರಲಿಲ್ಲ. ಆದರೂ ಆಕೆಯ ರೂಪವೂ, ಆಕೆಯ ಅಪೂರ್ವ ಲಾವಣ್ಯವೂ, ಆಕೆಯ ಸೌಂದರ್ಯವೂ ಈ ಜಗತ್ತಿನಲ್ಲಿ ಎಲ್ಲಿಯೂ ಕಂಡು ಬರುತ್ತಿರಲಿಲ್ಲ. ಶೈಲೇಂದ್ರನು ಇಂತಹ ಅನ್ಯಾದೃಶವಾದ ರೂಪವತಿ ಯನ್ನು ನೋಡಿ ಭ್ರಾಂತನಾಗಿ ಇಂತೆಂದನು :—"ನೀವು ನಮ್ಮ ಮನೆಗೆ ಬಂದು ಸಂಗೀತವನ್ನು ಹಾಡಬೇಕು. ಇದಕ್ಕಾಗಿ ನೀವು ಎಷ್ಟು ಹಣವನ್ನು ಕೇಳಿದರೂ ನಾನು ಕೊಡಲುಳ್ಳವನು. ನೀವು ದೊಡ್ಡ ಮನಸ್ಸು ಮಾಡಿ

ಮನೆಗೆ ಬಂದು ನಿಮ್ಮ ಗಾನಮಾಧುರ್ಯದಿಂದ ನಮ್ಮೆಲ್ಲರಿಗೂ ಸಂತೋಷ ಪಡಿಸಬೇಕು.''

ಸನ್ಯಾಸಿನಿ—ಮಹಾಶಯ! ಹಾಡುವುದೇ ನಮ್ಮ ವೃತ್ತಿಯಾಗಿರುವಲ್ಲಿ, ಕರೆದೆಡೆಗೆ ಹೋಗುವುದೇ ನಮ್ಮ ಕರ್ತವ್ಯವು.

ಶೈಲೇಂದ್ರ—ನಿಮ್ಮ ಪುರಸ್ಕಾರವೇನು?

ಸನ್ಯಾ—ನಾನು ತುಂಬಾ ಆಸೆಯನ್ನಿಟ್ಟುಕೊಂಡು ಇಲ್ಲಿಗೆ ಬಂದೆನು. ಈ ರಾಜಧಾನಿಯಲ್ಲಿ ನನಗೆ ಸರಿಯಾದ ಲಾಭ ಪ್ರಯೋಜನಗಳು ಉಂಟಾಗಬಹುದೆಂದು ತುಂಭಾ ಭರವಸೆಯಿದ್ದಿತು. ಇಂದಿನವರೆಗೂ ಆರೂ ಸಂಗೀತವನ್ನು ಕೇಳುವುದಕ್ಕೆ ಮುಂದೆ ಬಂದವರೇ ಇಲ್ಲ.

ಶೈಲೇಂದ್ರ—ಈಗಣ ಮಾರವಾಡವು ಹಿಂದಣ ಮಾರವಾಡವಲ್ಲ. ಹಿಂದಣ ಕಾಲವಾಗಿದ್ದರೆ, ನಿಮಗೆ ಇಷ್ಟು ತೊಂದರೆಯೆಂದರೇನು?

ಸನ್ಯಾ—ಹಾಗಾದರೆ ನಾನು ಇಂತಹ ಸಂದರ್ಭದಲ್ಲಿ ಇಲ್ಲಿರಲು ಇಷ್ಟಪಡಲಾರೆನು. ನಾನು ಇಷ್ಟರಲ್ಲಿಯೇ ಬೇರೆಯ ಕಡೆಗೆ ಹೊರಟು ಹೋಗುವೆನು.

ಶೈಲೇಂದ್ರ—ನೀವು ದೊಡ್ಡ ಮನಸ್ಸು ಮಾಡಿ ನಮ್ಮ ಮನೆಯಲ್ಲಿ ಸಂಗೀತವನ್ನು ಹಾಡಿ ನಮ್ಮಗಳನ್ನು ಸಂತೋಷಪಡಿಸಬೇಕು. ನಮ್ಮ ಪ್ರಾರ್ಥನೆಯನ್ನು ತಿರಸ್ಕರಿಸಲಾಗದು.

ಸನ್ಯಾಸಿನಿ—ತಾವು ನನ್ನನ್ನು ಇಷ್ಟು ಬಗೆಯಿಂದ ಪ್ರಾರ್ಥಿಸುವುದೇತಕೆ? ಈ ದೇಶದಲ್ಲಿ ಎಷ್ಟೋ ಮಂದಿ ದೊಡ್ಡವರಿರುವರು. ಒಬ್ಬರಾದರೂ ನನ್ನನ್ನು ತಮ್ಮ ಕೃಪಾಕಟಾಕ್ಷದಿಂದ ನೋಡದೇ ಹೋದರು. ನೀವು ಮಟ್ಟಿಗೆ ಬಂದಿರುವುದನ್ನು ನೋಡಿದರೆ, ನೀವೊಬ್ಬರೇ ಗುಣೈಕ ಪಕ್ಷಪಾತಿಗಳೆಂದು ತೋರುವುದು. ನಿಮ್ಮ ಒಳ್ಳೆಯ ಗುಣಕ್ಕಾಗಿ, ನಾನು ನಿಮ್ಮ ಮನೆಗೆ ಬಂದು ಹಾಡುವೆನು. ಅದಕ್ಕಾಗಿ ನಾನು ನಿಮ್ಮಿಂದ ಒಂದು ಕಾಸಿನ ಪುರಸ್ಕಾರವನ್ನೂ ತೆಗೆದುಕೊಳ್ಳುವುದಿಲ್ಲ. ಆದರೆ ನನ್ನದೊಂದು ಪ್ರಾರ್ಥನೆ—

ಶ್ರೈಲೇಂದ್ರ—ತಿಳಿಸೋಣವಾಗಲಿ. ತಮ್ಮ ಪ್ರಾರ್ಥನೆಯನ್ನು ನಾನು ತಪ್ಪದೆಯೇ ನೇರವೇರಿಸಿ ಕೊಡುವೆನು.

ಸನ್ಯಾಸಿನಿ—ನಾನು ನಿಮ್ಮ ಮನೆಯಲ್ಲಿ ಸಂಗೀತವನ್ನು ಹಾಡ ಬೇಕಾದರೆ, ನೀವು ನಿಮ್ಮ ಪುರಪ್ರಮುಖರೆಲ್ಲರನ್ನೂ ನಿಮ್ಮಲ್ಲಿಗೆ ಬರಮಾಡಿ ಕೊಳ್ಳಬೇಕು. ಅವರಲ್ಲಿ ಆರೂ ತಪ್ಪಿಸಿಕೊಳ್ಳಲಾಗದು. ಆರಾದರೂ ಬಾರದೇ ಹೋದಲ್ಲಿ, ನಾನು ಹಾಡದೆಯೇ ಹಿಂದಿರುಗಿ ಬಂದು ಬಿಡು ವೆನು. ಬಳಿಕ ನೀವು ನನ್ನುದ್ದದಷ್ಟು ಹಣದ ರಾಶಿಯನ್ನು ಸುರಿದರೂ, ನಾನು ಮತ್ತೆ ಹಾಡತಕ್ಕವಳಲ್ಲ.

ಶ್ರೈಲೇಂದ್ರ—ನಾನು ಎಲ್ಲರನ್ನೂ ಕರೆಯುವೆನು. ಆದರೆ, ಅವ ರಲ್ಲಿ ಆರು ಬರುವರೋ, ಆರು ಬಾರರೋ ಅದನ್ನು ನಾನು ಈಗ ಹೇಗೆ ಹೇಳಲು ಸಾಧ್ಯವು?

ಸನ್ಯಾ—ಅವರೆಲ್ಲರೂ ಬಂದೇ ಬರುವುದಕ್ಕೆ ಆವ ಪ್ರಯತ್ನ ಮಾಡಬೇಕೋ, ಅದನ್ನು ತಾವು ನೆರವೇರಿಸಲೇ ಬೇಕು. ಇದು ನಿಮ್ಮಿಂದ ಸಾಧ್ಯವಾಗದ ಪಕ್ಷದಲ್ಲಿ, ನಾನು ನಿಮ್ಮಲ್ಲಿಗೆ ಬರಲಾರೆನು.

ಇದನ್ನು ಕೇಳಿ ಶ್ರೈಲೇಂದ್ರನು ಕೊಂಚಹೊತ್ತು ಸುಮ್ಮನಿದ್ದು— ನಿಮ್ಮ ಇಷ್ಟದಂತೆಯೇ ಆಗಲಿ. ನಾನು ಹೇಗಾದರೂ ಮಾಡಿ ಅವರೆಲ್ಲ ರನ್ನೂ ನಮ್ಮಲ್ಲಿಗೆ ಬರಮಾಡಿಕೊಳ್ಳುವೆನು. ಈ ವಿಷಯದಲ್ಲಿ ನೀವು ಸಂದೇಹ ಪಡಬೇಕಾದುದಿಲ್ಲ. ಆ ಭಾರವು ನನ್ನದಾಗಿರಲಿ, ಎಂದು ತಿಳಿಸಿದನು.

---

## ಐವತ್ತೆರಡನೆಯ ವಿಲಾಸ

ಶ್ರೈಲೇಂದ್ರಸಿಂಹನ ಮನೆಯಲ್ಲಿ ಅತ್ಯದ್ಭುತವಾದ ಸಂಗೀತವು ಅತಿ ವಿಜೃಂಭಣೆಯಿಂದ ನಡೆಯಿತು. ಶ್ರೈಲೇಂದ್ರನು ಪುರಪ್ರಮುಖರೆಲ್ಲ ರನ್ನೂ ಬರಮಾಡಿಕೊಳ್ಳುವುದಕ್ಕೆ ಮಾಡಿದ ಯತ್ನವು ಚರಿತ್ರಾರ್ಹ ವಾದುದು.

ಪುರಪ್ರಮುಖರು ಮೊದಮೊದಲು ರಾಣಿಯ ಭಯದಿಂದ ಬರುವುದಿಲ್ಲವೆಂದು ಹೇಳಿಬಿಟ್ಟರು. ಬಳಿಕ ಶೈಲೆಂದ್ರನು ಯುಕ್ತಿಯಿಂದ ಎಲ್ಲರಿಗೂ ತಿಳಿಯ ಹೇಳಿದುದೇನೆಂದರೆ: —"ಇಷ್ಟು ಸ್ವಾತಂತ್ರ್ಯವೂ ನಮಗಿಲ್ಲದ ಮೇಲೆ, ನಾವು ಈ ರಾಜ್ಯದಲ್ಲಿ ವಾಸಮಾಡಿ ಫಲವೇನು? ಇಲ್ಲಿಯೇ ಇದ್ದುಕೊಂಡು ಭಯದಿಂದ ಹೆದರಿಹೆದರಿ ಸಾಯುವುದಕ್ಕಿಂತಲೂ, ಕಾಡಿಗಾದರೂ ಹೋಗಿ ವಾಸಮಾಡುವುದು ಎಷ್ಟೋ ಮೇಲಾಗಿರುವುದು. ನಾವು ಹೆಂಗುಸಿಗೆ ಹೆದರುವುದಾದರೆ, ನಮ್ಮಲ್ಲಿ ಪೌರುಷವೇನು ಉಳಿದಂತಾದುದು? ನಾವು ಆರಿಗೂ ತಿಳಿಯದ ಹಾಗೆ ನಮ್ಮ ಮನೆಯಲ್ಲಿ ವಿನೋದದಿಂದ ಕಾಲವನ್ನು ಕಳೆವುದಾದರೆ, ಇದರಿಂದ ರಾಜ್ಯಕ್ಕೆ ನಷ್ಟವೇನು, ಕಷ್ಟವೇನು? ರಾಣಿಗಾದರೋ ಉಂಟಾಗಬಹುದಾದ ತೊಂದರೆಯೇನು? ನಾವುಗಳೆಲ್ಲರೂ ಐಕಮತ್ಯವಿಲ್ಲದೇ ಇರುವುದರಿಂದಲೇ ಆ ಹೆಂಗುಸು ನಮ್ಮ ಮೇಲೆ ಸವಾರಿಮಾಡುತ್ತಿರುವಳು. ಇದೆಲ್ಲದಕ್ಕೂ ನಾವೇ ಕಾರಣವು. ಇನ್ನಾದರೂ ನಾವು ಐಕಮತ್ಯದಿಂದಿರುವುದು ಒಳ್ಳೆಯದು. ಈ ರಾತ್ರಿಯಲ್ಲಿ ನಾನು ನನ್ನ ಮನೆಯಲ್ಲಿ ಈ ತತ್ತ್ವವನ್ನು ಎಲ್ಲರಲ್ಲಿಯೂ ಬಿತ್ತರಿಸುವೆನು. ತಾವುಗಳು ನನ್ನಲ್ಲಿ ಕೃಪೆಯಿಟ್ಟು ತಪ್ಪದೆಯೇ ಬರಬೇಕು."

ಈ ಮಾತು ಎಲ್ಲರ ಮನದಲ್ಲಿಯೂ ನಾಟಿತು. ಎಲ್ಲರಿಗೂ ಸಂಗೀತವನ್ನು ಕೇಳಬೇಕೆಂಬ ಆಸೆಯು ಬಲವತ್ತರವಾಗಿದ್ದುದರಿಂದ, ಎಲ್ಲರೂ ಈ ಆಹ್ವಾನಕ್ಕೆ ಒಪ್ಪಿಕೊಂಡರು. ಮಹಾರಾಣಿಗೆ ಕೋಪಬರುವುದೆಂಬ ಭಯವಿದ್ದರೂ, ಎಲ್ಲರೂ ಧೈರ್ಯಗೊಂಡು ಶೈಲೇಂದ್ರನ ಮನೆಗೆ ಬಂದರು.

ಎಲ್ಲರೂ ಸಭೆಗೂಡಿರುವರು. ಅಲ್ಲಿಗೆ ಒಬ್ಬಾತನು ಹೊರತಾಗಿ ಉಳಿದ ಪುರಪ್ರಮುಖರೆಲ್ಲರೂ ಬಂದಿರುವರು. ನಗರಾಧ್ಯಕ್ಷನಾದ ವಿಜಯಸಿಂಹನು ಆಗ ರಾಜಧಾನಿಯಲ್ಲಿ ಇರಲಿಲ್ಲವಾಗಿ, ಆತನೊಬ್ಬನು ಮಾತ್ರಗೆ ಬಂದಿರಲಿಲ್ಲ. ಆತನು ಹಠಾತ್ತಾಗಿ ಕಣ್ಮರೆಯಾಗಲು ಕಾರಣವೇನಿರಬಹುದೆಂದು ಎಲ್ಲರೂ ಪರಿಪರಿಯಾಗಿ ಚಿಂತಿಸಲಾರಂಭಿಸಿದರು.

ಶೈಲೇಂದ್ರನ ಮನೆಯಲ್ಲಿ ಸಂಗೀತವು ಪ್ರಾರಂಭವಾಗುವುದಕ್ಕೆ ಮೊದಲು, ಈ ವಿಷಯದ ಜಿಜ್ಞಾಸೆಯು ನಡೆದಿದ್ದಿತು. ಆದರೆ ಇದು ಹೀಗೆಯೇ ಸರಿಯೆಂದು ಸಿದ್ಧಾಂತಮಾಡಲು ಆರಿಗೂ ಸಾಧ್ಯವಾಗದೇ ಹೋಯಿತು. ಈ ವಿಷಯದಲ್ಲಿ ಎಲ್ಲರೂ ಮಾತನಾಡಿಕೊಂಡು ದೇನೆಂದರೆ :—

"ವಿಜಯಸಿಂಹನು ಮಹಾರಾಣಿಗೆ ಬೇಕಾದವನಾಗಿದ್ದುದರಿಂದ, ಆವ ಕೂಟಕ್ಕೂ ಸೇರಕೂಡದೆಂದು ಮಹಾರಾಣಿಯು ಆತನಿಗೆ ಕಟ್ಟಪ್ಪಣೆಯನ್ನು ಮಾಡಿದ್ದರೂ ಮಾಡಿರಬಹುದು. ಆರಾರು ಸಂಗೀತಕ್ಕೆ ಹೋಗಿರುವರೋ, ಅವರ ಮೇಲೆಲ್ಲಾ ಮಹಾರಾಣಿಯು ಕೋಪಗೊಳ್ಳುವಳು. ಬೆಳಗಾದ ಕೂಡಲೆ, ಅವರ ಫಲವೇನಾಗುವುದೋ ಬಲ್ಲವರಾರು? ಆರಿಗೆ ಪ್ರಾಣದಂಡನೆಯೋ, ಆರಿಗೆ ಕಾರಾವಾಸವೋ, ಆರಿಗೆ ಬಹಿಷ್ಕಾರವೋ, ಆರಿಗೆ ಉಚ್ಚಾಟನೆಯೋ, ಆರಿಗೆ ಸರ್ವನಾಶವೋ ಬಲ್ಲವರಾರು?"

ವಿಜಯಸಿಂಹನು ಬಾರದಿದ್ದುದರಿಂದ, ಬಂದಿದ್ದವರೆಲ್ಲರೂ ಹಿಂದಿರುಗಿ ಹೋಗಬೇಕೆಂದು ಆಲೋಚಿಸಿ ನೋಡಿದರು. ಆದರೆ ಹಾಗೆ ಅಪಮಾನಪಡಿಸಿ ಹೋಗುವುದು ಮರ್ಯಾದೆಗೆ ತಕ್ಕುದಲ್ಲವೆಂದು ಬಂದಿದ್ದವರೆಲ್ಲರೂ ಬಾಯಮುಚ್ಚಿಕೊಂಡು ಕುಳಿತು ಬಿಟ್ಟರು.

ಸಂಗೀತವು ಪ್ರಾರಂಭವಾಯಿತು. ಒಂದರ ಮೇಲೆ ಇನ್ನೊಂದು, ಇನ್ನೊಂದರ ಮೇಲೆ ಮತ್ತೊಂದು, ಹೀಗೆ ಮೂರು ಕೀರ್ತನೆಗಳು ಹಾಡಿದುದಾಯಿತು. ಬಳಿಕ ಗಾಯಿಕೆಯು ನಾಲ್ಕನೆಯ ಕೀರ್ತನೆಯನ್ನು ಹಾಡುತ್ತಾ ಹಾಡುತ್ತಾ ಪುರಪ್ರಮುಖರಲ್ಲಿ ವೃದ್ಧನಾದ ಲಕ್ಷ್ಮೀಪತಿಸಿಂಹನ ಬಳಿಗೆ ಬಂದು ನಿಂತು ಅಭಿನಯದೊಡನೆ ಹಾಡತೊಡಗಿದಳು—

ಮುಖಾರಿ

ಕಂಡು ಕಂಡು ನೀಯೆನ್ನ । ಕೈಯ ಬಿಡುವರೇ ಕೃಷ್ಣ ॥ಪ॥
ಪುಂಡರೀಕಾಕ್ಷ ಶ್ರೀ ಪುರುಷೋತ್ತಮ ॥ಅನು ಪ॥
ಬಂಧುಗಳು ಎನಗಿಲ್ಲಾ । ಬದುಕಿನಲಿ ಸುಖವಿಲ್ಲಾ
ನಿಂದೆಯಲಿ ನೊಂದೆನಯ್ಯ ನೀರಜಾಕ್ಷ ॥

ಬಂಧು ಬಳಗವು ನೀನೇ । ತಂದೆ ತಾಯಿ ನೀನೇ ।
ಎಂದೆಂದಿಗೂ ನಿನ್ನ ನಂಬಿದೆನೋ ಕೃಷ್ಣ ॥೧॥

ಗಾಯಿಕೆಯು ಈ ರೀತಿಯಾಗಿ ಹಾಡನ್ನು ಹಾಡಿ, ಅದಕ್ಕೆ ಸರಿಯಾಗಿ ಕುಣಿಯುತ್ತಲೂ, ಅಭಿನಯವನ್ನು ತೋರುವುದಕ್ಕಾಗಿ ಕೈಗಳನ್ನು ಅಲ್ಲಾಡಿಸುತ್ತಲೂ ಲಕ್ಷ್ಮೀಪತಿಸಿಂಹನನ್ನು ಬೆರಗು ಮಾಡಿದಳು. ಲಕ್ಷ್ಮೀಪತಿಸಿಂಹನ ದೃಷ್ಟಿಯು, ಆಕೆಯು ಧರಿಸಿದ್ದ ಉಂಗುರದ ಮೇಲೆ ಬಿದ್ದಿತು. ಕೂಡಲೆಯೇ ಆತನು ಬೆಚ್ಚಿ ಬೆದರಿದವನಾಗಿ ತಟ್ಟನೆ ಎದ್ದು ನಿಂತನು. ಬಳಿಕ, ಇತರರು ತನ್ನನ್ನು ಪರಿಹಾಸಮಾಡಿಯಾರೆಂಬ ಶಂಕೆಯಿಂದ ಮತ್ತೆ ಕುಳಿತು ಬಿಟ್ಟನು. ಯುವತಿಯಾದ ಗಾಯಿಕೆಯು ಹತ್ತಿರಕ್ಕೆ ಬಂದುದಕ್ಕಾಗಿ ವೃದ್ಧನು ಹೆದರಿ ಹೋದನೆಂದು ತಿಳಿದು ಇತರರು ಕೈತಪ್ಪಳೆಯನ್ನು ಹಾಕಿಕೊಂಡು ನಗುತ್ತಾ ಕುಳಿತಿದ್ದರು.

ಇದಾದ ಬಳಿಕ ಗಾಯಿಕೆಯು ಪ್ರತಿಯೊಬ್ಬನ ಬಳಿಗೂ ಹೋಗಿ ಇದೇ ರೀತಿಯಲ್ಲಿಯೇ ತನ್ನ ಉಂಗುರವನ್ನು ತೋರ್ಪಡಿಸಿಕೊಂಡಳು. ಎಲ್ಲರೂ ಈ ಯುಂಗರವನ್ನು ನೋಡಿ ನಡುಗಿಹೋದರು.

ಸಂಗೀತವು ಮುಗಿಯಿತು. ವೃದ್ಧನಾದ ಲಕ್ಷ್ಮೀಪತಿಸಿಂಹನು ಎದ್ದು ನಿಂತು ಇಂತೆಂದನು :—

" ಗಾನವಿಶಾರದೇ ಶಾರದೇ ! ನಿನ್ನ ಮಧುರವಾದ ಗಾನವನ್ನು ಕೇಳಿ ನಾವುಗಳೆಲ್ಲರೂ ಮುಗ್ಧರಾಗಿ ಹೋದೆವು. ಶ್ರೀ ಕೃಷ್ಣಪರಮಾತ್ಮನ ಗಾನದಿಂದ ಗೋಪಕುಮಾರರು ಹೇಗೆ ಮೈಮರೆತು ಹೋದರೋ, ಹಾಗೆಯೇ ನಾವುಗಳೂ ಮೈಮರೆತು ಹೋಗಿರುವೆವೆಂದು ಹೇಳಿದರೂ ಅತ್ಯುಕ್ತಿಯಾಗಲಾರದು."

ಗಾಯಿಕೆಯು ಇದನ್ನು ಕೇಳಿ, ತನ್ನ ಅಂಗುಳೀಯಕದ ಮೇಲೆ ಕೈಯನ್ನಿಟ್ಟು ಮತ್ತೆ ಹಾಡಿದಳು—

ಆನಂದ ಭೈರವಿ

ರಂಗ ಬಾರೋ । ನರಸಿಂಗ ಬಾರೋ ॥ಪ॥
ಅಂಗಜನಯ್ಯ । ಪೂತಾಂತರಂಗ ॥ಅನು ಪ॥

ಸಾಸಿರ ಮೂರುತಿ । ವಾಸವ ವಂದ್ಯನೇ ॥
ಸಾಸಿರ ನಾಮ ದೊಡೆಯನೆ । ರಂಗ ॥
ಸಾಸಿರ ನಾಮ ದೊಡೆಯನೆ ಶ್ರೀಕೃಷ್ಣ ।
ಕೇಶವ ನಮ್ಮ । ಮನೆ ದೈವ ॥ ರಂಗ ॥೧॥

ಇದಾದ ಮೇಲೆ ಸಂಗೀತವು ಪೂರ್ಣವಾಯಿತು. ಗಾಯಿಕೆಯು ಎಲ್ಲರ ಅಪ್ಪಣೆಯನ್ನೂ ತೆಗೆದುಕೊಂಡು ಹೊರಟುಹೋದಳು. ಉಳಿದವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು, ಆದರೆ ಪುರ ಪ್ರಮುಖರು ಮಟ್ಟಿಗೆ ಬಗೆಬಗೆಯ ಕಾರಣಗಳನ್ನು ಹೂಡಿಕೊಂಡು ಅಲ್ಲಿಯೇ ನಿಂತರು. ಬಳಿಕ ಪುರಪ್ರಮುಖರ ಸಭೆಯೊಂದು ಏರ್ಪಡಿಸಲ್ಪಟ್ಟು, ಲಕ್ಷ್ಮೀಪತಿ ಸಿಂಹನು ಸುತ್ತಲೂ ನೋಡಿ ಮಾತನಾಡಿದನು :—

“ ಲಲಿತಸಿಂಹನು ನಿಶ್ಚಯವಾಗಿಯೂ ಜೀವವಂತ ನಾಗಿರುವನು. ನಾವು ಆವಾವುದನ್ನು ಕೇಳಿದ್ದೆವೋ ಅದೆಲ್ಲವೂ ನಿಜವಾದುವು. ಆತನು ಬುದ್ಧಿಮತಿಯಾದ ಈ ಗಾಯಿಕೆಯನ್ನು ನಮ್ಮಲ್ಲಿಗೆ ಕಳುಹಿಸಿಕೊಟ್ಟಿರುವನು. ಸತ್ಯವಾಗಿಯೂ ಆತನು ಭಿಲ್ಲ ಸೈನ್ಯದೊಡನೆ ಮಾರವಾಡದ ರಾಜಧಾನಿಗೆ ಅಭಿಮುಖವಾಗಿ ಹೊರಟು ಬರುತ್ತಿರುವನು. ಆತನು ನಮ್ಮೆಲ್ಲರ ಸಾಹಾಯ್ಯವನ್ನೂ ಈ ವ್ಯಾಜದಿಂದ ಬೇಡುವವನಾಗಿರುವನು. ಆರಲ್ಲಿ ಮಾರವಾಡದ ರಾಜಮುದ್ರೆಯಿರುವುದೋ, ಅವರಿಗೇ ನಾವೆಲ್ಲರೂ ದಾಸರು. ರಾಜಮುದ್ರೆಯು ಇಷ್ಟು ದಿನಗಳ ವರೆಗೂ ಮಹಾರಾಜಸಿಂಹನ ಹತ್ತಿರವಲ್ಲಿರುವುದೆಂದು ನಾವು ತಪ್ಪಾಗಿ ತಿಳಿದುಕೊಂಡಿದ್ದೆವು. ಅದು ಲಲಿತಸಿಂಹನ ಬಳಿಯಲ್ಲಿಯೇ ಇರುವುದೆಂದು ಈಗ ಸಿದ್ಧಾಂತವಾಯಿತು. ಇನ್ನು ಮಹಾರಾಜಸಿಂಹನು ನಮ್ಮನ್ನು ಕರೆಯನು, ಹಾಗೆ ಕರೆಯುವುದಕ್ಕೆ ಆತನಿಗೆ ಆವ ಅಧಿಕಾರವೂ ಇಲ್ಲ. ಇನ್ನು ಮುಂದೆ ನಾವು ಮಹಾರಾಣ ಲಲಿತಸಿಂಹನ ಆಜ್ಞಾಧಾರಕರು. ಬಂಧು ಮಹಾಶಯ ! ಈ ವಿಷಯದಲ್ಲಿ ನಿಮ್ಮಗಳ ಅಭಿಪ್ರಾಯವೇನೆಂಬುದನ್ನು ತಿಳಿಸೋಣವಾಗಲಿ.”

ಇದನ್ನು ಕೇಳಿ ಪುರಪ್ರಮುಖನೊಬ್ಬನು ಎದ್ದು ನಿಂತು— ಈ ಗಾಯಿಕೆಯು ಲಲಿತಸಿಂಹನ ದೂತಿಯೆಂಬುದರಲ್ಲಿ ಪ್ರಮಾಣವಾದರೂ ಏನು ? ಎಂದು ಕೇಳಿದನು.

ಲಕ್ಷ್ಮೀ—ಹಾಗಿಲ್ಲದಿದ್ದರೆ, ಈಕೆಯ ಕೈಯಲ್ಲಿ ರಾಜಮುದ್ರೆಯು ಬರುವುದೆಂದರೇನು? ಈಕೆಯು ಸ್ಪಷ್ಟವಾಗಿ ಆಯುಂಗರವನ್ನು ನಮ್ಮೆಲ್ಲರಿಗೂ ತೋರಿ ಅಭಿಪ್ರಾಯ ಗರ್ಭಿತವಾದ ಹಾಡುಗಳನ್ನೇ ಹಾಡಿರುವಳು. ಇವರ ಅರ್ಥವಾದರೂ ಏನು? ' ಭಿಲ್ಲರೊಡನೆ ಲಲಿತನು ಬರುತ್ತಿರುವನು. ಆತನು ನಮ್ಮಗಳ ಸಾಹಾಯ್ಯವನ್ನು ಬಯಸುತ್ತಿರುವನು' ಎಂದು ಆ ಹಾಡುಗಳ ವ್ಯಂಗ್ಯಾರ್ಥವಲ್ಲವೇ?

ಮತ್ತೊಬ್ಬನು—ಹಾಗಾದರೆ, ಈ ಹುಡುಗಿಯು ಹೀಗೆ ಬರಲು ಕಾರಣವೇನು?

ಲಕ್ಷ್ಮೀ—ಈಕೆಯು ಸಂಗೀತದ ನೆಪವನ್ನು ಹೂಡಿಕೊಂಡು ಇಲ್ಲಿಗೆ ಬರದೇ ಹೋಗಿದ್ದರೆ, ನಾವೆಲ್ಲರೂ ಒಟ್ಟಿಗೆ ಸೇರುವ ಸಂಭವವೆಲ್ಲಿಯದು? ಈಕೆಯು ಒಬ್ಬೊಬ್ಬನ ಮನೆಗೂ ಹೋಗಿ ಈ ವಿಷಯವನ್ನು ತಿಳಿಸಬೇಕೆಂದರೆ, ತುಂಬಾ ದಿನಗಳಾಗಿ ಹೋಗುವುವು. ಬಳಿಕ ನಾವೆಲ್ಲವೂ ಸೇರಿ ಮಾತನಾಡುವುದೆಂದಿಗೆ? ಈಕೆಯು ರಾಜನೀತಿಗೆ ಅನುಸಾರವಾಗಿಯೇ ಬುದ್ಧಿಮಂತಿಕೆಯಿಂದ ಕೆಲಸಮಾಡಿರುವಳು.

ಮತ್ತೊಬ್ಬನು—ಲಲಿತಸಿಂಹನು ಪಿತೃಹತ್ಯೆಯನ್ನು ಮಾಡಿ ಓಡಿ ಹೋಗಿರುವಲ್ಲಿ, ನಾವು ಆತನ ಪಕ್ಷವನ್ನು ವಹಿಸಿ ಕೆಲಸ ಮಾಡಬಹುದೇ?

ಲಕ್ಷ್ಮೀ—ಮೊದಲಲ್ಲಿ ನಾವು ಲಲಿತಸಿಂಹನನ್ನೇ ಪಿತೃಘಾತುಕನೆಂದು ಸಮರ್ಥನಮಾಡಿ, ಮಹಾರಾಜಸಿಂಹನ ಕೈಗೆ ರಾಜ್ಯವನ್ನು ಒಪ್ಪಿಸಿದೆವು. ಈಗ ನಾವು ಲಲಿತನಿಗೆ ಸಾಹಾಯ್ಯವನ್ನೆಸಗಬೇಕೆಂದು ನಿಮ್ಮನ್ನು ಕೇಳಿಕೊಳ್ಳುತ್ತಿರುವೆವು. ಇದರಲ್ಲಿ ಮರ್ಮವು ಅಡಗಿಲ್ಲವೇ? ಇಷ್ಟು ದಿನಗಳಾದ ಮೇಲೂ ಪಿತೃಘಾತುಕನು ಆರೆಂಬುದು ಸಿದ್ಧಾಂತವಾಗಲಿಲ್ಲವೆಂದರೆ, ನಾವು ಏನ ಹೇಳುವುದಕ್ಕಾದೀತು?

ಲಕ್ಷ್ಮೀಪತಿಸಿಂಹನು ಹೀಗೆ ಮಾತನಾಡಿದ ಬಳಿಕ, ಉಳಿದವರೆಲ್ಲರೂ ಪರಿಪರಿಯಾಗಿ ಆಲೋಚಿಸಿ, ಕಟ್ಟಕಡೆಗೆ ಲಲಿತಸಿಂಹನಿಗೆ ಸಹಾಯರಾಗುವುದಾಗಿ ಸಿದ್ಧಾಂತಮಾಡಿಕೊಂಡರು. ಅಲ್ಲದೆಯೂ,

ಲಲಿತಸಿಂಹನ ವಿಷಯವನ್ನು ಚೆನ್ನಾಗಿ ಅರಿವುದಕ್ಕಾಗಿ ಲಕ್ಷ್ಮೀಪತಿ ಸಿಂಹನು ಆ ಗಾಯಿಕೆಯನ್ನು ಮತ್ತೊಂದು ಸಲ ನೋಡಿಕೊಂಡು ಬರ ಬೇಕೆಂದೂ ಸಿದ್ಧಾಂತವಾಯಿತು.

ಇಷ್ಟಾದ ಬಳಿಕ ಎಲ್ಲರೂ ಅರ್ಧರಾತ್ರದ ಸಮಯದಲ್ಲಿ ಒಬ್ಬೊಬ್ಬ ರಾಗಿ ಗುಟ್ಟನಲ್ಲಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಬೆಳ ಗಾದ ಕೂಡಲೆ, ವಿಜಯಸಿಂಹನು ೧೦,೦೦೦ ಅಶ್ವಾರೋಹಿಗಳೊಡನೆ ಲಲಿತಸಿಂಹನಿಗೆ ಸಾಹಾಯ್ಯ ಮಾಡುವುದಕ್ಕಾಗಿ ಹೊರಟು ಹೋದ ನೆಂಬ ಸುದ್ದಿಯೆದ್ದಿತು. ಈ ಸುದ್ದಿಯು ಎಲ್ಲರ ಮನವನ್ನೂ ಚಂಚಲ ಗೊಳಿಸಿತು. 'ಇಂದಿನಿಂದ ರಾಷ್ಟ್ರವಿಪ್ಲವಕ್ಕೆ ಮಂಗಳಾಚರಣವು' ಎಂದು ಪುರನಿವಾಸಿಗಳೆಲ್ಲರೂ ತಿಳಿಯುವಂತಾದುದು.

## ಐವತ್ತಮೂರನೆಯ ವಿಲಾಸ

ಕಮಲಿನಿಯು ಕ್ರೋಧಾವೇಶದಿಂದ ನರರಾಕ್ಷಸಿಯಾಗಿ ಹೋಗಿರು ವಳು. ಮಹಾರಾಣಿಗೆ ಅತ್ಯಂತ ವಿಶ್ವಾಸಕ್ಕೆ ಪಾತ್ರನಾಗಿದ್ದ ವಿಜಯ ಸಿಂಹನು ಶತ್ರುಪಕ್ಷವನ್ನು ಅವಲಂಬಿಸಿದನೆಂದು ಕೇಳಿದಾಗಿನಿಂದಲೂ, ಮಹಾರಾಣಿ ಕಮಲಿನಿಯು ಪಿಶಾಚಿಯ ರೂಪವನ್ನು ತಾಳಿ ಬೆಂಕಿಯ ಚೂರಾಗಿ ಬಿಟ್ಟಿರುವಳು. ಆಕೆಯ ಕೋಪಾವೇಶಕ್ಕೆ ಇಷ್ಟೇ ಕಾರಣ ವಾಗಿರಲಿಲ್ಲ. ಇನ್ನೂ ಅನೇಕ ಕಾರಣಗಳಿದ್ದುವು ; ಅವುವೆಂದರೆ—

(೧) ಆಕೆಯ ಅಪ್ಪಣೆಯನ್ನು ಪಡೆಯದೆಯೇ ಶೈಲೇಂದ್ರನು ತನ್ನ ಮನೆಯಲ್ಲಿ ಸಂಗೀತವನ್ನು ಮಾಡಿಸಿದುದು.

(೨) ಆಕೆಯ ಅಪ್ಪಣೆಯನ್ನು ಪಡೆಯದೆಯೇ ಪುರಪ್ರಮುಖರು ಆತನ ಮನೆಗೆ ಹೋದುದು.

(೩) ಆಕೆಯ ಅಪ್ಪಣೆಯನ್ನು ಪಡೆಯದೆಯೇ, ಆರೂ ಆವ ಕೆಲಸ ವನ್ನೂ ಮಾಡುತ್ತಿರಲಿಲ್ಲವೋ, ಅಂಥವರು ಕೂಡ ಸಂತೋಷ ಕೂಟಕ್ಕೆ ಭಾಗಿಗಳಾದುದು.

(೬) ಸಂಗೀತವಾದ ಮೇಲೆ, ಪುರಪ್ರಮುಖರು ರಾಜನೀತಿಗೆ ವಿರೋಧವಾಗಿ ರಾಜವಿದ್ರೋಹಕರವಾದ ಸಭೆಗೂಡಿ ಬಲು ಹೊತ್ತು ಗುಟ್ಟಾಗಿ ಆಲೋಚನೆ ಮಾಡಿದುದು.

ಇವೇ ಆದಿಯಾದ ಪ್ರಜೆಗಳ ಅಪರಾಧದಿಂದ ಕಮಲಿನಿಯು ರೇಗಿ ರೇಗಿ ಬೀಳಲಾರಂಭಿಸಿದಳು. 'ಮಾರವಾಡದ ಸಂಸ್ಥಾನಕ್ಕೇ ಏನೋ ವಿಪತ್ತು ಸಂಭವಿಸಬಹುದು,' ಎಂದು ಸೇವಕರೆಲ್ಲರೂ ತಿಳಿದು ನಡು ಗಿದವರಾಗಿ, ಆರೂ ಆಕೆಯ ಇದಿರಿನಲ್ಲಿ ಸುಳಿದಾಡಲು ಸಾಹಸವುಳ್ಳವ ರಾಗಲಿಲ್ಲ.

ಕಮಲಿನಿಯು ಅಡಿಗಡಿಗೂ ಹೆಚ್ಚುತಲಿದ್ದ ಕ್ರೋಧದಿಂದ ಮೈ ಮರೆತು, ಏನ ಮಾಡುವುದಕ್ಕೂ ದಿಕ್ಕೇ ತೋರದವಳಾದಳು. ಮಾರ ವಾಡದ ಎಲ್ಲಾ ಪ್ರಜೆಗಳನ್ನೂ ಗಲ್ಲಿಗೇರಿಸಿ ಬಿಟ್ಟಿದ್ದರೂ, ಆಕೆಯ ಕೋಪವು ಶಾಂತವಾಗುತ್ತಿದ್ದಿತೋ ಇಲ್ಲವೋ ಹೇಳುವುದಕ್ಕಾಗದು. ಶಕ್ತಿ ಯಿದ್ದಿದ್ದರೆ, ಆಕೆಯು ತನ್ನ ಕೋಪಕ್ಕೆ ಫಲವಾಗಿ ಮಾರವಾಡಕ್ಕೆಲ್ಲಾ ಬೆಂಕಿಯನ್ನು ಹೊತ್ತಿಸಿ ಎಲ್ಲವನ್ನೂ ಸುಟ್ಟು ಬೂದಿ ಮಾಡಿಬಿಡುತ್ತಿದ್ದಳು. ದೈವ ಯೋಗದಿಂದ ಆಕೆಯ ಕೋಪವೆಲ್ಲಾ ವಿಜಯಸಿಂಹನ ಮೇಲೆ ತಿರುಗಿತು. ಆದರೆ ಮಾಡುವುದೇನು? ಆತನು ಶತ್ರು ಪಕ್ಷವನ್ನು ಅವ ಲಂಬಿಸಿಬಿಟ್ಟಿದ್ದನು. ಅದರಿಂದ ಏನೂ ಪ್ರಯೋಜನವಾಗದಿರಲು, ಅದು ಶೈಲೇಂದ್ರನ ಮೇಲೆ ತಿರುಗಿತು. ಆ ಕೂಡಲೆ ಆಕೆಯು ಶೈಲೇಂದ್ರ ನನ್ನು ಹಿಡಿದು ಕಾರಾಗಾರದಲ್ಲಿಡಬೇಕೆಂದು ಅಪ್ಪಣೆಮಾಡಿದಳು. ಬಳಿಕ ಆಕೆಯ ಕೋಪವು ಪುರಪ್ರಮುಖರ ಮೇಲೆ ಬಿದ್ದಿತು. ಆದರೆ ಒಂದೇ ತಡವೆಗೆ ಎಲ್ಲರನ್ನೂ ದಂಡಿಸುವುದು ಅಸಾಧ್ಯವಾಗಿ ತೋರಿಬಂದುದರಿಂದ ಆಕೆಗೆ ಕಷ್ಟಕ್ಕಿಟ್ಟಿತು. ಇದರಿಂದಲೂ ಆಕೆಯು ಕೃತಕೃತ್ಯೆಯಾಗದೆ, ಕುಮುದಿನಿಯನ್ನು ಪರಿಪರಿಯಾಗಿ ನಿಂದಿಸಿ ಆಕೆಯ ತಲೆಯನ್ನೇ ಚೆಂಡಾಡಿಬಿಡಬೇಕೆಂದುಕೊಂಡಳು. ಮುಖ್ಯವಾಗಿ ಆಕೆಯ ಕೋಪ ವೆಲ್ಲವೂ ತನ್ನ ಗಂಡನ ಮೇಲಿದ್ದಿತು. 'ಮಹಾರಾಜಸಿಂಹನು ಮನುಷ್ಯ ನಾಗಿದ್ದಿದ್ದರೆ, ಇಷ್ಟೆಲ್ಲಾ ಅನರ್ಥಗಳು ನಡೆಯುವುದಕ್ಕೆ ಅವಸರವೇ ಇರು

ತ್ತಿರಲಿಲ್ಲ,' ಎಂದು ಕಮಲಿನಿಯು ಚಿಂತಿಸಿ ಚಿಂತಿಸಿ ಆವ ಬಗೆಯಾದ ಸಿದ್ಧಾಂತ ಮಾಡುವುದಕ್ಕೂ ಅಸಮರ್ಥೆಯಾಗಿಬಿಟ್ಟಳು.

ಸಂಧ್ಯಾಕಾಲವಾದ ಕೂಡಲೆ, ಕಮಲಿನಿಯು ಪರಿಚಾರಿಕೆಯೊಬ್ಬಳನ್ನು ಜತೆಯಲ್ಲಿ ಕರೆದುಕೊಂಡು ಚಿತ್ತೂರು ದುರ್ಗಕ್ಕೆ ಪಯಣಮಾಡಿದಳು. ಆಕೆಯು ಹೊರಡುವಾಗ, ತನ್ನ ಜತೆಯಲ್ಲಿ ಆವ ಸಖಿಯನ್ನೂ ಕರೆದುಕೊಂಡು ಹೋಗದೆ, ಅವರನ್ನು ಕುರಿತು—ಸಖಿಯರಿರಾ! ನನ್ನ ಮನವು ಬಹಳವಾಗಿ ಕಳವಳ ಗೊಂಡಿರುವುದು. ನಾನು ನನ್ನ ತಂಗೆಯನ್ನಾದರೂ ನೋಡಿಕೊಂಡು ಬರಬೇಕೆಂದಿರುವೆನು. ನಾನು ಹಿಂದಿರುಗಿ ಬರುವಾಗ, ಆಕೆಯನ್ನೂ ಕರೆದುಕೊಂಡು ಬರಬೇಕೆಂದು ಇಷ್ಟಪಟ್ಟಿರುವೆನು, ಎಂದು ಹೇಳಿ ಹೊರಟಳು. ಆಕೆಯು ಹೊರಡುವಾಗ, ನಗರ ರಕ್ಷಣೆಯ ವಿಷಯದಲ್ಲಿ ವಿಶೇಷವಾದ ಏರ್ಪಾಡುಗಳನ್ನು ಮಾಡಿ ಹೊರಟಳೆಂಬುದನ್ನು ನಾವಿಲ್ಲಿ ತಿಳಿಸಬೇಕಾದುದೇನೂ ಇರುವುದಿಲ್ಲ.

ಕಮಲಿನಿಯು ಕುಮುದಿನಿಯನ್ನು ನೋಡುವುದಕ್ಕಾಗಿ ಹೊರಟಿರುವಳು. ಅದೇ ಸಮಯದಲ್ಲಿ ಕುಮುದಿನಿಯು ಮಾಲತಿಯನ್ನು ಅಪ್ಪಿಕೊಂಡು ಸಂಕಟದಿಂದ ಅಳುತ್ತಿರುವಳು. ಮಾಲತಿಯು ಸಮಾಧಾನ ಪಡಿಸಿದ ಹಾಗೆಲ್ಲಾ, ಕುಮುದಿನಿಯು ಅಳುವುದನ್ನು ಹೆಚ್ಚು ಮಾಡುತ್ತಿರುವಳು. ಅತ್ತು ಅತ್ತು ಬೇಸತ್ತ ಕುಮುದಿನಿಯು ಮಾಲತಿಯನ್ನು ಕುರಿತು—ಸಖಿ! ಇನ್ನು ನಾನು ಬದುಕುವುದಿಲ್ಲ. ಇನ್ನು ಮೇಲೆ ನನಗೂ ಅವರಿಗೂ ಪರಸ್ಪರ ಮುಖಾವಲೋಕನವೇ ಉಂಟಾಗಲಾರದು. ಆದರೆ ನನ್ನ ಮಗುವಿಗೆ—

ಆಕೆಯ ಮಾತು ಮುಗಿಯುವುದರೊಳಗಾಗಿ, ಮಾಲತಿಯು ಕಂಬನಿಗರೆಯುತ್ತಾ—ತಾಯೆ! ನಿನಗೆ ಮತ್ತಾವ ಬಗೆಯಿಂದ ಸಮಾಧಾನ ಪಡಿಸಲಿ? ಎಂದು ವಿನಯದಿಂದ ಕೇಳಿದಳು.

ಕುಮುದಿನಿ—ಸಖಿ! ಮತ್ತಾವ ಬಗೆಯಿಂದಲೂ ಸಮಾಧಾನ ಪಡಿಸಬೇಕಾದುದಿಲ್ಲ. ಈ ಮಗುವನ್ನು ಕಾಪಿಡುವವರಾರು?

ಮಾಲತಿ—ಈ ಮಾತಿಗೆ ಕಾರಣವೇನು, ತಾಯೇ?

ಕುಮುದಿನಿ—ಇನ್ನು ನಾನು ಬದುಕುವುದಿಲ್ಲ. ಈ ಮಗುವನ್ನು ನೀನು ರಕ್ಷಿಸಿಕೊಳ್ಳು.

ಮಾಲತಿ—ಸಖಿ! ಸ್ಥೈರಿಸು ಸ್ಥೈರಿಸು.

ಕುಮುದಿನಿ—ನಾನು ಬದುಕಲಾರೆನು.

ಮಾಲತಿಯು ಕುಮುದಿನಿಯ ಮನೋಭಾವವನ್ನು ನೋಡಿ ಹೆದರಿ ನಿಂತಳು. ಕುಮುದಿನಿಯು ಹೆಚ್ಚಾಗಿ ಅಳಲಾರದವಳಾಗಿ ಬಸವಳಿದು ಬಿದ್ದಳು. ಆಗ ಮಾಲತಿಯು ಸಡಗರದಿಂದ ಮಗುವನ್ನು ಎತ್ತಿಕೊಳ್ಳುವುದಕ್ಕೆ ಎಷ್ಟು ಪ್ರಯತ್ನಮಾಡಿ ನೋಡಿದರೂ ಸಾಧ್ಯವಾಗಲಿಲ್ಲ. ಈ ಪ್ರಯತ್ನದಲ್ಲಿ ಮಗುವು ಚಟ್ಟೆಂದು ಚೀರಿಟ್ಟುದೊಂದೇ ಫಲವಾದುದು. ಈ ಚೀತ್ಕಾರಧ್ವನಿಯಿಂದ ಕುಮುದಿನಿಯು ಎಚ್ಚೆತ್ತವಳಾಗಿ ಮಗುವನ್ನು ತಟ್ಟಿ ಸಮಾಧಾನಪಡಿಸಲಾರಂಭಿಸಿದಳು. ಒಂದು ಬಗೆಯಾಗಿ ಆ ದಿನವು ಹೇಗೋ ಕಳೆಯಿತು.

ಮರುದಿನ ಬೆಳಗಿನ ಜಾವದಲ್ಲಿ ಕುಮುದಿನಿಯೂ ಮಾಲತಿಯೂ ಕುಳಿತುಕೊಂಡು ಮಗುವಿನ ಆಟಪಾಟಗಳನ್ನು ನೋಡುತ್ತಾ ಕಾಲವನ್ನು ಕಳೆಯುತ್ತಿದ್ದರು. ಇಬ್ಬರೂ ಮೌನದಿಂದ ಬಾಲಲೀಲಾವಿಲಾಸದ ಆನಂದವನ್ನು ಅನುಭವಿಸುತ್ತಿದ್ದರು. ಈ ಸಮಯದಲ್ಲಿ ಕುಮುದಿನಿಯು ಆನಂದ ಸಾಗರದಲ್ಲಿ ಮುಳುಗಿದ್ದಳೇ ಹೊರತು, ಆವ ಕಾರಣದಿಂದಲೂ ಅಳುತ್ತಿರಲಿಲ್ಲ. ಮಗುವಾದ ಲಾವಣ್ಯಸಿಂಹನು ತಾಯಿಯ ತೊಡೆಯಲ್ಲಿ ಮಲಗಿಕೊಂಡು ನಿಷ್ಕಲ್ಮಷವಾದ ತನ್ನ ಮಂದಹಾಸವನ್ನು ಬೀರುತ್ತಿರುವಲ್ಲಿ, ಆರಿಗೆ ತಾನೇ ವ್ಯಸನವುಂಟಾಗುವ ಸಂಭವವುಂಟು. ಮಾಲತಿಯೂ ಈ ಆನಂದದಲ್ಲಿ ಭಾಗಿನಿಯಾಗಿರುವಳು. ಮಾಲತಿಯ ಆನಂದಕ್ಕೆ ಕಾರಣವು ಈ ರೀತಿಯಾಗಿದ್ದಿತು :—ಕುಮುದಿನಿಯು ದುರ್ಗಕ್ಕೆ ಬಂದಾಗಿನಿಂದಲೂ ಇಂತಹ ಸಂತೋಷದಲ್ಲಿ ಆವಾಗಲೂ ತೇಲಿ ಮುಳುಗಿದವಳಾಗಿಯೇ ಇರಲಿಲ್ಲ.

ಇವರಿಬ್ಬರೂ ಈ ಆನಂದದಲ್ಲಿ ಮೈಮರೆತಿರುವಾಗ, ಆರೋ ಬರುವ ಶಬ್ದವಾಯಿತು. ಆ ಶಬ್ದಕ್ಕೆ ಕಾರಣವನ್ನು ಅರಿವುದಕ್ಕಾಗಿ

ಇಬ್ಬರೂ ಹಿಂದಿರುಗಿ ನೋಡಿದಾಗ, ಮಹಾರಾಣಿ ಕಮಲಿನಿಯು ಹಿಂದೆ ಬಂದು ನಿಂತಿದ್ದಳು.

ಕುಮುದಿನಿಯು ಕಮಲಿನಿಯನ್ನು ನೋಡಿದ ಕೂಡಲೆ, ತನ್ನ ಮಗುವನ್ನು ಬಲವಾಗಿ ಅಪ್ಪಿಕೊಂಡು ಭಯದಿಂದ ನಡುಗುತ್ತಾ ಅಯ್ಯೋ! ಎಂದು ರೋದನಮಾಡಿದಳು. ಆಕೆಯು ಮನದಣಿಯೆ ಅತ್ತಬಳಿಕ, ಅಕ್ಕನು ಬಂದುದಕ್ಕಾಗಿ ಎದ್ದು ನಿಂತಳು. ತರುವಾಯ ತನ್ನ ಮಗುವನ್ನು ಆಕೆಯ ಕೈಗೆ ಕೊಡುವುದಕ್ಕೆ ಹೋಗಿ—ಅಕ್ಕ! ನಾನು ಇನ್ನು ಬದುಕಲಾರೆ. ನನಗಾರಿರುವರು? ನೀನೇ ಈ ಮಗುವನ್ನು ಕಾಪಿಡಬೇಕು. ಇದು ಆವ ಅಪರಾಧವನ್ನೂ ಮಾಡಿಲ್ಲ. ಈ ಮಗುವು ನನ್ನದಲ್ಲ; ಇದು ನಿನ್ನದು. ಇದಕ್ಕೆ ಪೋಷಕರು ನೀನಲ್ಲದೆ ಮತ್ತಾರುಂಟು? ಎಂದು ಆಳುತ್ತಾ ಹೇಳುತ್ತಿದ್ದ ಹಾಗೆಯೇ, ಜ್ಞಾನತಪ್ಪಿ ದುಢಪ್ಪೆಂದು ನೆಲದ ಮೇಲೆ ಬಿದ್ದುಬಿಟ್ಟಳು. ತಟ್ಟನೆ ಮಾಲತಿಯು ಆಕೆಯನ್ನು ಹಿಡಿದು ಎತ್ತದೇ ಹೋಗಿದ್ದರೆ, ಕುಮುದಿನಿಯೂ, ಆಕೆಯ ಮಗುವೂ ಸ್ವಾಮಿ ಪಾದಾರವಿಂದವನ್ನು ಸೇರಿ ಬಿಡುತ್ತಿದ್ದರು.

ಕಮಲಿನಿಯು ಈ ದೃಶ್ಯವನ್ನು ನೋಡಿದಳು. ಕೂಡಲೆಯೇ ಅವಳ ಅಂಗಾಂಗಗಳೆಲ್ಲವೂ ಥರಥರನೆ ನಡುಗಿದುವು. ತರುವಾಯ ಆಕೆಯು ಅವಾಕ್ಕಾಗಿ ತಟ್ಟನೆ ಕುಳಿತುಬಿಟ್ಟಳು. ಅವಳ ಮುಖದಲ್ಲಿ ತೇಜಸ್ಸು ಮಾಯವಾಗಿ ಅದರ ಸ್ಥಾನದಲ್ಲಿ ವೈರಸ್ಯವು ತಲೆದೋರಿದುದನ್ನು ನೋಡಿ, ಮಾಲತಿಯು ದಿಕ್ಕು ತೋರದವಳಾಗಿ ನಿಂತು ಬಿಟ್ಟಳು.

ಇಷ್ಟನ್ನುವುದರೊಳಗಾಗಿ ಕಮಲಿನಿಯು ಮಗುವಿನಂತೆ ಗಳಗಳನೆ ಅಳುವುದಕ್ಕೆ ತೊಡಗಿದಳು. ಬಳಿಕ ಆಕೆಯು ಹುಚ್ಚಿಯಂತಾಗಿ ಅರಚುತ್ತಾ ಅಲ್ಲಿಂದ ಹೊರಗೆ ಹೊರಟಳು. ಕುಮುದಿನಿಯು ಈ ರೋದನ ಧ್ವನಿಯನ್ನು ಕೇಳಿ ಕಣ್ಣು ತೆರೆದಕೂಡಲೆ ಸುತ್ತಲೂ ನೋಡಿ—ನನ್ನ ಮಗುವೆಲ್ಲಿ? ನನ್ನ ಮಗುವೆಲ್ಲಿ? ಲಾವಣ್ಯ ಲಾವಣ್ಯ! ಎಂದು ಹುಚ್ಚಿಯಂತೆ ಅರಚಿದಳು.

ಮಾಲತಿಯು ಓಡಿ ಬಂದು ಮಗುವನ್ನು ಕುಮುದಿನಿಯ ಕೈಗೆ ಕೊಟ್ಟು—ತಾಯೆ! ಭಯವೇನು ಬಂದಿದೆ? ನಿನ್ನ ಲಾವಣ್ಯನು ನಿನ್ನ ಬಳಿಯಲ್ಲಿಯೇ ಇರುವನು, ಎಂದಳು.

ಕುಮುದಿನಿಯು ಮಗುವನ್ನು ಎತ್ತಿಕೊಂಡು ಸಮಾಧಾನಪಟ್ಟವಳಾಗಿ—ಮಾಲತಿ! ನಾನು ಸ್ವಪ್ನವನ್ನು ಕಂಡೆನು. ಆ ಸ್ವಪ್ನವು ಬಲು ಭಯಂಕರವಾದುದು. ನನ್ನ ಸ್ವಪ್ನದಲ್ಲಿ ನನ್ನ ಅಕ್ಕನು ಲಾವಣ್ಯನನ್ನು ನನ್ನಿಂದ ಕಸಿದುಕೊಂಡು ಹೋಗುವುದಕ್ಕೆ ಬಂದಿರುವುದಾಗಿ ತೋರಿ ಬಂದಿತು. ಸಖಿ! ಇದು ಸತ್ಯವೇ? ಎಂದು ಕೇಳಿದಳು.

ಈ ಮಾತ ಕೇಳಿ ಮಾಲತಿಗೆ ಪ್ರಾಣವೇ ಹಾರಿಹೋದಂತಾಯಿತು. ಆದರೂ ಆಕೆಯು ಧೈರ್ಯವನ್ನು ತಂದುಕೊಂಡು—ತಾಯೆ! ಸ್ವಪ್ನವು ಸತ್ಯವಾಗುವುದೆಂದರೇನು? ಎಂದು ಸಂತೈಸಿದಳು.

ಕುಮುದಿನಿಯು ಮತ್ತಾವ ಮಾತನ್ನೂ ಆಡದೆ, ಮನದಲ್ಲಿ ಆವಾವುದನ್ನೋ ಚಿಂತಿಸುತ್ತಾ ಧಾರಾಳವಾಗಿ ಕಣ್ಣೀರ ಸುರಿಸಲಾರಂಭಿಸಿದಳು.

---

## ಐವತ್ತನಾಲ್ಕನೆಯ ವಿಲಾಸ

ಕಮಲಿನಿಯು ಅವಳ ಜೀವಮಾನದಲ್ಲಿ ಇಂತಹ ಗುರುತರವಾದ ವೇದನೆಯನ್ನು ಎಂದೂ ಅನುಭವಿಸಿದವಳಾಗಿರಲಿಲ್ಲ. ಆಕೆಯು ನಿಜವಾಗಿಯೂ ಕುಮುದಿನಿಯ ಪ್ರಾಣಸಾರಸರ್ವಸ್ವವಾದ ಲಾವಣ್ಯನೆಂಬ ಮಗುವನ್ನು ಆಕೆಯಿಂದ ಕಸಿದುಕೊಂಡು ಹೋಗುವುದಕ್ಕಾಗಿ ಬಂದಿದ್ದಳು. ಅವಳು ತನ್ನ ತಂಗೆಯ ಮಗುವನ್ನು ಸಂಹಾರಮಾಡಿ, ತಾನೇ ಮಾರವಾಡದ ಮಹಾರಾಣಿಯ ತಾಯಿಯಾಗಬೇಕೆಂದು ಏನೇನೋ ಪ್ರಯತ್ನಮಾಡುತ್ತಿದ್ದಳು. ಆದರೆ ಆಕೆಯು ರಾಕ್ಷಸಿಯಾದರೂ ಇನ್ನೂ ಮಾನವಿಯೇ ಆಗಿದ್ದಳು. ಕಮಲಿನಿಯು ಕುಮುದಿನಿಯನ್ನು ನೋಡಿದ ಕೂಡಲೆ ಅವಳ ಹೃದಯದಲ್ಲಿ ಸಹೋದರೀ ಪ್ರೀತಿಯು ತುಂಬಿಹೋಯಿತು. ಆಕೆಯು ಆವ ಕೆಲಸವನ್ನು ಮಾಡಬೇಕೆಂದು ಬಂದಿದ್ದಳೋ, ಆ ಕೆಲಸವು

ನೆರವೇರದೆ, ತನ್ನ ಉದ್ದೇಶಕ್ಕೆ ಭಂಗವುಂಟಾಗಲು, ಕಮಲಿನಿಯು ಕಾಲ ಹರಣಕ್ಕೆಡೆಗುಡದೆ ಚಿತ್ತೂರು ದುರ್ಗವನ್ನು ಬಿಟ್ಟು ಹೊರಟೇ ಹೋದಳು.

ಕಮಲಿನಿಯು ಚಿತ್ತೂರು ದುರ್ಗವನ್ನು ಬಿಟ್ಟಳೇ ಹೊರತು, ತನ್ನ ಹೃದಯದ ಉದ್ದೇಶವನ್ನು ತ್ಯಾಗಮಾಡಲಿಲ್ಲ. ಆಕೆಯು ತನ್ನ ಉದ್ದೇಶ ಸಿದ್ಧಿಗಾಗಿ ಹೃದಯಹೀನರಾದ ಇಬ್ಬರು ಪ್ರಹರಿಗಳನ್ನು ಕರೆದು—ನೀವು ಗಳು ಕುಮುದಿನಿಯ ಮಗುವನ್ನು ಕೊಂಡು ಬರುವುದಾದರೆ, ನಿಮಗೆ ನಾನು ಒಂದು ಲಕ್ಷರೂಪಾಯಿಗಳ ಬಹುಮಾನವನ್ನು ಕೊಡುವುದಲ್ಲದೆ, ರಾಜ್ಯದಲ್ಲಿ ಅದೊಂದು ದೊಡ್ಡ ಪದವಿಯನ್ನೂ ಕಲ್ಪಿಸಿಕೊಡುವೆನು. ಈಗೆ ನಿಮಗೆ ಮುಂಗಡವಾಗಿ ಈ ಹಾರವನ್ನು ಕೊಟ್ಟಿರುವೆನು. ನೀವುಗಳು ಈ ಕೂಡಲೆಯೇ ಹೊರಡತಕ್ಕದಿ' ಎಂದು ತನ್ನ ದುರಭಿಸಂಧಿಯನ್ನು ತಿಳಿಯ ಪಡಿಸಿದಳು.

ಪ್ರಹರಿಗಳು ಅಮೂಲ್ಯವಾದ ರತ್ನಹಾರವನ್ನು ಪಡೆದುಕೊಂಡು ಚಿಂತಿಸಿದರು :—

"ಕಾರ್ಯಾರಂಭವಲ್ಲಿಯೇ ಅಮೂಲ್ಯವಾದ ರತ್ನಾಭರಣವು ; ಕಾರ್ಯವಾದ ಮೇಲೆ ಒಂದು ಲಕ್ಷರೂಪಾಯಿಗಳ ಬಹುಮಾನವು ; ಅಲ್ಲ ದೆಯೂ ರಾಜ್ಯದಲ್ಲಿ ಗಣ್ಯವಾದ ಅಧಿಕಾರದ ಪ್ರಾಪ್ತಿಯು. ಇದನ್ನು ನೋಡಿದರೆ, ನಮ್ಮ ಜಾತಕದಲ್ಲಿ ಎಲ್ಲಾ ಗ್ರಹಗಳೂ ಹನ್ನೊಂದನೆಯ ಮನೆಗೆ ಬಂದಂತಿವೆ."

ಪ್ರಹರಿಗಳು ಈ ರೀತಿಯಾಗಿ ಆಲೋಚಿಸಿ ಸುಖಸಾಗರದಲ್ಲಿ ಮುಳುಗಿದವರಾಗಿ ತಮ್ಮ ಕಾರ್ಯನಿರ್ವಹಣಕ್ಕಾಗಿ ಸುರಾಪಾನವನ್ನು ಮಾಡುವುದಕ್ಕೆ ತೊಡಗಿದರು. ಅವರು ಕುಮುದಿನಿಯನ್ನು ಬಲ್ಲವರಾಗಿದ್ದ ಕಾರಣ, ಜ್ಞಾನವು ಸರಿಯಾಗಿರುವಾಗ, ಕುಮುದಿನಿಯ ಕೈಯಿಂದ ಮಗು ವನ್ನು ಕಿತ್ತುಕೊಳ್ಳುವುದು ಅತಿ ಪ್ರಯಾಸದ ಕೆಲಸವೆಂದು ತಿಳಿದು ಸುರಾ ಪಾನದಲ್ಲಿ ಮಗ್ನರಾದರು. ಸುರಾಪಾನದ ಮದದಿಂದ ಮತ್ತರಾದವ ರೊಬ್ಬರೇ ಈ ಘಾತುಕ ಕೃತ್ಯವನ್ನು ಮಾಡಲು ಹಿಂಜರಿಯರು.

ಬಡತನವು ಬಲ ಕೆಟ್ಟುದು ; ಅದು ಆವ ನೀಚಕೆಲಸವನ್ನಾದರೂ ಸಂಕೋಚವಿಲ್ಲದ ಹಾಗೆ ಮಾಡಿಸಿಬಿಡುವುದು. ಪ್ರಹರಿಗಳು ಹಣದ ಆಸೆಗಾಗಿ ಹತ್ಯಾಕಾರ್ಯವನ್ನು ಕೈಕೊಂಡರು. ಕ್ರೂರಕಾರ್ಯವನ್ನು ನೆರವೇರಿಸುವುದಕ್ಕಾಗಿ ಅವರು ಪಾನಾಸಕ್ತರಾದರು. ಆದರೂ ಅವರ ಮನವು ಕಲ್ಲಾಗಲಿಲ್ಲ. ಬಳಿಕ ಒಬ್ಬನು ಹತಾಶನಾಗಿ—ಮಿತ್ರನೇ ! ಎಂದಿಗೂ ನನ್ನಿಂದ ಈ ಕೆಲಸವಾಗಲಾರದು. ನನಗೆ ಹೊಟ್ಟೆಗಿಲ್ಲದಿದ್ದರೂ ಚಿಂತೆಯಿಲ್ಲ. ನಾನು ಬಡವನಾಗಿಯೇ ಇದ್ದುಕೊಂಡಿರುವೆನು. ನಾನು ಹಣಕ್ಕಾಗಿ ಹತ್ಯೆಯನ್ನು ಮಾಡಿ, ಪರಲೋಕದಲ್ಲಿ ನರಕಕ್ಕೆ ಹೋಗಲಾರೆನು, ಎಂದನು.

ಎರಡನೆಯವನು—ನೀನು ಹೀಗೆ ಮಾಡುವುದಾದರೆ, ನಿನ್ನನ್ನು ಹೇಡಿಯೆನ್ನುವರು.

ಮೊದಲನೆಯವನು—ಹೇಳಿದರೆ ಹೇಳಲಿ ; ನಷ್ಟವೇನು ?

ಎರಡನೆಯವನು—ನಾವು ಈ ಕೆಲಸ ಮಾಡದೇ ಹೋದರೆ, ಮಹಾರಾಣಿಯು ನಮ್ಮನ್ನು ಸುಮ್ಮನೆ ಬಿಡುವಳೆಂದು ತಿಳಿದೆಯಾ, ಹೇಗೆ? ಆಕೆಯು ನಮ್ಮನ್ನು ಸುಲಿದೇ ಬಿಡುವಳು.

ಮೊದಲನೆ—(ಹೆದರಿ) ಇದು ನಿಜವೇ ನಿಜ.

ಎರಡನೆ—ಹಾಗಾದರೆ ನಾವು ಬೇಗನೆ ಹೋಗಿ ಕೆಲಸವನ್ನು ನೆರವೇರಿಸಿ ಬಿಡುವ.

ಮೊದಲನೆ—ಕೊಂಚ ಸೈರಿಸು. ನಾವು ಸಿದ್ಧಪತ್ರೆಯನ್ನು ಸೇವಿಸಿ ಸಿದ್ಧರಾಗುವ.

ಎರಡನೆ—ಇದೀಗ ಒಳ್ಳೆಯ ಸಲಹೆ.

ಹೀಗೆ ಮಾತನಾಡಿಕೊಂಡು ಇಬ್ಬರೂ ಸಿದ್ಧ ಪತ್ರೆಯನ್ನು ಸೇವಿಸಿದ ಬಳಿಕ, ಹರಿತವಾದ ಚೂರಿಯನ್ನು ತೆಗೆದುಕೊಂಡು ಕುಮುದಿನಿಯಿದ್ದಲ್ಲಿಗೆ ತೆರಳಿದರು. ದಾರಿಯಲ್ಲಿ ಮೊದಲನೆಯವನು—ಮಿತ್ರನೇ! ಅವರಿಬ್ಬರೂ

ಆವಾಗಲೂ ಒಟ್ಟಿಗೆಯೇ ಇರುವರು. ಹೀಗಿರುವುದಾದರೆ, ನಮ್ಮ ಕಾರ್ಯವು ಹೇಗೆ ನೆರವೇರೀತು? ಎಂದನು. ಇದನ್ನು ಕೇಳಿದ ಎರಡನೆಯ ವನು ಬೇಸರ ಪಟ್ಟವನಾಗಿ—ಎಲಾ ಕತ್ತೇ! ನೀನು ಸಾಯಬಾರದೇನೋ! ಅವರಿಬ್ಬರೂ ಹೆಣ್ಣು ಹುಡುಗಿಯರೆಂಬುದು ನಿನಗೆ ಗೊತ್ತಿಲ್ಲವೇ? ಎಂದನು.

ಪ್ರಹರಿಗಳಿಬ್ಬರೂ ಸಿದ್ಧಪತ್ರೆಯ ಪ್ರಭಾವದಿಂದ ಸಿದ್ಧಪುರುಷರಂ ತಾದರು; ಅವರ ಕಣ್ಣುಗಳು ಕೆಂಪಾದುವು; ಮಾಂಸಖಂಡಗಳು ಗಟ್ಟಿ ಯಾದುವು; ಶರೀರವು ಪಿಶಾಚಭಾವವನ್ನು ತಾಳಿತು. ಬಲು ಮಾತಿ ನಿಂದೇನು? ಅವರಿಬ್ಬರೂ ಆಗ ತಾನೇ ಯಮಲೋಕದಿಂದ ಇಳಿದು ಬರು ತ್ತಿರುವ ಯಮಕಿಂಕರರಾಗಿಬಿಟ್ಟರು

ಪ್ರಹರಿಗಳಿಬ್ಬರೂ ಸಿದ್ಧಪತ್ರೆಯ ಸೇವನೆಯಿಂದ ಹುಚ್ಚರಂತೆ ತಲೆ ಯನ್ನು ತಿರುಗಿಸುತ್ತಲೂ, ತಪ್ಪುತಪ್ಪಾಗಿ ಹಜ್ಜೆಗಳನ್ನಿಡುತ್ತಲೂ ಕುಮು ದಿನಿಯ ಬಳಿಗೆ ಬರುತ್ತಿದ್ದರು. ಕುಮುದಿನಿಗೆ ಆಹಾರವನ್ನು ತರುವು ದಕ್ಕಾಗಿ ಹೊರಗೆ ಹೋಗಿದ್ದ ಮಾಲತಿಯು ದಾರಿಯಲ್ಲಿ ಹಠಾತ್ತಾಗಿ ಇವರನ್ನು ನೋಡಿದಳು. ಹಸಿವೆಯಿಂದ ಕಂಗೆಟ್ಟಿದ್ದ ಹುಲಿಯು ಜಿಂಕೆಯ ಮೇಲೆ ಬೀಳುವಂತೆ, ಈ ಪ್ರಹರಿಗಳಿಬ್ಬರೂ ಒಂದೇ ತಡವೆಗೆ ಮಾಲತಿಯ ಮೇಲೆ ಬಿದ್ದರು. ಅವರಲ್ಲೊಬ್ಬನು ಮಾಲತಿಯ ಕತ್ತನ್ನು ಹಿಡಿದನು; ಮತ್ತೊಬ್ಬನು ಆಕೆಯ ಎದೆಯಲ್ಲ ಚೂರಿಯನ್ನು ನುಗ್ಗಿಸಿದನು. ಮಾಲ ತಿಯು ಯಾತನೆಯನ್ನು ತಡೆಯಲಾರದೆಯೇ 'ಸಖಿ ಸಖಿ, ಕುಮುದಿನಿ!' ಎಂದು ಆರ್ತನಾದ ಮಾಡುತ್ತಾ ನೆಲದ ಮೇಲೆ ಬಿದ್ದು ಬಿಟ್ಟಳು. ಅವಳ ಹೃದಯದಿಂದ ರಕ್ತವು ದರದರನೆ ಹರಿದು ಹೋಗಿ ನೆಲವನ್ನು ತೋಯಿಸಿಬಿಟ್ಟಿತು.

ಆರಿಗೇ ಆಗಲಿ, ಒಂದು ಸಲ ಕೊಲೆಮಾಡುವುದೇ ಅಡ್ಡಿ; ಬಳಿಕ ಆ ಭಯವು ಎಲ್ಲಿಯೋ ಮಾಯವಾಗಿ ಬಿಡುವುದು. ಒಂದು ಸಲ ಕೊಲೆ ಮಾಡಿದಾತನು, ಹತ್ತಾರು ಕೊಲೆಗಳನ್ನಾದರೂ ಲೀಲಾಜಾಲವಾಗಿ ನೆರ ವೇರಿಸಲು ಸಿದ್ಧನಾಗಿಬಿಡುವನು. ಅದರಂತೆಯೇ ಪ್ರಹರಿಗಳೂ ನಿರ್ಭಯ

ರಾಗಿ ಮತ್ತೆ ಮತ್ತೆ ಕೊಲೆಮಾಡಬೇಕೆಂಬ ಆಸೆಯಿಂದ ಕುಮುದಿನಿಯನ್ನೂ ತೀರಿಸಿಬಿಡುವುದಕ್ಕಾಗಿ ಹೊರಟರು.

ಕುಮುದಿನಿಯು ಏಕಾಕಿನಿಯಾಗಿ ತನ್ನ ಮಗುವನ್ನು ಆಡಿಸುತ್ತಾ ಕುಳಿತಿದ್ದವಳು, ಒಂದೆ ಆರೋ ಬಂದ ಶಬ್ದವನ್ನು ಕೇಳಿದ ಕೂಡಲೆ— ಸಖಿ, ಮಾಲತಿ! ಇಷ್ಟು ಹೊತ್ತು ಏತಕಾಯಿತು? ಎಂದು ಹೇಳಿ ಹಿಂದಿರುಗಿ ನೋಡಿದಳು. ಆಗ ರಕ್ತದಿಂದ ಭಯಂಕರರಾಗಿದ್ದ ನರರಾಕ್ಷಸರಿಬ್ಬರು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತಾ ನಿಂತಿದ್ದರು.

ಕುಮುದಿನಿಯು ನರರಾಕ್ಷಸರನ್ನು ನೋಡಿದ ಕೂಡಲೆ, ತನ್ನ ಮಗುವನ್ನು ಅಪ್ಪಿಕೊಂಡು ತನ್ನಲ್ಲಿ ತಾನೇ ಅಡಗಿ ಹೋದಳು. ಆಕೆಯ ಕಣ್ಣುಗಳು ನರರಾಕ್ಷಸರನ್ನು ದುರದುರನೆ ನೋಡಿದುವು. ಇಷ್ಟರಲ್ಲಿಯೇ ಆಕೆಯ ಬಾಯಿಯು ಸಂಪೂರ್ಣವಾಗಿ ಒಣಗಿಹೋಗಿದ್ದಿತು.

ನರರಾಕ್ಷಸರು ಪಿಶಾಚಮಯಿಯಾದ ಕುಮುದಿನಿಯನ್ನು ನೋಡಿದ ಮಾತ್ರಕ್ಕೆ ಕಲ್ಲಿನ ಬೊಂಬೆಯಂತಾಗಿ ಇದ್ದಲ್ಲಿಯೇ ನಿಂತುಬಿಟ್ಟರು. ಮುಂದಕ್ಕೆ ಒಂದು ಹಜ್ಜೆಯಿಡುವುದಕ್ಕೂ ಅವರಿಗೆ ಕಾಲೇ ಬರಲಿಲ್ಲ.

ಹೀಗೆಯೇ ಕೊಂಚ ಹೊತ್ತು ಕಳೆದ ಬಳಿಕ, ಅವರು ಚೇತರಿಸಿಕೊಂಡು ಮುಂದು ವರಿದು ಬರುವುದಕ್ಕೆ ಸಿದ್ಧರಾಗುತ್ತಿರುವಲ್ಲಿ, ಮೊದಲನೆಯವನು ಎರಡನೆಯವನನ್ನು ಮುಂದಕ್ಕೆ ತಳ್ಳಿದನು. ಎರಡನೆಯವನು ಇದರಿಂದ ವಿರಕ್ತನಾಗಿ ಗದ್ಗದ ಸ್ವರದಿಂದ—ಬೇಕಾದರೆ ನೀನೇ ಮುಂದೆ ಹೋಗು, ಎಂದುಸುರಿದನು. ಮೊದಲನೆಯವನು—ನೀನೇ ಮುಂದಕ್ಕೆ ಹೋಗು, ಎಂದುತ್ತರವಿತ್ತನು.

ಎರಡನೆಯವನು ಮೊದಲನೆಯವನನ್ನು ಬಾಯಿಗೆ ಬಂದ ಹಾಗೆ ಬೈದು, ತಾನೇ ಮುಂದಕ್ಕೆ ಸರಿದು ಬಂದು ಲಾವಣ್ಯನನ್ನು ಕಿತ್ತು ಕೊಳ್ಳುವುದಕ್ಕೆ ಯತ್ನಮಾಡಿದನು. ಕುಮುದಿನಿಯು ಮಗುವನ್ನು ಬಿಟ್ಟುಕೊಡದೇ ಗರ್ಭನಿರ್ಭೇದವಾಗುವಂತೆ ಗಟ್ಟಿಯಾಗಿ ಅರಚಿಬಿಟ್ಟಳು. ಆಕೆಯ ಚೀತ್ಕಾರಧ್ವನಿಯು ದುರ್ಗವೆಲ್ಲವನ್ನೂ ನಡುಗಿಸಿ ಗಗನ ಮಂಡಲವನ್ನಡರಿತು.

ಈ ಚೀತ್ಕಾರವನ್ನು ಕೇಳಿ ಎರಡನೆಯವನು ದೂರಸರಿದು ನಿಂತನು. ಮೊದಲನೆಯವನು ಇದನ್ನು ನೋಡಿ—ಎಲಾ ಹೆಣ್ಣಿಗ! ನಿನ್ನ ವಿಷಯವನ್ನು ನಮ್ಮ ಮಹಾರಾಣಿಗೆ ತಿಳಿಸಿಬಿಡುವೆನು. ಬಳಿಕ ನಿನ್ನ ಗತಿಯೇನಾಗುವುದೋ ನೀನೇ ನೋಡು, ಎಂದು ಹೇಳಲಾಗಿ, ಎರಡನೆಯವನು ಅಪಮಾನದಿಂದ ರೇಗಿದವನಾಗಿ ಮಗುವನ್ನು ಹಿಡಿದು ಎಳೆಯಲಾರಂಭಿಸಿದನು. ಮತ್ತೊಬ್ಬನೂ ಅವನಿಗೆ ಒತ್ತಾಸೆಯಾಗಿ ಬಂದು ನಿಂತನು. ಇಷ್ಟಾದರೂ ತಾಯಿಯು ಮಗುವನ್ನು ಬಿಡಲೇ ಇಲ್ಲ.

ಕುಮುದಿನಿಯು ಬಲು ಹೊತ್ತು ಹೋರಾಡಲು ಶಕ್ತಿಸಾಲದವಳಾಗಿ ಮತ್ತೆ ಮತ್ತೆ ಅರಚುತ್ತಾ—ಸಖಿ, ಓ ಸಖಿ! ಎಲ್ಲಿಗೆ ಹೋದೆಯೇ? ನನ್ನ ಮಗುವನ್ನು ಎಲ್ಲಿಗಾದರೂ ಕರೆದುಕೊಂಡು ಹೋಗು. ಇನ್ನು ಇದನ್ನು ಕಾಪಿಡುವುದು ನನ್ನ ಯತ್ನದಲ್ಲಿಲ್ಲ. ನಾನು ಈ ಮಗುವನ್ನು ಮತ್ತಾರಿಗೂ ಕೊಡತಕ್ಕವಳಲ್ಲ. ಮಾಲತಿ ಮಾಲತಿ! ನೀನು ಹೇಳಿದ ಮಾತು ಏನಾಯಿತು? ಈ ಸಮಯದಲ್ಲಿ ನೀನು ನನ್ನ ಕೈಬಿಡಬಹುದೇ? ನನ್ನ ಪ್ರಾಣವಾದರೋ ಉಳಿಯುವಂತಿಲ್ಲ, ಎಂದು ಕೂಗಿಕೊಂಡಳು.

ಈ ಪ್ರಶ್ನೆಗೆ ಆವ ಉತ್ತರವೂ ಬರಲಿಲ್ಲ. ಕಲ್ಲೆದೆಯ ನರರಾಕ್ಷಸರ ಹೃದಯವಂತೂ ಈ ಮಾತುಗಳಿಂದ ಕರಗತಕ್ಕವುಗಳಾಗಿರಲಿಲ್ಲ. ಆದುದರಿಂದಲೇ ಪ್ರಹರಿಗಳು ನಿರ್ದಯರಾಗಿ ಬಲುಹೊತ್ತು ಕುಮುದಿನಿಯೊಡನೆ ಹೋರಾಡಿದರು. ಇಬ್ಬರು ನರರಾಕ್ಷಸರ ಇದಿರಿನಲ್ಲಿ ಅಸಹಾಯೆಯಾದ ಹೆಣ್ಣುಹೆಂಗುಸು ಏನ ಮಾಡಬಲ್ಲಳು?

ಕುಮುದಿನಿಯ ಶಕ್ತಿಯು ಅಡಗುತ್ತಾ ಬಂದಿತು. ಆದರೂ ಆಕೆಯು ಮಗುವನ್ನು ಬಿಟ್ಟುಕೊಡಲಿಲ್ಲ. ಇದನ್ನು ಕಂಡು ಮೊದಲನೆಯವನು ಎರಡನೆಯವನನ್ನು ಕುರಿತು—ಈಕೆಯನ್ನು ಕೊಂದ ಹೊರತು ಮಗುವು ಈಚೆಗೆ ಬರುವ ಹಾಗಿಲ್ಲ, ಎಂದನು.

ಎರಡನೆಯವನು ಇದನ್ನು ಕೇಳಿ—ಈಕೆಯನ್ನು ಕೊಲ್ಲುವುದಕ್ಕೆ ಅಪ್ಪಣೆಯಿಲ್ಲ, ಎಂದು ನುಡಿದನು. ಬಳಿಕ ಎರಡನೆಯವನು ತನ್ನ ಸಾಹಸವೆಲ್ಲವನ್ನೂ ವೆಚ್ಚಮಾಡಿ ಮತ್ತೊಂದು ಸಲ ಮಗುವನ್ನು ಹಿಡಿ

ದೆಳೆದನು. ಮಗುವು ಈ ಯಾತನೆಯನ್ನು ತಡೆಯಲಾರದೆ ಅಪಸ್ವರದಿಂದ ಅರಚಿಕೊಂಡಿತು. ಇದನ್ನು ನೋಡಿ ಕುಮುದಿನಿಯೂ ಅತ್ತುಬಿಟ್ಟಳು. ತರುವಾಯ ಆಕೆಯು ಗಟ್ಟಿಯಾಗಿ—ನಾಥ, ಲಲಿತಸಿಂಹ! ಇನ್ನು ನಾನು ಈ ಯತ್ಯಾಚಾರವನ್ನು ತಡೆಯಲಾರೆನು. ನೀನಾದರೂ ಬೇಗನೆ ಬಂದು ನಿನ್ನ ಲಾವಣ್ಯನನ್ನು ರಕ್ಷಿಸು, ರಕ್ಷಿಸು, ರಕ್ಷಿಸು, ಎಂದು ಮೊರೆಯಿಟ್ಟಳು.

ಕುಮುದಿನಿಯು ಹೀಗೆ ಹೇಳಿ ತೊಟ್ಟಿನಿಂದ ಕಳಚಿಬಿದ್ದ ಹೂವಿನಂತೆ, ಬುಡಸಡಲಿಸಿದ ಗಿಡದಂತೆ, ಬಾಣದಿಂದ ಹೊಡೆಯಲ್ಪಟ್ಟ ಕಪೋತಿಯಂತೆ ಅವಸನ್ನಶರೀರೆಯಾಗಿ ನೆಲದ ಮೇಲೆ ದುಪ್ಪೆಂದು ಬಿದ್ದು ಬಿಟ್ಟಳು. ಇದೇ ಸಮಯವೆಂದು ನರರಾಕ್ಷಸರು ಆ ಮಗುವನ್ನು ಹಿಡಿದೆತ್ತಿಕೊಂಡರು. ಒಬ್ಬನು—ತಡವೇಕೆ? ಎಂದನು. ಇನ್ನೊಬ್ಬನೂ—ತಡವೇಕೆ? ಎಂದನು. ಇಬ್ಬರೂ ಹೀಗೆ ಹೇಳಿದ ಬಳಿಕ ಮಗುವನ್ನು ಸಂಹರಿಸುವುದಕ್ಕಾಗಿ ತಮ್ಮ ತಮ್ಮ ಚೂರಿಗಳನ್ನು ಮೇಲಕ್ಕೆ ಎತ್ತಿ ಹಿಡಿದರು.

---

## ಐವತ್ತೈದನೆಯ ವಿಲಾಸ

ಲಾವಣ್ಯನನ್ನು ಕೊಲ್ಲುವುದಕ್ಕಾಗಿ ಪ್ರಹರಿಗಳು ಚೂರಿಯನ್ನು ಮೇಲಕ್ಕೆತ್ತಿದ ಕೂಡಲೆ, ಹೊರಗಣಿಂದ ಒಂದು ಬಾಣವು ಬಂದು ಪ್ರಹರಿಯೊಬ್ಬನ ತಲೆಯಲ್ಲಿ ನಾಟಿತು. ಆ ಕ್ಷಣವೇ ಆತನು ವಿಕಟವಾದ ಚೀತ್ಕಾರವನ್ನು ಮಾಡಿಕೊಂಡು ನೆಲದ ಮೇಲೆ ಉರುಳಿದನು. ಆತನೊಡನೆ ಮಗುವೂ ನೆಲದ ಮೇಲೆ ಬಿದ್ದು ಒದೆದಾಡಿತು. ಮತ್ತೊಬ್ಬ ಪ್ರಹರಿಯು ಈ ದೃಶ್ಯವನ್ನು ನೋಡಿ ಭಯಪಟ್ಟವನಾಗಿ ಹತ್ತು ಹಜ್ಜೆ ದೂರ ಸರಿದು ನಿಂತುಬಿಟ್ಟನು. ಆಗ ಒಬ್ಬಾತನು ಹೊರಗಣಿಂದ ದಡಬಡನೆ ಓಡಿಬಂದು ಮಗುವನ್ನು ಎತ್ತಿಕೊಂಡು ಮತ್ತೊಬ್ಬನನ್ನು ಕಾಲಿನಿಂದ ಒದೆದೊದೆದು ನೆಲದ ಮೇಲೆ ಕೆಡಹಿದನು.

ಈತನೇ ಜುಮ್ಮೇಲಿಂಪನು. ಜುಮ್ಮೇಲಿಯನ ಬಾಣದಿಂದಲೇ ಒಬ್ಬ ಪ್ರಹರಿಯು ನೆಲದ ಮೇಲೆ ಬಿದ್ದು ಆರ್ತನಾದ ಮಾಡಿಕೊಂಡು ವಿಲ

ವಿಲನೆ ಒದೆದಾಡುತ್ತಾ ಕ್ಷಣಮಾತ್ರದಲ್ಲಿ ಪ್ರಾಣಬಿಟ್ಟನು. ಜುಮೇಲಿಯ ನಿಂದ ಒದೆಗಳನ್ನು ತಿಂದ ಮತ್ತೊಬ್ಬನು ಬಿಟ್ಟರೆ ಸಾಕೆಂದು ಒಂದೇ ಉಸಿರಿನಲ್ಲಿ ಓಡಿಹೋಗಿ ಎಲ್ಲಿಯೋ ಮಾಯವಾಗಿ ಬಿಟ್ಟನು.

ಜುಮೇಲಿಯನು ಮಗುವನ್ನು ಎತ್ತಿಕೊಂಡು ಸಮಾಧಾನ ಪಡಿಸಿದ ಬಳಿಕ, ಕುಮುದಿನಿಯನ್ನು ಸಮಾಧಾನಪಡಿಸುವುದಕ್ಕೆ ಉದ್ಯುಕ್ತನಾದನು. ಅಕಟಕಟ! ಕುಮುದಿನಿಯ ಪ್ರಾಣವಾಯುವು ಅಷ್ಟರೊಳಗಾಗಿಯೇ ಹಾರಿ ಹೋಗಿದ್ದಿತು. ಜುಮೇಲಿಯನು ಇದನ್ನು ನೋಡಿದ ಕೂಡಲೆ ಕಣ್ಣುಗಳಲ್ಲಿ ನೀರನ್ನು ತಂದುಕೊಂಡು, ಮಗುವನ್ನು ಎತ್ತಿಕೊಂಡಿದ್ದ ಹಾಗೆಯೇ ಗಳಗಳನೆ ಅಳತೊಡಗಿದನು. ಜುಮೇಲಿಯನು ಕೊಂಚ ಹೊತ್ತು ಅಳುತ್ತಿದ್ದು ಬಳಿಕ ಹೀಗೆ ಚಿಂತಿಸಿದನು:—

"ನಾನು ಇಲ್ಲಿಗೆ ಏಕಾಕಿಯಾಗಿ ಬಂದಿರುವೆನು. ಈ ಕೋಟೆಯ ಸುತ್ತಲೂ ಶತ್ರುಪಕ್ಷದ ಪ್ರಹರಿಗಳು ತುಂಬಿಕೊಂಡಿರುವರು. ನಾನು ದುರ್ದೈವಯೋಗದಿಂದ ಅವರ ಕಣ್ಣಿಗೆ ಬೀಳುವುದಾದರೆ, ನನ್ನ ಪರಿಣಾಮವು ಸುಮುಖವಾಗಲಾರದು. ನಾನು ಈ ಕೂಡಲೆಯೇ ಈ ದುರ್ಗದಿಂದ ಪಾರಾಗಿ ದೂರವಾಗಿ ಹೊರಟು ಹೋಗಬೇಕು. ಈ ಮಗುವನ್ನು ಎತ್ತಿಕೊಂಡು ನಾನು ಏನ ಮಾಡಲಿ? ಇದನ್ನು ನಾನು ಇಲ್ಲಿಯೇ ಆರಲ್ಲಾದರೂ ಬಿಟ್ಟು ಹೋಗುವುದಾದರೆ, ಅವರು ಇದನ್ನು ಚೆನ್ನಾಗಿ ರಕ್ಷಿಸಿಕೊಂಡು ಬರುವರೆಂದು ಭರವಸೆ ಯೇನು?"

ಜುಮೇಲಿಯನು ಹೀಗೆ ಆಲೋಚಿಸುತ್ತಿರುವಲ್ಲಿ, ಆ ಮಗುವು ಅತ್ತು ಅತ್ತು ಬೇಸತ್ತು ಮಲಗಿ ನಿದ್ರಿಸಿಬಿಟ್ಟಿತು. ಜುಮೇಲಿಯನು ನಿದ್ರಿಸುತ್ತಿರುವ ಆ ಮಗುವನ್ನು ಕೌಂಕುಳಲ್ಲಿ ಎತ್ತಿಕೊಂಡು ಆರಿಗೂ ಗೋಚರಿಸದ ಹಾಗೆ ಚಿತ್ತೂರು ದುರ್ಗದಿಂದ ಪಾರಾದನು. ಈತನು ಆವ ರೀತಿಯಲ್ಲಿ ಆರಿಗೂ ಗೊತ್ತಾಗದ ಹಾಗೆ ದುರ್ಗವನ್ನು ಪ್ರವೇಶ ಮಾಡಿದ್ದನೋ, ಈಗಳೂ ಆರಿಗೂ ಗೊತ್ತಾಗದ ಹಾಗೆ ದುರ್ಗದಿಂದ ಪಾರಾಗಿಬಿಟ್ಟನು.

ಜುಮೇಲಿಯನು ದುರ್ಗದಿಂದ ಹೊರಗೆ ಬಂದ ಕೂಡಲೆ ವೇಣು ಗಾನ ಮಾಡಿದನು. ಆ ಕ್ಷಣವೇ ಇಬ್ಬರು ಅಶ್ವಾರೋಹಿಗಳು ಆತನ ಬಳಿಯಲ್ಲಿ ಬಂದು ನಿಂತರು. ಜುಮೇಲಿಯನು ಮಗುವನ್ನು ಎತ್ತಿಕೊಂಡೇ ಕುದುರೆಯನ್ನೇರಿ ದಕ್ಷಿಣದಿಕ್ಕಿನ ಕಡೆಗೆ ಪ್ರಯಾಣ ಬಳೆಯಿಸಿದನು. ಆತನು ದೇವೀ ಮಂದಿರವನ್ನು ಸೇರುವ ವರೆಗೂ ದಾರಿಯಲ್ಲಿ ಕೊಂಚವಾದರೂ ವಿಶ್ರಾಂತಿ ಸುಖವನ್ನು ಪಡೆಯಲು ಇಷ್ಟವುಳ್ಳವನಾಗಲಿಲ್ಲ.

ಕಾಲಕ್ರಮದಲ್ಲಿ ಜುಮೇಲಿಯನು ದೇವೀ ಮಂದಿರಕ್ಕೆ ಬಂದು ಸೇರಿದನು. ಅಲ್ಲಿದ್ದ ಪರಮಾನಂದ ಸ್ವಾಮಿಯು ಮಗುವನ್ನು ಎತ್ತಿಕೊಂಡು ಬಂದಿದ್ದ ಜುಮೇಲಿಯನನ್ನು ನೋಡಿ—ಜುಮೇಲಿಯಾ! ಇದೇನು? ಎಂದು ಕೇಳಲಾಗಿ, ಜುಮೇಲಿಯನು ಅದಕ್ಕೆ ಉತ್ತರವಾಗಿ—ಗುರುದೇವ! ಇದು ಮಾರವಾಡದ ಭಾವಿ ಮಹಾರಾಣನು, ಎಂದು ನುಡಿದನು.

ಪರಮಾ—ಮಾರವಾಡದ ಮಹಾರಾಣನೇ?

ಜುಮೇಲಿಯಾ—ಅಹುದು, ಗುರುದೇವ! ಇದು ರಾಜಕುಮಾರಿ ಕುಮುದಿನಿಯ ಮಗುವು, ಲಾವಣ್ಯಸಿಂಹನೆಂದು ಇದರ ಹೆಸರು.

ಪರಮಾ—ಇದು ನಿನಗೆ ಸಿಕ್ಕಿದ ಬಗೆ?

ಜುಮೇಲಿಯಾ—ನಾನು ರಾಜಧಾನಿಯನ್ನು ಬಿಟ್ಟು ಕುಮುದಿನಿಯನ್ನು ನೋಡಲು ಚಿತ್ತೂರು ದುರ್ಗಕ್ಕೆ ಹೋಗಿದ್ದೆನು. ಆಗ ಅಲ್ಲಿ ಇಬ್ಬರು ನರರಾಕ್ಷಸರು ಇದನ್ನು ಕೊಲ್ಲುವುದರಲ್ಲಿದ್ದರು.

ಪರಮಾ—ನೀನು ಅವರಿಗೆ ಸರಿಯಾದ ದಂಡನೆಯನ್ನು ಮಾಡಿ, ಈ ಮಗುವನ್ನು ಎತ್ತಿಕೊಂಡು ಬಂದಿರುವೆಯಲ್ಲವೇ?

ಜುಮೇಲಿಯಾ—ಅಹುದು.

ಪರಮಾ—ಕುಮುದಿನಿಯೆಲ್ಲಿ?

ಜುಮೋಲಿಯಾ—ಆಕೆಯು ಇನ್ನಿಲ್ಲ.

ಪರಮಾ—ಏನು! ಆಕೆಯು ಸತ್ತಳೇ?

ಜುಮೋಲಿಯಾ—ಆಕೆಯನ್ನು ಆರಾದರೂ ಕೊಂದರೋ, ಇಲ್ಲವೇ ಅವಳೇ ಸತ್ತಳೋ ಒಂದೂ ಗೊತ್ತಿಲ್ಲ. ಅದನ್ನು ಅರಿಯಲು ನನಗೆ ಹೊತ್ತೂ ಇರಲಿಲ್ಲ.

ಪರಮಾ—ಈ ಮಗುವನ್ನು ಇಲ್ಲಿಗೆ ತಂದುದೇಕೆ?

ಜುಮೋಲಿಯಾ—ಇದನ್ನು ಆರಲ್ಲಾದರೂ ಸಮರ್ಪಣಮಾಡಿ ಮೃತ್ಯುಮುಖದಿಂದ ಉಳಿಸಬೇಕೆಂದು ತಂದಿರುವೆನು.

ಪರಮಾ—ಒಳ್ಳೆಯದೇ ಆಯಿತು. ಈಗ ಮಗುವನ್ನು ಏನ ಮಾಡಬೇಕೆಂದಿರುವೆ?

ಜುಮೋಲಿಯಾ—ತಾವು ಇದನ್ನು ಸಾಕಬೇಕು.

ಪರಮಾ—ಇನ್ನೂ ಮಗುವಿನ ಗೋಜೇ! ನಾನು ಒಂದು ಮಗುವನ್ನು ಸಾಕಿ ಸಲಹಿ, ನನ್ನ ಯೋಗವೆಲ್ಲವನ್ನೂ ಹಾಳಮಾಡಿ ಕೊಂಡಿರುವೆನು.

ಜುಮೋಲಿಯಾ—ಅದು ಮಗುವಿನ ದೋಷವಲ್ಲ. ತಾವು ಅದನ್ನು ಇಷ್ಟಪಟ್ಟು ಸಾಕೋಣವಾಯಿತು.

ಸನ್ಯಾಸಿಯು ಕೊಂಚ ಹೊತ್ತು ಸುಮ್ಮನಿದ್ದು ಬಳಿಕ—ಮಗು! ನಾನು ಆವಾಗ ಈ ಮಗುವನ್ನು ನಿನಗೆ ಕೊಟ್ಟು ಬಿಡಲು ಇಷ್ಟಪಡು ವೆನೋ, ಆಗಳೇ ನೀನು ಇದನ್ನು ಹಿಂದಿರುಗಿ ತೆಗೆದುಕೊಳ್ಳಬೇಕು. ಈ ಕಟ್ಟಳೆಗೆ ನೀನು ಸಮ್ಮತಿಸುವುದಾದರೆ, ನಾನು ಇದರ ಲಾಲನ ಪಾಲ ನದ ಭಾರವನ್ನು ಅಂಗೀಕರಿಸುವೆನು, ಎಂದು ಹೇಳಿದನು.

ಜುಮೋಲಿಯನು ಮಗುವನ್ನು ಹೇಗೆ ಕಾಪಿಡಬಲ್ಲನು? ಅದರಲ್ಲಿಯೂ ಆತನು ಯುದ್ಧಕ್ಕೆ ತೆರಳುವವನಾಗಿರುವನು. ಆದುದರಿಂದ ಆತನು ಅಗತ್ಯವಾಗಿಯೂ ಸನ್ಯಾಸಿಯ ಮಾತಿಗೆ ಒಪ್ಪಲೇ ಬೇಕಾಯಿತು. ಬಳಿಕ ಆತನು ಆ ಮಗುವನ್ನು ಸನ್ಯಾಸಿಯ ಕೈಗೆ ಕೊಟ್ಟು, ಮತ್ತೆ ಮಾರವಾಡದ ಕಡೆಗೆ ತೆರಳಿದನು. ಪರಮಾನಂದ ಸ್ವಾಮಿಯು ಲಾವಣ್ಯಮಯಿ ನಾದ ಲಾವಣ್ಯಸಿಂಹನನ್ನು ಎತ್ತಿಕೊಂಡು ದೇವಸ್ಥಾನದೊಳಗೆ ಪ್ರವೇಶ ಮಾಡಿದನು.

---

## ಐವತ್ತಾರನೆಯ ವಿಲಾಸ

ಇತ್ತ ಕಡೆ, ಕುಮುದಿನಿಯ, ಹಾಗೂ ಮಾಲತಿಯ ಮರಣದ ಸುದ್ದಿಯು ನಿಮಿಷಮಾತ್ರದಲ್ಲಿ ಮಾರವಾಡದ ಎಲ್ಲೆಡೆಗಳಲ್ಲಿಯೂ ಕಾಡ ಕಿಚ್ಚಿನಂತೆ ಹಬ್ಬಿತು. ದುರ್ಗರಕ್ಷಕರೂ ತಾವು ಕಂಡುದನ್ನು ಕಂಡ ಹಾಗೆಯೇ ಮಹಾರಾಣಿಗೆ ತಿಳಿಯಪಡಿಸಿಕೊಂಡರು. ಬಳಿಕ ಮಾಲತೀ ಕುಮುದಿನಿಯರ ಶವಗಳಿಗೆ ಯಥೋಚಿತವಾಗಿ ಸತ್ಕಾರವು ನಡೆಯಿ ಸಲ್ಪಟ್ಟಿತು.

ಒಂದು ಕಡೆ ಈ ಕೆಲಸವು ನಡೆಯುತ್ತಿರುವಲ್ಲಿ, ಮತ್ತೊಂದು ಕಡೆ ದುರ್ಗರಕ್ಷಕರು ಲಾವಣ್ಯಸಿಂಹನನ್ನು ಎಲ್ಲೆಲ್ಲಿಯೂ ಹುಡುಕಿ ನೋಡಿದರು. ಲಾವಣ್ಯನು ಎಲ್ಲಿಯೂ ಸಿಕ್ಕಲಿಲ್ಲ. ಮಗುವು ಸತ್ತುಹೋಗಿದ್ದಿದ್ದರೆ, ಅದರ ಮೃತದೇಹವಾದರೂ ಸಿಕ್ಕಬಹುದಾಗಿದ್ದಿತು. ಅದಕ್ಕೂ ಮಾರ್ಗವಾಗಲಿಲ್ಲ.

ಎರಡನೆಯ ಪ್ರಹರಿಯು ಜುಮೋಲಿಯನ ಕೈಯಿಂದ ಪಾರಾಗಿ, ಅದೇ ದಿನವೆ ಚಿತ್ತೂರು ದುರ್ಗವನ್ನು ಬಿಟ್ಟು ರಾಜಧಾನಿಗೆ ಬಂದು, ಗೋಪ್ಯವಾಗಿ ಮಹಾರಾಣಿಯನ್ನು ಕಂಡುಕೊಂಡು—ಮಹಾತಾಯೆ! ಕಾರ್ಯವು ನೆರವೇರಿ ಹೋಗಿರುವುದು. ಕುಮುದಿನಿಯೂ ಮಾಲತಿಯೂ ಇಹಲೋಕದಿಂದ ಪಾರಾಗಿರುವರು. ನಾನು ಈ ಕೈಯಿಂದಲೇ ರಾಜ ಪುತ್ರನ ಹೃದಯದಲ್ಲಿ ಚೂರಿಯನ್ನು ನಟ್ಟಿರುವೆನು. ತಾಯೆ! ಈ

ಅಥಮನಿಗೆ ಸಲ್ಲಬೇಕಾದ ಪುರಸ್ಕಾರದ ದ್ರವ್ಯವನ್ನು ದಯೆಪಾಲಿಸೋಣ ವಾಗಲಿ, ಎಂದು ಬೆಸಗೊಂಡನು.

ಮಹಾರಾಣಿಯು ಅದೇ ದಿನವೇ ವಿಜಯಸಿಂಹನನ್ನು ಕೆಲಸದಿಂದ ಕಿತ್ತುಹಾಕಿ, ಆ ಪ್ರಹರಿಗೆ ಆತನ ನಗರಾಧ್ಯಕ್ಷ ಪದವಿಯನ್ನು ಕೊಟ್ಟು, ಒಂದು ಲಕ್ಷ ರೂಪಾಯಿಗಳನ್ನು ಬಹುಮಾನವಾಗಿ ಕೊಡುವಂತೆ ಕೋಶಾಧ್ಯಕ್ಷನಿಗೆ ಅಪ್ಪಣೆ ಮಾಡಿದಳು. ಈ ಅಯೋಗ್ಯ ಘಟನಾವಳಿಯನ್ನು ನೋಡಿ ಪುರನಿವಾಸಿಗಳೆಲ್ಲರೂ, 'ಇದೇನನ್ಯಾಯ ! ಕುಮುದಿನಿಗೆ ಮೃತ್ಯುವೂ, ರಾಜಕುಮಾರ ಲಾವಣ್ಯಸಿಂಹನ ಅಂತರ್ಧಾನವೂ, ಒಬ್ಬ ಸಾಮಾನ್ಯ ಸೇವಕನಿಗೆ ನಗರಾಧ್ಯಕ್ಷ ಪದವಿಯೂ, ಅಷ್ಟೇ ಅಲ್ಲದೆ ಅವನಿಗೆ ಒಂದು ಲಕ್ಷರೂಪಾಯಿಗಳ ಬಹುಮಾನವೂ ಏಕಕಾಲದಲ್ಲಿಯೇ ಉಂಟಾಗಿರುವುವು. ಇದರ ಅರ್ಥವಾದರೂ ಏನಿರಬಹುದು ?' ಎಂದು ಮನ ಬಂದಂತೆ ಮಾತನಾಡಿಕೊಳ್ಳಲಾರಂಭಿಸಿದರು. ಪುರಪ್ರಮುಖರಂತೂ ಅಸಹ್ಯಪಟ್ಟುಹೋದರು. ಪ್ರಜೆಗಳು ಬಾಯ ಮುಚ್ಚಿಕೊಂಡು ತಮ್ಮ ತಮ್ಮ ದುರ್ದೈವವನ್ನು ನಿಂದಿಸಿಕೊಂಡರು. ಸ್ಥಿತಿಗತಿಗಳು ಹೀಗಿರುವಲ್ಲಿ, ಅಧಿಕಾರಿಯೊಬ್ಬನು ಅತಿ ಪ್ರಯಾಸದಿಂದ ಮಹಾರಾಜಸಿಂಹನ ಬಳಿಗೆ ಬಂದು ಅಡ್ಡ ಬಿದ್ದು—ಮಹಾಸ್ವಾಮಿ ! ಲಕ್ಷ್ಮೀಪತಿಸಿಂಹನು ೧೦,೦೦೦ ಅಶ್ವಾರೋಹಿಗಳೊಡನೆ ಶತ್ರು ಶಿಬಿರದ ಕಡೆಗೆ ತೆರಳಿದನು, ಎಂದು ತಿಳಿಸಿದನು.

ಮತ್ತೊಬ್ಬನು ರಾಜನಿಗೆ ಬಗ್ಗಿ ನಮಸ್ಕರಿಸಿ—ಮಹಾ ಪ್ರಭೂ ! ಕುಮಾರ ವೀರೇಂದ್ರಸಿಂಹನೂ, ಶೈಲೇಂದ್ರಸಿಂಹನೂ ಸೆರೆಮನೆಯಿಂದ ತಪ್ಪಿಸಿಕೊಂಡು, ಒಬ್ಬೊಬ್ಬನೂ ೫೦೦೦ ಕಾಲಾಳುಗಳನ್ನು ಜತೆಯಲ್ಲಿ ಕರೆದುಕೊಂಡು, ಪಲಾಯನ ಮಾಡಿರುವನು. ಕಾರಾಧಿಕಾರಿಯು ಕೂಡ ತನ್ನ ಅಧಿಕಾರವನ್ನೂ ಲೆಕ್ಕಿಸದೆ ರಾಜಧಾನಿಯಿಂದ ಓಡಿಹೋಗಿರುವನು, ಎಂದು ಅರಿಕೆಮಾಡಿದನು.

ಮಹಾರಾಣನು ಮತ್ತೆ ಮತ್ತೆ ಸುರಾಪಾನಮಾಡಿ—ಇರುವವರು ಇರಲಿ ; ಹೋಗುವವರು ಹೋಗಲಿ. ಅದರಿಂದ ನಮಗಾಗುವುದೇನು ?

ನೃತ್ಯಗೀತ ವಾದ್ಯಗಳು ಮಟ್ಟಿಗೆ ಎಡೆಬಿಡದೆ ನಡೆಯುತ್ತಿರಲಿ, ಎಂದು ಅಪ್ಪಣೆ ಮಾಡಿದನು.

ಆಗ ಮತ್ತೊಬ್ಬ ಪರಿವಾರದವನು ಬಂದು—ಮಹಾ ಸ್ವಾಮಿಾ! ಲಲಿತಸಿಂಹನು ೫೦,೦೦೦ ಭಿಲ್ಲ ಸೈನ್ಯದೊಡನೆ ರಾಜಧಾನಿಯ ಸಮಿಾಪಕ್ಕೆ ಬರುತ್ತಿರುವನು, ಎಂದು ಹೆದರಿ ಹೆದರಿ ಅರಿಕೆಮಾಡಿಕೊಂಡನು.

ಮಹಾ—ಆರು?

ಪರಿ—ಪ್ರಭೂ! ಲಲಿತಸಿಂಹನು ರಾಜಧಾನಿಯನ್ನು ಮುತ್ತು ವುದಕ್ಕೆ ಸಿದ್ಧನಾಗಿ ಬಂದಿರುವನು.

ಮಹಾರಾಜನು ಇದನ್ನು ಕೇಳಿಯೂ ಕೇಳದವನಂತೆ ಮತ್ತೆ ಸುರಾಪಾನಮಾಡಿ—ಸಂಗೀತವು ನಡೆಯಲಿ, ಎಂದು ಹೇಳಿದನು.

ಪರಿವಾರದವನು ಖಿನ್ನನಾಗಿ—ಮಹಾ ಸ್ವಾಮಿಾ! ರಾಜಧಾನಿಗೆ ಅಪಾಯವು ಸಂಭವಿಸುವಂತಿದೆ. ಈಗ ಉದಾಸೀನತೆಗೆ ಕಾಲವಲ್ಲ, ಎಂದು ಧೈರ್ಯದಿಂದ ಮಾತನಾಡಿದನು.

ಮಹಾರಾಣನು ವಿರಕ್ತನಾಗಿ ಹುಬ್ಬುಗಂಟಿಕ್ಕಿ—ಅದೆಲ್ಲವನ್ನೂ ಮಹಾರಾಣಿಯೇ ನೋಡಿಕೊಳ್ಳುವಳು. ಸಂಗೀತವಾಗಲಿ, ಎಂದು ಬಿರು ನುಡಿಗಳನ್ನಾಡಲು, ಆತನು ದೂರವಾಗಿ ಸರಿದುಹೋದನು.

ಸಂಗೀತವು ನಡೆಯುವುದಕ್ಕೆ ಪ್ರಾರಂಭವಾಯಿತು. ಗಾಯಿಕೆ ಯರ ಕೋಕಿಲ ಕಂಠಸ್ವರವೂ, ನರ್ತಕಿಯರ, 'ಝುಣ್ ಝುಣ್ ಝುಣುಕ ಝುಣ್ ಝುಣ್' ಎಂಬ ಒಡವೆಗಳ ಝಣತ್ಕಾರವೂ, ಮೃದಂಗದ ತತ್ತ ಳಾಂಗುತಳಾಂಗು ತದಿಗಿಣತೋಂ ಎಂಬ ಧ್ವನಿಯೂ, ತಂಬುರಿಯ ಓಂಕಾರಧ್ವನಿಯೂ ಒಟ್ಟುಗೂಡಿ ಪ್ರಮದವನವನ್ನು ನಾದ ಬ್ರಹ್ಮಮಯ ವಾಗಿ ಮಾಡಿಬಿಟ್ಟುವು. ಇಷ್ಟಾದರೂ ಆತನ ಹೃದಯದಲ್ಲಿಯೂ ಸಂತೋಷವಿಲ್ಲ. ಮಹಾರಾಣನ ಭಯದಿಂದ ಗಾಯಿಕೆಯರು ಹಾಡು ತ್ತಿರುವರು, ನರ್ತಕಿಯರು ಕುಣಿಯುತ್ತಿರುವರು, ವಾದ್ಯಗಾರರು ಬಾರಿ ಸುತ್ತಿರುವರು. ಮಹಾರಾಣನ ಹೆದರಿಕೆಯಿಂದ ಈ ಕಾರ್ಯಗಳೆಲ್ಲವೂ

ನಡೆಯುತ್ತಿದ್ದರೂ, ಎಲ್ಲರ ಹೃದಯದಲ್ಲಿಯೂ, ಲಲಿತಸಿಂಹನು ಯುದ್ಧಕ್ಕೆ ಬರುತ್ತಿರುವನೆಂಬ ಹೆದರಿಕೆಯು ಆವರಿಸಿಕೊಂಡು, ಎಲ್ಲರನ್ನೂ ನಡುಗಿಸಿಬಿಟ್ಟಿತು.

ಮಾರವಾಡಿಗಳೆಲ್ಲರೂ, 'ಮಾರವಾಡದಲ್ಲಿ ಘೋರವಾದ ಯುದ್ಧವುಂಟಾಗಿ ನರರಕ್ತವು ಎಲ್ಲೆಲ್ಲಿಯೂ ಚೆಲ್ಲಾಡಿ ಹೋಗುವುದು; ತಾಯಿಯು ಸಂತಾನ ಹೀನೆಯಾಗುವಳು; ಮಕ್ಕಳು ಪಿತೃ ಹೀನರಾಗುವರು; ಸ್ತ್ರೀಯು ಪತಿಹೀನೆಯಾಗುವಳು; ಅಕ್ಕ ತಂಗಿಯರು ಅಣ್ಣ ತಮ್ಮಂದಿರಿಂದ ವಿಯೋಗವನ್ನು ಪಡೆವರು,' ಎಂದು ಮುಂತಾಗಿ ಮೊದಲೇ ಭಾವಿಸಿಕೊಂಡು ಸಂಕಟಪಡಲಾರಂಭಿಸಿದರು. ಆದರೆ ಮಹಾರಾಜಸಿಂಹನ ಮನದಲ್ಲಿ ಮಟ್ಟಿಗೆ ಈ ಭಾವನೆಗೆ ಸ್ಥಲವೇ ಇರಲಿಲ್ಲ. ಆತನಿಗೆ ಸುರಾಪಾನವೊಂದಿದ್ದರೆ ಸಾಕಾಗಿದ್ದಿತು.

ಪ್ರಮದ ವನದ ವ್ಯಾಪಾರವು ಹೀಗಿರುತ್ತಿರುವಲ್ಲಿ, ಮಹಾರಾಣಿಯು ತಟ್ಟನೆ ರಾಜನ ಬಳಿಗೆ ಬಂದು ನಿಂತಳು. ಎಲ್ಲರೂ ಭಯಚಕಿತರಾಗಿ ಸುಮ್ಮನಾಗಿಬಿಟ್ಟರು. ಇದನ್ನು ನೋಡಿ ಮಹಾರಾಜನು ರೇಗಿವವನಾಗಿ—ಸಂಗೀತವು ನಡೆಯಲಿ, ಎಂದು ಅಬ್ಬರಿಸಿದನು.

ಮಹಾರಾಣಿಯು ತನ್ನ ಕಣ್ಣ ಸನ್ನೆಯಿಂದ ಎಲ್ಲರನ್ನೂ ದೂರ ಸರಿದು ಹೋಗುವಂತೆ ಸೂಚಿಸಿದ ಕೂಡಲೆ, ಎಲ್ಲರೂ ಕೆಟ್ಟೆನೋ ಬದುಕಿದೆನೋ ಎಂದು ಓಡಿಯೇ ಹೋದರು. ಬಳಿಕ ಮಹಾರಾಜನು ಕಣ್ಣಬಿಟ್ಟು ನೋಡಿ—ಆರು, ಕಮಲಿನಿಯೇ? ಎಂದನು.

ಕಮಲಿನಿ—ಅಹುದು, ನಾನೇ ಕಮಲಿನಿ. ಇನ್ನೂ ನಿನಗೆ ಚೈತನ್ಯವುಂಟಾಗಲಿಲ್ಲ.

ಮಹಾ—ಏನ ಹೇಳಿದೆ? ನನಗೆ ಚೈತನ್ಯವುಂಟಾಗಲಿಲ್ಲವೇ? ಸುರಾಪಾನದಿಂದ ಚೈತನ್ಯ ಬರುವುದಿಲ್ಲವೆಂದನೇನು?

ಕಮಲಿನಿ—ವೃದ್ಧ ಮಹಾರಾಜನ ರಕ್ತವು ಮದ್ಯಸೇವನೆಯಿಂದ ತೊಡೆದು ಹೋಗುವುದೇನು?

ಮಹಾ—ಸುಮ್ಮನಿರು ಸುಮ್ಮನಿರು.

ಕಮಲಿನಿ—ಅದೇತಕೆ ? ಮದ್ಯವನ್ನು ಇನ್ನೂ ಸೇವಿಸು ಸೇವಿಸು. ನೀನು ಮದ್ಯಸೇವನೆಗಾಗಿಯೇ ತಂದೆಯನ್ನು ಕೊಂದಂತಿದೆ.

ಮಹಾ—ಸುಮ್ಮನಿರು ಸುಮ್ಮನಿರು.

ಕಮಲಿನಿ—ಸುಮ್ಮನಿರುವುದೇಕೆ ?

ಮಹಾ—ಕಮಲಿನಿ ! ನನ್ನನ್ನು ಕ್ಷಮಿಸು. ಆರಾದರೂ ಕೇಳಿದರೆ ಪ್ರಮಾದವಾದೀತು.

ಕಮಲಿನಿ—ಆರಾದರೂ ಕೇಳಿದರೆ ಕೇಳಲಿ ; ಇದರಿಂದ ನಿನಗಾಗುವ ಲಾಭನಷ್ಟಗಳೇನು ? ನಿನಗೆ ಹೆಚ್ಚಾದ ಭಯವುಂಟಾಗುವುದಾದರೆ, ಹೆಚ್ಚಾಗಿ ಮದ್ಯವನ್ನು ಸೇವಿಸಿದರಾಯಿತು. ಪಾತ್ರೆಯ ತುಂಬಾ ಮದ್ಯವಿರುವಾಗ ನಿನಗೆ ಭಯವೆಂದರೇನು ?

ಮಹಾ—ನಾನು ಹುಚ್ಚನಂತಾಗಿಬಿಡುವೆ.

ಕಮಲಿನಿ—ನೀನು ಈಗಾಗಲೇ ಪಶುವಾಗಿ ಬಿಟ್ಟಿರುವೆ.

ಮಹಾ—ಕಮಲಿನಿ ! ನೀನೇ ಹೀಗೆ ಮಾತನಾಡುವೆಯಾ ? ಹಾಗಾದರೆ ಇನ್ನು ಮೇಲೆ ನಾನು ಮದ್ಯವನ್ನು ಸೇವಿಸುವುದೇ ಇಲ್ಲ.

ಕಮಲಿನಿ—ಇದು ಸತ್ಯವೇ ? ನೀನು ಇಷ್ಟು ವೀರನಾಗಿರುವೆ ಎಂಬುದನ್ನು ನಾನು ಎಂದೂ ನೋಡಿಲ್ಲ.

ಮಹಾ—ನೀನು ರಾಕ್ಷಸಿ.

ಕಮಲಿನಿ—ನಾನು ತಂದೆಯನ್ನು ಕೊಂದು ಮದ್ಯವನ್ನು ಸೇವಿಸುತ್ತಾ ದಿನಗಳನ್ನು ಕಳೆಯುತ್ತಿಲ್ಲ.

ಮಹಾ—ಸುಮ್ಮನಿರು ಸುಮ್ಮನಿರು. ಏನು ! ನಿನ್ನ ಹೃದಯದಲ್ಲಿ ಕೊಂಚವಾದರೂ ದಯಾ ಸಂಚಾರವೆಂಬುದೇ ಇಲ್ಲವಲ್ಲಾ !

ಕಮಲಿನಿ—ದಯೆಗೆ ಕಾಲಾಕಾಲವುಂಟು.

ಮಹಾ—ಹಾ! ನನ್ನ ಹೃದಯವು ತತ್ತರಗುಟ್ಟುತ್ತಿರುವುದು. ಪ್ರಾಣವು ತುಟುಗುಟ್ಟುತ್ತಿರುವುದು. ಶರೀರವೆಲ್ಲವೂ ಬೆಂಕಿಯಂತೆ ಸುಡುತ್ತಿರುವುದು. ಕೊಡು ಕೊಡು, ಕುಡಿಯುವುದಕ್ಕೆ ಮದ್ಯವನ್ನು ಕೊಡು. ಮದ್ಯವನ್ನಾದರೂ ಕುಡಿದು ಸಾಯುವೆನು.

ಕಮಲಿನಿ—ಈಗ ನೀನು ಸತ್ತಿಲ್ಲವೆಂದು ಹೇಳುವವರಾರು? ಸತ್ತವನು ಮತ್ತೆ ಸಾಯುವುದೆಂದರೇನು?

ಮಹಾ—ನಾನೇನ ಮಾಡಲಿ, ಕಮಲಿನಿ? ನನ್ನನ್ನು ಹೀಗೇಕೆ ವ್ಯರ್ಥವಾಗಿ ಗೋಳಗುಟ್ಟಿಸುವೆ?

ಕಮಲಿನಿ—ಮದ್ಯಸೇವನೆಯನ್ನು ಸಂಪೂರ್ಣವಾಗಿ ಬಿಟ್ಟು ಬಿಡು; ಬಳಿಕ ಇದರ ಕಾರಣವನ್ನು ತಿಳಿಸುವೆನು.

ಮಹಾ—ಈಗ ನಾನು ಮದಮತ್ತನಾಗಿಲ್ಲ.

ಕಮಲಿನಿ—ಇನ್ನೂ ನಿನ್ನ ಮದವು ಚೆನ್ನಾಗಿಳಿದಿಲ್ಲ. ಕುಮುದಿನಿಯು ಮಗುವು ಇಲ್ಲವೆಂಬುದು ನಿನಗೂ ಗೊತ್ತಾಗಿರಬಹುದು.

ಈ ಮಾತನ್ನು ಕೇಳಿ ಮಹಾರಾಜಸಿಂಹನು ಚಮತ್ಕೃತನಾಗಿ ಎದ್ದು ನಿಂತನು. ಅವನ ಮದವು ತಟ್ಟನೆ ಇಳಿದು ಹೋಯಿತು. ಕೂಡಲೆಯೇ ಅವನ ಸರ್ವಾಂಗವೂ ನಡುಗುವುದಕ್ಕಿಟ್ಟಿತು. ಇದನ್ನು ನೋಡಿ ಕಮಲಿನಿಯು ಹಾಲಾಹಲವನ್ನು ಬೀರುವಳೋ ಎಂಬಂತಿರುವ ಮಂದಹಾಸವನ್ನು ಬೀರಿ—ಮದವು ಇಳಿಯಿತಲ್ಲವೇ? ಇನ್ನೂ ಕೊಂಚವೇನಾದರು ಇರುವುದಾದರೆ, ಅದನ್ನೂ ಇಳಿಸಿಬಿಡುವೆನು, ಎಂದ ಮಾತನ್ನು ಕೇಳಿ, ಮಹಾರಾಜಸಿಂಹನು ಕಾತರ ಸ್ವರದಿಂದ—ಕಮಲಿನಿ! ನೀನು ನನ್ನ ಮೇಲೆ ಕೋಪಮಾಡುವುದಾದರೆ, ಮಾಡು; ನನ್ನನ್ನು ದಂಡಿಸಬೇಕೆಂದು ನಿನಗೆ ಇಚ್ಛೆಯಿರುವುದಾದರೆ, ದಂಡಿಸಿಬಿಡು; ಆದರೆ ನಿನ್ನ ಮರ್ಮವಿದಾರಕವಾದ ಮಾತನ್ನಾಗಲಿ, ವಿಷಮಿಶ್ರವಾದ ನಗೆಯನ್ನಾಗಲಿ ನಾನು ಸಹಿಸೆನು. ನನ್ನನ್ನು ಶೂಲಕ್ಕಾದರೂ ಏರಿಸು, ನನ್ನನ್ನು

ನಾಯಿ ನರಿಗಳಿಗಾದರೂ ತಿನ್ನಿಸು, ನನ್ನನ್ನು ಶ್ಮಶಾನಕ್ಕಾದರೂ ಕೊಂಡೊಯ್ದು ಸುಟ್ಟು ಬೂದಿಮಾಡಿ ಬಿಡು. ನಾನು ಅವೆಲ್ಲವನ್ನೂ ಸಹಿಸುವೆನು. ನಿನ್ನ ಅಪ್ರೀತಿಯನ್ನು ಮಟ್ಟಿಗೆ ಎಂದೆಂದಿಗೂ ಸಹಿಸೆನು, ಎಂದು ವಿನಯದಿಂದ ಬೇಡಿಕೊಂಡನು.

ಕಮಲಿನಿ—ಮದವೆಲ್ಲವೂ ಇಳಿಯಿತೆಂದು ಈಗ ಗೊತ್ತಾಯಿತು. ಇನ್ನು ಮೇಲೆ ಕರ್ತವ್ಯಶೇಷವನ್ನಾದರೂ ಆಲೋಚಿಸುವ.

ಮಹಾ—ಇನ್ನೇನು, ಕರ್ತವ್ಯಶೇಷವು? ಕರ್ತವ್ಯವೆಂದರೆ ನನ್ನ ಹೃದಯವು ಪುಡಿಪುಡಿಯಾಗುವುದು.

ಕಮಲಿನಿ—ಭಯವೇನೂ ಇಲ್ಲ. ಅಜೇಯನಾಗಿಯೂ, ಮಹಾಪರಾಕ್ರಮಶಾಲಿಯಾಗಿಯೂ, ಸರ್ವಯುದ್ಧವಿಜಯಿಯಾಗಿಯೂ, ಮಾರವಾಡದ ಮಹಾವೀರನಾಗಿಯೂ, ಮಹಾರಾಣನಾಗಿಯೂ ಇರುವ ಪ್ರಿಯತಮ, ಮಹಾರಾಜಸಿಂಹ! ಭಯವೇನೂ ಇಲ್ಲ. ನೀನು ಹೆದರಲು ಕಾರಣವೇನೂ ಇರಲಾರದು.

ಮಹಾ—ಇಷ್ಟಾದರೂ ನಿನ್ನ ದಯೆ ಯುಂಟಾಗಲಿಲ್ಲ.

ಕಮಲಿನಿ—ಮೊದಲು ಕೆಲಸವಾಗಲಿ.

ಮಹಾ—ಕೆಲಸವೆಂಥದೆಂಬುದನ್ನು ತಿಳಿಸು. ನಾನು ನಿನ್ನ ದಾಸಾನುದಾಸನಾಗಿ ಅದನ್ನು ನೆರವೇರಿಸಿ ಕೊಡುವೆನು.

ಕಮಲಿನಿ—ಪ್ರಭೂ! ಇಚ್ಛೆಯು ನೆರವೇರಿಸಿಯಾಯಿತು, ಮನದಣಿಯೆ ಮನ್ನಿಸ್ಯವೂ ಸ್ವೀಕರಿಸಿಯಾಯಿತು. ಇಷ್ಟಾದರೂ ನೀನು ಮಟ್ಟಿಗೆ ನನ್ನಲ್ಲಿ ಔದಾಸೀನ್ಯವನ್ನೇ ತೋರುತ್ತಿರುವೆ.

ಮಹಾ—ನಾನು ಮಾಡಬೇಕಾದುದೇನು, ಕಮಲಿನಿ?

ಕಮಲಿನಿ—ಲಲಿತಸಿಂಹನು ಭಿಲ್ಲರ ಸೈನ್ಯವನ್ನು ಕರೆದುಕೊಂಡು ನಮ್ಮ ರಾಜಧಾನಿಯನ್ನು ಮುತ್ತುವುದಕ್ಕೆ ಬಂದಿರುವನಂತೆ. ಭಿಲ್ಲರು ಮಾತ್ರವೇ ಆಗಿದ್ದಿದ್ದರೆ, ನನಗೆ ಭಯವೇನೂ ಆಗುತ್ತಿರಲಿಲ್ಲ.

ವಿಜಯಸಿಂಹನೂ, ಲಕ್ಷ್ಮೀಪತಿಸಿಂಹನೂ ಆತನಿಗೆ ಒತ್ತಾಸೆಯಾಗಿ ನಿಂತಿರುವರು. ಇನ್ನೂ ಅನೇಕರು ಲಲಿತನಿಗೆ ಸಾಹಾಯ್ಯವನ್ನು ಮಾಡಲು ಸಮಯವನ್ನು ನಿರೀಕ್ಷಿಸುತ್ತಿರುವರು. ಇನ್ನು ನಮಗೆ ಆರಲ್ಲಿಯೂ ವಿಶ್ವಾಸವೆಂಬುದೇ ಹೋಯಿತು. ಮಾರವಾಡದವರೆಲ್ಲರೂ ವಿಶ್ವಾಸ ಘಾತುಕರು.

ಮಹಾ—ಉಪಾಯವೇನು ? ನಮ್ಮ ಸೈನಿಕರು ಏನ ಹೇಳುವರು ?

ಕಮಲಿನಿ—ನನಗೆ ಅವರಲ್ಲಿಯೂ ವಿಶ್ವಾಸವಿಲ್ಲ.

ಮಹಾ—ಹಾಗಾದರೆ ಮುಂದೇನು ಗತಿ ?

ಕಮಲಿನಿ—ಗತಿಯೇನು ! ನೀನು ಹೋಗಿ ಲಲಿತನ ಕಾಲಿಗೆ ಬೀಳುವುದೊಂದೇ ಗತಿಯು.

ಮಹಾ—ಕಮಲಿನಿ ! ಮಹಾರಾಜಸಿಂಹನು ಇನ್ನೂ ಸಾಯ ಲಿಲ್ಲವೇಕೆ ?

ಕಮಲಿನಿ—ಮಹಾರಾಜಸಿಂಹನು ಬದುಕಿದುದು ಆವಾಗ ? ನಿಜವಾದ ಮಹಾರಾಜಸಿಂಹನು ಸತ್ತು ಎಷ್ಟೋ ದಿನಗಳಾದುವು.

ಮಹಾ—ನಾನು ಲಲಿತನ ಕಾಲಿಗೆ ಬೀಳಬೇಕೇ? ನಾನು ಯುದ್ಧ ವನ್ನೇ ಮಾಡುವೆನು. ಮಹಾರಾಜಸಿಂಹನ ಹಿಂದಣ ಪ್ರತಾಪವನ್ನಾದರೂ ಜನರು ಮತ್ತೆ ನೋಡಿ ಮೂಗಿನ ಮೇಲೆ ಬೆಟ್ಟನ್ನಿಟ್ಟುಕೊಳ್ಳಲಿ. ಆಗಿನ ಮಹಾರಾಜಸಿಂಹನು ಇನ್ನೂ ಸತ್ತಿಲ್ಲವೆಂಬುದನ್ನು ಎಲ್ಲರಿಗೂ ನಾನು ತಿಳಿಯಪಡಿಸಿಕೊಳ್ಳುವೆನು.

ಕಮಲಿನಿ—ಹಾಗಾದರೆ, ಮಹಾರಾಜಸಿಂಹ ! ನೀನು ಚಿರ ಕಾಲ ಬದುಕಿರು. ನಿನಗೆ ದೇವರು ಮಂಗಳವನ್ನುಂಟುಮಾಡಲಿ.

ಮಹಾ—ಪ್ರಿಯೆ ! ಈಗ ನಾವು ಏನ ಮಾಡಬೇಕು ?

ಕಮಲಿನಿ—ಆರು ಭಯಂಕರವಾದ ಕೆಲಸವನ್ನು ಮಾಡಿ ಸಿಂಹಾಸನವನ್ನು ಪಡೆದುಕೊಂಡರೋ, ಅವರು ಅದಕ್ಕಿಂತಲೂ ಹೆಚ್ಚಾಗಿ ಭಯಂಕರವಾದ ಕೆಲಸವನ್ನು ಮಾಡಿ ಸಿಂಹಾಸನವನ್ನು ರಕ್ಷಿಸಿಕೊಂಡು ಬರಬೇಕು. ಗೊತ್ತಾಯಿತೇ?

ಮಹಾ—ಗೊತ್ತಾಯಿತು.

ಕಮಲಿನಿ—ನಾಥ! ಇದೀಗೆ ಗಂಡಸಿನ ಮಾತು. ನೀನು ಈಗೆ ಅಸ್ತ್ರಧಾರಣವನ್ನು ಮಾಡು. ನಿನ್ನ ಶತ್ರುಗಳು ಇದನ್ನು ಕೇಳಿದ ಕೂಡಲೆ, ಬಿರುಗಾಳಿಯಲ್ಲಿ ಸಿಕ್ಕಿದ ತರಗೆಲೆಯಂತೆ ಭ್ರಾಂತರಾಗಿ ಹೋಗುವರು.

ಬಳಿಕ ಇಬ್ಬರೂ ಪ್ರಮದವನವನ್ನು ಕೊನೆಯ ಸಲ ತ್ಯಾಗ ಮಾಡಿ ಅರಮನೆಗೆ ಬಂದುಬಿಟ್ಟರು.

---

## ಐವತ್ತೇಳನೆಯ ವಿಲಾಸ

ವಿರಾಟ್ಸಭೆಯು ಕೂಡಬೇಕೆಂದು ಎಲ್ಲೆಲ್ಲಿಯೂ ಪ್ರಚಾರ ಪಡಿಸಲ್ಪಟ್ಟಿರುವುದು. ಇಂದು ಮಹಾರಾಜನು ಪ್ರಮದವನವನ್ನು ಬಿಟ್ಟು ತಾನಾಗಿಯೇ ಸಭೆಗೆ ಬರುವುದಾಗಿ ವರ್ತಮಾನ ವಿದ್ದುದರಿಂದ, ಪ್ರಜೆಗಳೆಲ್ಲರೂ ಸಭೆಗೆ ಬರಲಾರಂಭಿಸಿದರು.

ಮಹಾರಾಜಸಿಂಹನು ಸೇನಾಪತಿಯ ಉಡುಪನ್ನು ಧಾರಣಮಾಡಿಕೊಂಡು ಸಭೆಗೆ ಬಂದು ಸಿಂಹಾಸನದ ಮೇಲೆ ಕುಳಿತನು. ಆದರೆ ಹಿಂದಿನಂತೆ ಇಂದು ಜಯಧ್ವನಿಯು ಕೇಳಬರಲಿಲ್ಲ. ಕೆಲವರು ಮಟ್ಟಿಗೆ ಜಯಧ್ವನಿಯನ್ನು ಮಾಡಿದರು. ಅದರಲ್ಲಿ ಪ್ರಾಣವಿರಲಿಲ್ಲ, ತ್ರಾಣವಿರಲಿಲ್ಲ, ಉತ್ಸಾಹವು ಮೊದಲೇ ಇರಲಿಲ್ಲ. ಮಹಾರಾಜಸಿಂಹನು ಇದನ್ನು ಅರಿತುಕೊಂಡವನಾದರೂ, ತನ್ನ ಮನೋಭಾವವನ್ನು ಬಲು ಮಟ್ಟಿಗೆ ಅಡಗಿಸಿಕೊಂಡವನಾಗಿ, ಎಲ್ಲರೊಡನೆಯೂ ಪ್ರೀತಿ ವಿಶ್ವಾಸಗಳಿಂದ ಮಾತನಾಡಿದನು.

ರಾಜಕಾರ್ಯವು ಪ್ರಾರಂಭವಾಯಿತು. ಮಹಾರಾಜಸಿಂಹನು ಮಾತನಾಡಿದನು :—

" ವೃದ್ಧನಾದ ಮಹಾರಾಣನ ಹತ್ಯಾಕಾರಿಯಾದ ಪಾಪಿ ಲಲಿತ ಸಿಂಹನು ರಾಜ್ಯದ್ರೋಹಿಯಾಗಿ ಯುದ್ಧಮಾಡುವುದಕ್ಕೆಂದು ಇತ್ತಕಡೆಗೆ ಬರುತ್ತಿರುವನು. ನಾವು ಕಾಲಹರಣಕ್ಕೆಡೆಗುಡದೆ, ಆ ದುಷ್ಟನಿಗೆ ಸರಿಯಾಗಿ ಬುದ್ಧಿಗಲಿಸಬೇಕು. ಆರಾರು ಆ ನೀಚನಿಗೆ ಒತ್ತಾಸೆಯಾಗಿ ನಿಂದಿರುವರೋ, ಅವರೆಲ್ಲರಿಗೂ ತಕ್ಕ ದಂಡನೆಯೇ ಆಗಬೇಕು. ಅಸಭ್ಯರಾದ ಭಿಲ್ಲರ ಹಾವಳಿಯನ್ನು ಅಡಗಿಸಬೇಕು. ಶತ್ರುವು ರಾಜಧಾನಿಯನ್ನು ಆಕ್ರಮಣಮಾಡುವನೆಂದು ಆರೂ ಹೆದರಬೇಕಾದುದಿಲ್ಲ. ನಾನು ಬೆಳಗಾದ ಕೂಡಲೆ, ಶತ್ರುವನ್ನು ನಿಗ್ರಹಮಾಡಿ ಬರುವೆನು. ಈ ಸಮಯದಲ್ಲಿ ನನ್ನದೊಂದು ಪ್ರಾರ್ಥನೆಯೇನೆಂದರೆ :—" ಈ ಸಮಯದಲ್ಲಿ ಸ್ವದೇಶ ಹಿತೈಷಿಗಳಾದವರೆಲ್ಲರೂ ಮಾರವಾಡದ ಗೌರವದ ಕಡೆಗೆ ದೃಷ್ಟಿಯಿಟ್ಟು ನಮಗೆ ಸಹಾಯರಾಗಿ ನಿಲ್ಲಬೇಕೆಂದು ನಾವು ಪ್ರಾರ್ಥಿಸಿಕೊಳ್ಳುವವರಾಗಿರುವೆವು."

ಈ ಸಲವೂ ಆರೂ ಜಯಧ್ವನಿಯನ್ನು ಮಾಡಲಿಲ್ಲ. ಇದನ್ನು ಕಂಡು ಮಹಾರಾಜನ ಮುಖವು ವಿಷಾದದಿಂದ ಮಲಿನವಾಗಿ ಹೋಯಿತು. ಅಂತಸ್ತಾಪದಿಂದ ಆತನ ಅಂಗಾಂಗಗಳೆಲ್ಲವೂ ಅದುರಿದುವು. ಹೀಗಾದರೂ ರಾಜನು ತನ್ನ ಅಂತರಂಗವನ್ನು ಬಹಿರಂಗ ಮಾಡದೆ ಮಾತನಾಡಿದನು :—" ಇನ್ನು ನೀವುಗಳೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ತೆರಳಬಹುದು. ನಾವು ಇನ್ನು ಸೈನ್ಯವನ್ನು ಪರಾಮರ್ಶಿಸುವುದಕ್ಕಾಗಿ ತೆರಳುವೆವು."

ಬಂದಿದ್ದವರೆಲ್ಲರೂ ಸಭೆಯಿಂದ ಹೊರಟು ಹೋದರು, ರಾಜನೂ ಸೈನ್ಯದ ಕಡೆಗೆ ತೆರಳಿದನು. ಅಲ್ಲಿಯೂ ಜಯಧ್ವನಿಯುಂಟಾಗಲಿಲ್ಲ. ಆರು ಆರನ್ನು ದೇವತೆಯೆಂದು ತಿಳಿದಿದ್ದರೋ, ಆರು ಆರ ಹೆಸರನ್ನು ಕೇಳಿದ ಕೂಡಲೆ, ' ಜಯ ಮಹಾರಾಜಸಿಂಹಕೀ ಜಯ ' ಎಂದು ಜಯಧ್ವನಿಯನ್ನು ಮಾಡುತ್ತಿದ್ದರೋ, ಆ ಸೈನ್ಯದವರೇ ಇಂದು ಮೌನದಿಂದ

ಇದ್ದು ಬಿಟ್ಟರು. ಇದನ್ನು ಕಂಡುಕೊಂಡ ಮಹಾರಾಜಸಿಂಹನ ಮನೋಭಾವವೆಂಥದೆಂಬುದನ್ನು ವಾಚಕರೇ ಊಹಿಸಿಕೊಳ್ಳತಕ್ಕುದು. ಬಳಿಕ ಆತನು ಸೈನ್ಯದವರನ್ನು ಕುರಿತು—ನೀವು ಸೇನಾಪತಿಯಾರೆಂಬುದನ್ನು ಇನ್ನೂ ಅರಿತಿಲ್ಲವೆಂದು ತೋರಿಬರುತ್ತಿರುವುದು. ಇಂದು ನಿಮಗೆ ಹೀಗಾಗಲು ಕಾರಣವೇನೋ ಗೊತ್ತಿಲ್ಲ, ಎಂದು ನುಡಿದನು.

ಇದನ್ನು ಕೇಳಿದ ವೃದ್ಧಸೈನಿಕನೊಬ್ಬನು ಮುಂದೆ ಬಂದು—ಮಹಾಪ್ರಭೂ! ಇದರಲ್ಲಿ ನಮ್ಮ ದೋಷವೇನೂ ಇರಲಾರದು. ಆರು ತಿಂಗಳಿಂದಲೂ ನಮಗೆ ಸಂಬಳವೆಂಬುದೇ ಸಂದಿಲ್ಲ. ಮೊದಮೊದಲು ನಮಗೆ ಮಾನವಿತ್ತು, ಮರ್ಯಾದೆಯಿತ್ತು. ಈಗಳಾದರೋ ನಮ್ಮನ್ನು ಕೇಳುವವರೇ ಇಲ್ಲ, ಎಂದನು.

ಮಹಾರಾಜನು ಏನ ಮಾಡಬೇಕೆಂಬುದನ್ನೇ ಅರಿಯದವನಾಗಿ ಒಂದು ಕ್ಷಣಕಾಲ ಸುಮ್ಮನಿದ್ದು—ಸೈನಿಕರಿರಾ! ಯುದ್ಧವು ಆಸನ್ನವಾಗಿರುವುದು. ನಿಮ್ಮಗಳಿಂದಲೇ ಮಾರವಾಡದ ಗೌರವವು ರಕ್ಷಿಸಲ್ಪಡಬೇಕಾಗಿರುವುದು. ಈ ಸಮಯದಲ್ಲಿ ನೀವುಗಳೆಲ್ಲರೂ ಉದಾಸೀನರಾಗಿರುವುದಾದರೆ, ಮಾರವಾಡದ ಸಂಸ್ಥಾನವು ಅಧಃಪಾತಾಳದಲ್ಲಿ ಮುಳುಗಿ ಹೋಗಿಬಿಡುವುದು. ಬಳಿಕ ಮಹಾರಾಜಸಿಂಹನ ಆಸೆಯಂತೂ ನಿರಾಶೆಯೇ ಆಗಿ ಬಿಡುವುದು. ನಿಮ್ಮಲ್ಲಿ ಆವ ಕುಂದುಕೊರತೆಗಳಿದ್ದರೂ, ನಾವು ಈಗಳೆಯೇ ಅವುಗಳೆಲ್ಲವನ್ನೂ ದೂರಮಾಡುವೆವು. ನಿಮ್ಮೆಲ್ಲರಿಗೂ ಆರು ತಿಂಗಳ ಸಂಬಳವು ಇಂದೇ ಕೊಡಲ್ಪಡುವುದು. ನಿಮಗೆ ನಮ್ಮಲ್ಲಿ ಅಪರಾಗವಿರುವುದಾದರೆ, ಈಗಳೆಯೇ ತಿಳಿಸಿರಿ. ನಾವು ಈ ಕಿರೀಟವನ್ನು ತೆಗೆದು ನಿಮ್ಮ ಕೈಯಲ್ಲಿ ಸಮರ್ಪಿಸಿಬಿಡುವೆವು. ಬಳಿಕ ನೀವು ಆರನ್ನಾದರೂ ರಾಜನನ್ನಾಗಿ ಏರ್ಪಡಿಸಿಕೊಳ್ಳಬಹುದು. ಕೊನೆಯ ಪಕ್ಷದಲ್ಲಿ ಹತ್ಯಾಕಾರಿಯೂ, ರಾಜದ್ರೋಹಿಯೂ ಆಗಿರುವ ಲಲಿತಸಿಂಹನನ್ನಾದರೂ ರಾಜನನ್ನಾಗಿ ಮಾಡಬಹುದು. ಇದಕ್ಕೆ ನನ್ನ ಆಕ್ಷೇಪವೇನೂ ಇರುವುದಿಲ್ಲ, ಎಂದು ಸಮುತೆಯುಂಪ ಎಲ್ಲರ ಮನವೂ ಕರಗುವಂತೆ ಮಾತನಾಡಿದನು.

ಮಹಾರಾಜಸಿಂಹನು ಹೀಗೆ ಹೇಳಿ ತನ್ನ ತಲೆಯ ಮೇಲಿದ್ದ ಕಿರೀಟವನ್ನು ಕೆಳಗಿಳಿಸುವುದರಲ್ಲಿದ್ದನು. ಆ ಸಮಯಕ್ಕೆ ಸರಿಯಾಗಿ ಗಗನ ಮಂಡಲವು ಭೇದಿಸಿ ಹೋಗುವ ಹಾಗೆ ಸೈನಿಕರು ಜಯಕಾರವನ್ನು ಮಾಡಿದರು. ಅವರೆಲ್ಲರಿಗೂ ಬಹುಕಾಲದಿಂದಲೂ ಉಂಟಾಗಿದ್ದ ದುಃಖವೂ, ಕಷ್ಟವೂ, ನಷ್ಟವೂ, ಇವೆಲ್ಲವೂ ಮರತೇ ಹೋದುವು.

ಜಯಧ್ವನಿಯನ್ನು ಕೇಳಿದ ಕೂಡಲೆ ಮಹಾರಾಜನಿಗುಂಟಾದ ಆನಂದವನ್ನು ಹೇಳ ತೀರದು. ಪೂರ್ಣಾನಂದ ಪರಿಪೂರ್ಣನಾದ ಮಹಾರಾಜಸಿಂಹನು ಸೈನಿಕರನ್ನು ಕುರಿತು—ನಾವು ನಾಳೆಯೇ ಯುದ್ಧಕ್ಕೆ ತೆರಳುವವರಾಗಿರುವೆವು. ಈಗ ನೀವುಗಳೆಲ್ಲರೂ ಮನೆಗಳಿಗೆ ತೆರಳಿರಿ, ಎಂದು ಹೇಳಿದ ಮಾತನ್ನು ಕೇಳಿ, ಸೈನ್ಯವು ಮತ್ತೆ ಜಯಧ್ವನಿಯನ್ನು ಮಾಡಿ ತೆರಳಿದರು.

ಮಹಾರಾಜನು ಎಲ್ಲರನ್ನೂ ಕಳುಹಿದ ಬಳಿಕ ಅಂತಃಪುರಕ್ಕೆ ಬಂದನು. ಆಗ ಉತ್ಸುಕತೆಯಿಂದ ಗಂಡನನ್ನೇ ಇದಿರುನೋಡುತ್ತಿದ್ದ ಕಮಲಿನಿಯು ಗಂಡನನ್ನು ನೋಡಿ—ಪ್ರಿಯನೇ! ಏನಾದುದು? ಎಂದು ಪ್ರಶ್ನೆಮಾಡಿದಳು.

ಮಹಾ—ಅಷ್ಟಾಗಿ ತೃಪ್ತಿಕರವಾಗಿಲ್ಲ. ಕೋಶಾಗಾರದಲ್ಲಿ ಹಣವಿದೆಯೇ?

ಕಮಲಿನಿ—ಹಣವೆಲ್ಲಿಂದ ಬರಬೇಕು?

ಮಹಾ—ಹಾಗಾದರೆ ಆಶೆಯೆಲ್ಲವೂ ನಿರಾಶೆಯಾಯಿತು. ಸೈನಿಕರಿಗೆ ಹಣಕೊಟ್ಟಲ್ಲದೆ, ಆವ ಕೆಲಸವೂ ನೆರವೇರುವ ಹಾಗಿಲ್ಲ.

ಕಮಲಿನಿ—ಇದಕ್ಕಾಗಿ ಚಿಂತೆಯೇ? ನನ್ನಲ್ಲಿ ಬೇಕಾದ ಹಾಗೆ ಆಭರಣಗಳಿರುವುವು. ಅವನ್ನು ಮಾರಿ ಬಂದ ಹಣವನ್ನು ಕೊಟ್ಟರಾಯಿತು.

ಮಹಾ—ಹಾಗಾದರೆ ಸರಿ. ಹೇಗಾದರೂ ಮಾಡಿ ಸಿಂಹಾಸನವನ್ನು ಉಳಿಸಿಕೊಳ್ಳಲೇ ಬೇಕು.

ಕಮಲಿನಿ—ಹಾಗೆ ಮಾಡದೇ ಹೋಗುವುದಾದರೆ, ಉತ್ತಾರಣೆಯೇ ಇಲ್ಲ. ಈಗ ನಾವು ಉದಾಸೀನರಾಗಿದ್ದಲ್ಲಿ, ನಮ್ಮ ಶ್ರಮವೆಲ್ಲವೂ ನೀರಿನಲ್ಲಿ ಹೋಮಮಾಡಿದಂತೆಯೇ ಸರಿ.

ಮಹಾ—ಹಾಗೆಯೇ ಆಗಲಿ. ಈ ದಿನವೇ ನಿನ್ನ ಅಲಂಕಾರಗಳನ್ನು ವಿಕ್ರಯ ಮಾಡಿ ಹಣವನ್ನು ತರಿಸುವೆನು.

ಕಮಲಿನಿ—ನಾನೇ ಈ ಕೆಲಸವನ್ನು ಮಾಡುವೆನು. ಇಷ್ಟರಿಂದಲೇ ನಮ್ಮ ಉದ್ದೇಶವು ನೆರವೇರಲಾರದು.

ಮಹಾ—ನೆರವೇರಲಾರದು. ನಿನ್ನ ಇಷ್ಟದಂತೆಯೇ ನಾನು ನೆರವೇರಿಸುವೆನು. ನಾನು ಈಗಳೇ ದೇಹಳಿಗೆ ಪತ್ರವನ್ನು ಬರೆದು ಕಳುಹುವೆನು. ನಾನು ದೇಹಳೀಶ್ವರನಿಗೆ ಪಾದಾನತನಾಗಿ ಸಾಹಾಯ್ಯವನ್ನು ಬಯಸುವುದಾದರೆ, ಬಾದಷಹನು ಸೈನ್ಯವನ್ನು ತಪ್ಪದೆಯೇ ಕಳುಹುವನು.

ಕಮಲಿನಿ—ಕಷ್ಟಕಾಲಗಳಲ್ಲಿ ಹಾಗೆ ಮಾಡದೇ ಹೋದರೆ, ಕೆಲಸವಾಗುವುದು ಹೇಗೆ?

ಮಹಾ—ನಾನು ಬಾದಷಹನಿಗೆ ಅಡಿಯಾಳಾದರೆ, ನಮ್ಮ ಮಾರವಾಡದ ಗೌರವವೂ ಸ್ವಾತಂತ್ರ್ಯವೂ ಹಾಳಾಗಿ ಹೋಗುವುದಿಲ್ಲವೇ?

ಕಮಲಿನಿ—ಇದರಿಂದ ನನಗೂ ನಿನಗೂ ಏನು? ಅಷ್ಟಾದರೂ ನಮ್ಮ ಪದವಿಗೆ ಚ್ಯುತಿಯೇನೂ ಬರುವುದಿಲ್ಲವಷ್ಟೇ!

ಮಹಾ—ಆ ಚಿಂತೆಗೆ ಕಾರಣವೇನೂ ಇರಲಾರದು. ಇನ್ನು ನಾವು ಸ್ವಾರ್ಥವನ್ನು ಹೇಗಾದರೂ ಮಾಡಿ ಸಾಧಿಸಲೇ ಬೇಕು. ಇದರಲ್ಲಿ ಪಾಪಪುಣ್ಯಗಳ ವಿಚಾರವೆಲ್ಲಿಯದು?

ಗಂಡ ಹೆಂಡಿರು ಹೀಗೆ ಮಾತನಾಡಿಕೊಂಡ ಬಳಿಕ, ಮಾರವಾಡದ ಯುದ್ಧಕ್ಕೆ ಸನ್ನಾಹವು ನಡೆಯಲಾರಂಭಿಸಿತು. ಲಲಿತಸಿಂಹನೂ ಭಿಲ್ಲ ಸೈನ್ಯದೊಡನೆ ಕೊಂಚ ಕೊಂಚವಾಗಿ ರಾಜಧಾನಿಯ ಕಡೆಗೆ ಬರಲಾರಂಭಿಸಿದನು.

---

## ಐವತ್ತೆಂಟನೆಯ ವಿಲಾಸ

ಮಾರವಾಡದ ದಕ್ಷಿಣ ದಿಕ್ಕಿನಲ್ಲಿ ಭಿಲ್ಲ ಸೈನ್ಯದವರು ಠಾಣ್ಯವನ್ನು ಹಾಕಿರುವರು. ಅವರು ಶತ್ರುವಿನ ಆಗಮನವನ್ನು ನಿರೀಕ್ಷಿಸಿಕೊಂಡು, ಮುಂದೆ ಸಂಭವಿಸಬಹುದಾದ ಘೋರ ಯುದ್ಧದ ಭಯಂಕರ ದೃಶ್ಯವನ್ನು ಅರಿಯದೆಯೇ ಆಟಪಾಟಗಳಲ್ಲಿ ಆನಂದದಿಂದ ಕಾಲವನ್ನು ಕಳೆಯಲಾರಂಭಿಸಿದರು. ಜುಮೇಲಿಯನೂ ಅವರೊಡನೆ ಸೇರಿಕೊಂಡು ಒಂದೊಂದು ವೇಳೆ ವೇಣುಗಾನ ಮಾಡುತ್ತಲೂ, ಒಂದೊಂದು ವೇಳೆ ವೀಣಾಗಾನ ಮಾಡುತ್ತಲೂ ಎಲ್ಲರನ್ನೂ ನಾದಾನಂದದಲ್ಲಿ ಪರವಶರನ್ನಾಗಿ ಮಾಡಿಬಿಡುತ್ತಿದ್ದನು.

ಭಿಲ್ಲರ ಸೈನ್ಯದಲ್ಲಿ ಎಲ್ಲೆಲ್ಲಿ ನೋಡಿದರೂ ಸಂತೋಷದ ಮೇಲೆ ಸಂತೋಷವು ಉಕ್ಕಿ ಹರಿಯುತ್ತಿರುವುದು. ಜುಮೇಲಿಯನ ಆನಂದಕ್ಕಂತೂ ಪಾರವೇ ಇರಲಿಲ್ಲ.

ಆದರೆ ಒಬ್ಬನು ಮಟ್ಟಿಗೆ ಸುಖದಲ್ಲಿ ದುಃಖಿಯು. ಜುಮೇಲಿಯನು ತೆರ ತೆರನಾಗಿ ಪ್ರಯತ್ನಪಟ್ಟರೂ, ಲಲಿತಸಿಂಹನು ಮಟ್ಟಿಗೆ ಸುಖಿಯಾಗಲಿಲ್ಲ. ಆವ ವೇಣುಗಾನದಿಂದ ಪಶುಪಕ್ಷಿಮೃಗಾದಿಗಳೆಲ್ಲವೂ ಮೈಮರೆತು ಹೋಗಿರುವುವೋ, ಆವ ವೀಣಾಧ್ವನಿಯಿಂದ ಪ್ರಕೃತಿಯೇ ನಿಸ್ಸ್ಪಂದವಾಗಿ ಹೋಗಿರುವುದೋ, ಆವ ಸಂಗೀತದ ಅಮೃತರಸದಿಂದ ಭೂಮಿಯೆಲ್ಲವೂ ಸಿಕ್ತವಾಗಿ ಹೋಗಿರುವುದೋ, ಅಂತಹ ವೇಣುಗಾನವನ್ನೂ, ಅಂತಹ ವೀಣಾಗಾನವನ್ನೂ, ಅಂತಹ ಸಂಗೀತವನ್ನೂ ಕೇಳಿ ಲಲಿತಸಿಂಹನ ಹೃದಯವು ಆನಂದದ ಕಡೆಗೆ ತಿರುಗಲೇ ಇಲ್ಲ. ಸಂಗೀತವನ್ನು ಕೇಳಿದ ಕೂಡಲೆ, ಅವನ ಮನವು ಭಯದಿಂದ ಕಂಪಿತವಾಗಲಾರಂಭಿಸಿತು. ಅದು ಕಾರಣ ಅತನು ಆವಾಗಲೂ ಏಕಾಕಿಯಾಗಿದ್ದುಕೊಂಡು ಕಾಲವನ್ನು ಕಳೆಯಲಾರಂಭಿಸಿದನು ; ಒಂದೊಂದು ವೇಳೆ ಅತ್ತೂ ಅತ್ತೂ ಕಣ್ಣೀರ ಬಿಡುವನು.

ತತ್ತ್ವವನ್ನು ವಿಚಾರಿಸಿ ನೋಡಲಾಗಿ, ಈ ಸಮಯದಲ್ಲಿ ಎಲ್ಲರೂ ಸಂತೋಷವಾಗಿರಬೇಕಾದುದೇ ಯುಕ್ತವು. ಅವರಲ್ಲಿಯೂ ಲಲಿತನು

ಸಂತೋಷದಿಂದ ಹಿಗ್ಗಲೇ ಬೇಕು. ಆತನಿಗೆ ಸುಖದ ದಿನಗಳು ಸಮೀಪಿಸಿಕೊಂಡು ಬರುತ್ತಿರುವುವು. ಆತನೇ ಮಾರವಾಡದ ಸಿಂಹಾಸನದ ಮೇಲೆ ಕುಳಿತುಕೊಳ್ಳುವುದಕ್ಕೆ ಉಪಯುಕ್ತವಾದ ಪಾತ್ರವಾಗಿರುವನು. ಆತನ ಸೈನ್ಯವಲ್ಲಿ ವಿಜಯಸಿಂಹನು ಸೇರಿಕೊಂಡಿರುವನು. ಆತನಿಗೆ ಪ್ರಿಯ ಬಂಧುವಾದ ವೀರೇಂದ್ರನೂ, ಶೈಲೇಂದ್ರನೂ ಒತ್ತಾಸೆಯಾಗಿ ಬಂದು ನಿಂದಿರುವರು. ಪುರಪ್ರಮುಖರಲ್ಲಿ ವೃದ್ಧನಾದ ಲಕ್ಷ್ಮೀಪತಿಸಿಂಹನೂ ಆತನಿಗೆ ಸಹಾಯನಾಗಿರುವನು. ಇವೆಲ್ಲದರಿಂದಲೂ ಸಂತೋಷವುಂಟಾಗುವ ಸಂಭವದಲ್ಲಿ, ಲಲಿತನು ಮಟ್ಟಿಗೆ ಸುಖಿಯಾಗಿರಲಿಲ್ಲ.

ಕುಮುದಿನಿಯು ಇನ್ನಿಲ್ಲ. ಜುಮೇಲಿಯನು ಆಕೆಯ ಮರಣವನ್ನು ತಿಳಿಸದೇ ಇದ್ದರೂ, ಲಲಿತನು ಅದನ್ನು ಆರಿಂದಲೋ ಹೇಗೋ ಅರಿತುಕೊಂಡನು. ಈ ಸುದ್ದಿಯು ವೀರೇಂದ್ರನಿಗೂ, ಶೈಲೇಂದ್ರನಿಗೂ, ವೃದ್ಧನಾದ ಲಕ್ಷ್ಮೀಪತಿಸಿಂಹನಿಗೂ ಗೊತ್ತಿದ್ದಿತು. ಮರಣವಾರ್ತೆಯು ಆವಾಗಲೂ ಗುಟ್ಟಾಗಿರಲೊಲ್ಲದು. ಅದು ಹೇಗೋ ಲಲಿತನ ಕಿವಿಗೂ ಬಿದ್ದಿದ್ದಿತು.

"ಕುಮುದಿನಿಯು ಈ ಲೋಕದಿಂದ ಪಾರಾದಳು. ಅಯ್ಯೋ ಪಾಪ! ಆಕೆಯು ತನ್ನ ಮರಣಕಾಲದಲ್ಲಿ, ಬಾಯ ಮುಚ್ಚಿಕೊಂಡು ಎಷ್ಟು ಯಾತನೆಯನ್ನು ಅನುಭವಿಸಿದಳೋ! ಆಕೆಯು ಗಂಡನನ್ನು ಸ್ಮರಿಸಿ ಸ್ಮರಿಸಿ ಕೊರಗಿ ಕೊರಗಿ ಹೇಗೆ ಸತ್ತಳೋ! ಹಾ ಭಗವಂತ! ನೀನು ಒಳ್ಳೆಯವರನ್ನೇ ಹುಡುಕಿ ಹುಡುಕಿ ಅವರಿಗೆ ಸಲ್ಲದ ದುಃಖವನ್ನುಂಟುಮಾಡುವೆಯಲ್ಲಾ! ಇದರಿಂದ ನಿನಗೆ ಬಂದ ಭಾಗ್ಯವೇನು?" ಎಂದು ಹಂಬಲಿಸುತ್ತಾ ಲಲಿತನು ಸಂಕಟಪಡುತ್ತಿರುವನು. ಈ ಸಂಕಟದಿಂದ ಆತನ ಹೃದಯವು ಪುಡಿ ಪುಡಿಯಾಗಿ ಹೋಗುತ್ತಿರುವುದು. ಆದರೂ ಆತನು ಲೋಕಕ್ಕೆ ಹೆದರಿ ತನ್ನ ಸಂಕಟವನ್ನು ಹೊರಗೆ ತೋರದೆಯೇ ಸಂಕಟಪಡುತ್ತಿರುವನು. ಸಂಕಟಪಡುವುದರಿಂದ ಹೃದಯದ ದುಃಖವು ಕೊಂಚ ಮಟ್ಟಿಗೆ ಕಡಮೆಯಾಗುವ ಸಂಭವವುಂಟು. ಈ ಮರ್ಮವನ್ನು ಆತನು ಅರಿಯದವನಾಗಿದ್ದರೂ, ಸಂಕಟವನ್ನೇನೋ

ಅನುಭವಿಸುತ್ತಿರುವನು. ಪ್ರಬಲವಾದ ವ್ಯಸನವು ಜನರ ಆಡಿಕೆಗೆ ಹೆದರ ತಕ್ಕುದಲ್ಲ.

ಲಲಿತನು ಸಮಯಾಸಮಯವಿಲ್ಲದೆಯೇ ಅಳುವನು. ಅವಕಾಶ ವನ್ನಿತ್ತರೆ ಈತನು ಅಳುವನೆಂದು ತಿಳಿದು, ಜುಮೇಲಿಯನು ಸಾಧ್ಯವಾದ ಮಟ್ಟಿಗೂ ಆತನೊಡನೆಯೇ ಇರಲಾರಂಭಿಸಿದನು. ಜುಮೇಲಿಯನ ಪಕ್ಕದಲ್ಲಿ ಆತನಿಗೆ ಎಷ್ಟೋ ದುಃಖಗಳು ಶಾಂತವಾಗುವುವು, ಎಷ್ಟೋ ಸಂಕಟಗಳು ದೂರವಾಗುವುವು. ಲಲಿತನು ಇದನ್ನರಿಯದೆಯೇ ತಾನೊ ಬ್ಬನೇ ಇರಬೇಕೆಂದು ಬಯಸುತ್ತಿದ್ದನು.

ಜುಮೇಲಿಯನು ಆವಾಗಲೂ ಲಲಿತನೊಡನೆ ಇರಲು ಸಾಧ್ಯವಾಗ ಲಿಲ್ಲ. ಆತನು ಭಿಲ್ಲರೊಡನೆ ಸೇರಿಕೊಂಡು ಅವರಿಗೆ ಹೇಳಬೇಕಾದುದೆಲ್ಲ ವನ್ನೂ ಹೇಳುತ್ತಾ ಕಾಲವನ್ನು ಕಳೆಯಲಾರಂಭಿಸಿದನು.

ಲಲಿತನು ಶಿಬಿರದಿಂದ ದೂರವಾಗಿ ಹೋಗಿ ಒಂದೆಡೆಯಲ್ಲಿ ಕುಳಿತು ಕೊಂಡು ಅಳುತ್ತಿರುವನು. ಆತನ ಕಣ್ಣುಗಳಿಂದ ಗಂಗಾ ಯಮುನಾ ಪ್ರವಾಹಗಳು ಒಂದೆಡೆಯಲ್ಲಿ ಸಂಗಮವಾಗಿ ಹರಿದು ಹೋಗುತ್ತಿರುವುವು. ಈ ಸಮಯದಲ್ಲಿ ಆರೋ ಬಂದು ಆತನ ಬೆನ್ನ ಮೇಲೆ ಕೈಯಿಟ್ಟಂತಾ ಯಿತು. ಆತನೇ ಜುಮೇಲಿಯನಾಗಿದ್ದನು. ಜುಮೇಲಿಯನು ಬಂದು ನಿಂತು—ಇನ್ನೂ ಅಳುವು ನಿಲ್ಲಲಿಲ್ಲವೇ? ಎಂದು ಪ್ರಶ್ನೆಮಾಡಿದನು.

ಇದನ್ನು ಕೇಳಿದ ಕೂಡಲೆ, ಲಲಿತನು ಜುಮೇಲಿಯನನ್ನು ತಬ್ಬಿ ಕೊಂಡು ಆತನ ಹೆಗಲ ಮೇಲೆ ತನ್ನ ತಲೆಯನ್ನಿಟ್ಟು—ಸಖನೇ! ನಾನು ಇನ್ನು ತಡೆಯಲಾರೆನು. ಆರು ನನ್ನನ್ನು ತನ್ನ ಪ್ರಾಣಕ್ಕಿಂತಲೂ ಅಧಿಕ ವಾಗಿ ಪ್ರೀತಿಸುತ್ತಿದ್ದರೋ, ಅವರ ವಿಷಯವಾಗಿ ನನ್ನ ಮನವು ತುಟು ಗುಟ್ಟುತ್ತಿರುವುದು. ನಾನು ಈ ಸಂಕಟವನ್ನು ತಾಳಲಾರೆನು, ಎಂದು ಸಂಕಟದಿಂದ ನುಡಿದನು.

ಇದನ್ನು ಕೇಳಿ ಜುಮೇಲಿಯನು ಕಣ್ಣುಗಳಲ್ಲಿ ನೀರ ತಂದುಕೊಂ ಡನು. ಒಂದೆರಡು ತೊಟ್ಟು ಉಷ್ಣೋದಕವೂ ಜಾರಿ ಲಲಿತನ ಮೇಲೆ

ಬಿದ್ದಿತು. ಈ ಉಷ್ಣೋದಕವು ತನ್ನ ಮೇಲೆ ಬಿದ್ದೊಡನೆಯೇ, ಲಲಿತನು ಚಮತ್ಕೃತನಾಗಿ ತಲೆಯೆತ್ತಿ ಜುಮೇಲಿಯನನ್ನು ನೋಡಿದನು. ಅಷ್ಟ ರೊಳಗಾಗಿ ಜುಮೇಲಿಯನು ತನ್ನ ಕಂಬನಿಯನ್ನು ತೊಡೆದುಕೊಂಡು ಬಿಟ್ಟದ್ದನಾದುದರಿಂದ, ಲಲಿತನಿಗೆ ಏನೂ ಗೊತ್ತಾಗಲಿಲ್ಲ. ಲಲಿತನು ಬಲುಹೊತ್ತು ಜುಮೇಲಿಯನ ಮುಖವನ್ನೇ ನೋಡುತ್ತಿದ್ದು—ಜುಮೇ ಲಿಯಾ! ನೀನೂ ಆರನ್ನೋ ಪ್ರೀತಿಸುತ್ತಿರುವುದಾಗಿ ನನಗೆ ಹೇಗೋ ಗೊತ್ತಾಗುತ್ತಿರುವುದು, ಎಂದು ನುಡಿದನು.

---

## ಐವತ್ತೊಂಬತ್ತನೆಯ ವಿಲಾಸ

ಜುಮೇಲಿಯನು ಲಲಿತನ ಪ್ರಶ್ನೆಗೆ ಆವ ಉತ್ತರವನ್ನೂ ಕೊಡದೆ— ರಾಜಕುಮಾರ! ನೀನು ಹೀಗೆಲ್ಲಾ ಅಳುತ್ತಿರುವುದಾದರೆ, ನಾಳೆ ಯುದ್ಧ ಮಾಡುವವರಾರು? ಎಂದನು.

ಲಲಿತ—ನಿನ್ನಲ್ಲಿ ನನಗೆ ಮುಚ್ಚುಮರೆ ಯೇನಿರುವುದು? ನನಗೆ ಯುದ್ಧದಿಂದ ಏನೂ ಪ್ರಯೋಜನವಿರಲಾರದು. ನಾನು ಎಲ್ಲಿಗಾದರೂ ಓಡಿಹೋಗಬೇಕೆಂದು ಯತ್ನಮಾಡಿ ನೋಡಿದೆನು. ಆದರೆ ಜನರ ಬಾಯಿಗೆ ಹೆದರಿ ಸುಮ್ಮನಿರುವೆನು. ಸಿಂಹಾಸನವನ್ನು ಪಡೆವುದಕ್ಕಾಗಿ ನಾನು ಆವಾಗಲೂ ಇಷ್ಟಪಟ್ಟವನಲ್ಲ. ರಾಜನಾಗುವುದಕ್ಕೆ ನನಗೆ ಮೊದಲಿನಿಂದಲೂ ಇಷ್ಟವೆಂಬುದೇ ಇಲ್ಲ. ನಾನು ನನ್ನ ಕುಮುದಿನಿಗಾಗಿ ಇಷ್ಟೆಲ್ಲವನ್ನೂ ಮಾಡಬೇಕಾಯಿತು. ಮಿತ್ರನೇ! ನೀನು ನನಗಾಗಿ ಒಂದು ವರ್ಷದಿಂದಲೂ ಎಷ್ಟೋ ಶ್ರಮಪಟ್ಟಿರುವೆ! ನಾನು ಆರಿಗಾಗಿ ಪ್ರಾಣವನ್ನು ಧಾರಣಮಾಡಿದ್ದೆನೋ, ಆಕೆಯು ನನ್ನನ್ನು ಬಿಟ್ಟೇ ಹೊರಟುಹೋದಳೆಂದ ಮೇಲೆ ನನಗಾಗುವುದೇನು? ಇಂತಹ ನನಗೆ ನೀನು ಸಹಾಯನಾಗಿ ನಿಂತು ಅನುಭವಿಸುವ ಫಲವಾದರೂ ಏನು? ನನಗೆ ಯುದ್ಧವೇ ಬೇಕಿಲ್ಲ. ಕಾರಣವೇನೆಂದರೆ—ನನ್ನ ಪ್ರೇಮಾಸ್ಪದೆಯಾದ ಆ ಕುಮು ದಿನಿಯು ಪರಲೋಕ ಸಾಮಗ್ರಿಯಾಗಿಬಿಟ್ಟಿರುವಳು.

ಲಲಿತನು ಹೀಗೆ ಹೇಳಿ ಬಿಕ್ಕಿ ಬಿಕ್ಕಿ ಅತ್ತನು. ಇದನ್ನು ಕೇಳಿ ವ್ಯಸನ ಪಟ್ಟ ಜುಮೇಲಿಯನು ತನ್ನ ಮನೋಭಾವವನ್ನು ಅಡಗಿಸಿ ಕೊಂಡು—ಲಲಿತಸಿಂಹ! ಮಾರವಾಡದ ಗೌರವಕ್ಕಾಗಿಯೂ, ರಾಜನ ಅತ್ಯಾಚಾರದಿಂದ ಪೀಡಿತರಾದ ಪ್ರಜೆಗಳ ಯೋಗಕ್ಷೇಮಕ್ಕಾಗಿಯೂ, ನಿನ್ನ ಬಂಧುಬಾಂಧವರ ಹಿತಕ್ಕಾಗಿಯೂ, ಆತ್ಮಾತ್ಮೀಯರ ಸುಖಕ್ಕಾ ಗಿಯೂ ನೀನು ಯುದ್ಧಮಾಡಬೇಕಾದುದು ಕರ್ತವ್ಯವೇ ಆಗಿರುವುದು, ಎಂದು ತಿಳಿಸಿದನು.

ಲಲಿತ—ಸಖನೇ! ನನ್ನ ಹೆಂಡಿತಿಯು ಬದುಕಿದ್ದಿದ್ದರೆ, ನೀನು ಹೇಳುವುದೆಲ್ಲವೂ ಬೇಕಾಗಿರುತ್ತಿದ್ದಿತು. ಈಗ ನನಗೆ ಬೇಕಾ ಗಿರುವುದು ಕಾಷಾಯುವಸ್ತ್ರಧಾರಣವೇ ಹೊರತು ಬೇರೊಂದಲ್ಲ.

ಜುಮೇಲಿಯಾ—ಕುಮುದಿನಿಯಂತಹ ಭಾಗ್ಯವತಿಯು ಈ ಸಂಸಾರದಲ್ಲಿ ಆರುಂಟು? ಸತ್ತರೂ ಸರಿ, ಕುಮುದಿನಿಯಂತೆ ಒಳ್ಳೆಯ ಪತಿಯನ್ನೇ ಪಡೆಯಬೇಕು.

ಲಲಿತನು ಚಮತ್ಕೃತನಾಗಿ ಜುಮೇಲಿಯನನ್ನು ಕುರಿತು—ಪತಿ ಯನ್ನು ಪಡೆಯಬೇಕು! ಜುಮೇಲಿಯಾ! ನೀನೇನ ಮಾತನಾಡುವೆ? ಎಂದನು.

ಜುಮೇಲಿಯಾ—ಏನು! ನಾನು ಪತಿಯನ್ನು ಪಡೆಯಬೇ ಕೆಂದು ಹೇಳಲಿಲ್ಲವಲ್ಲಾ! ನಾನು ಹೇಳಿದುದು, "ಸತ್ತರೂ ಸರಿ, ಕುಮುದಿನಿಯಂತೆ ಒಳ್ಳೆಯ ಪತ್ನಿಯನ್ನೇ ಪಡೆಯಬೇಕು."

ಲಲಿತ—ಸಖನೇ! ನೀನು ಆಕೆಯನ್ನು ಎಂದೂ ನೋಡಿದವ ನಲ್ಲ. ಆಕೆಯ ಪ್ರೀತಿಯನ್ನು ವರ್ಣಿಸಲು ನನ್ನಿಂದ ಸಾಧ್ಯವಲ್ಲವು. ಆಕೆಯ ಪ್ರೀತಿಯು ದೇವಲೋಕದ ಪ್ರೀತಿಯೆಂದೇ ಹೇಳಬೇಕು.

ಜುಮೇಲಿಯಾ—ರಾಜಕುಮಾರ! ನಿನ್ನ ಪ್ರೀತಿಯೂ ಅಂಥದೇ ಆಗಿರುವುದು. ನಿನ್ನ ಪ್ರೀತಿಗೆ ತಾನೇ ಸಾಟಿಯುಂಟೇ?

ಲಲಿತ—ನಾನು ಆ ಪ್ರೀತಿಗಾಗಿಯೇ ಎಷ್ಟು ಕಷ್ಟದಿಂದ ಕಾಲವನ್ನು ಕಳೆಯುತ್ತಿರುವೆನೆಂಬುದು ನಿನಗೆ ಗೊತ್ತಾಗುವುದೇನು? ಮಿತ್ರನೇ! ನೀನು ನನಗಾಗಿ ತುಂಬಾ ಶ್ರಮಪಟ್ಟಿರುವೆ. ಇನ್ನಾವುದಕ್ಕಾಗಿ ಶ್ರಮಪಡಬೇಕು? ನನ್ನನ್ನು ಬಿಟ್ಟು ಬಿಡು. ನನಗೆ ಇನ್ನು ಆರಿಗಾಗಿ ರಾಜ್ಯವು, ಆರಿಗಾಗಿ ಇಷ್ಟು ರಕ್ತಪಾತವು? ನನಗಾಗಿ ರಕ್ತಪಾತವಾಗಬೇಕಾದುದಿಲ್ಲ. ನೀನು ಹಿಂದಿರುಗಿ ಹೋಗು. ಭಿಲ್ಲರೆಲ್ಲರನ್ನೂ ಹಿಂದಿರುಗಿಸಿಬಿಡು. ಹಾಗೆಯೇ ನನ್ನನ್ನೂ ಬಿಟ್ಟು ಬಿಡು. ನಾನು ಒಂದೊಂದು ಶ್ಮಶಾನದಲ್ಲಿಯೂ ಹೋಗಿ ಕುಮುದಿನಿಯನ್ನು ಸ್ಮರಿಸಿಕೊಂಡು ಜೀವನವನ್ನು ಕಳೆದುಕೊಳ್ಳುವೆನು.

ಜುಮೇಲಿಯಾ—ನೀನು ಆರಿಗಾಗಿಯೂ ಯುದ್ಧಮಾಡದೇ ಹೋದರೂ, ನಿನ್ನ ಮಗ ಲಾವಣ್ಯನಿಗಾಗಿಯಾದರೂ ಯುದ್ಧಮಾಡಬೇಡವೆ? ನೀನು ವಿರಕ್ತನಾಗುವುದಾದರೆ, ನಿನ್ನ ಮಗನ ಗತಿ ಯೇನಾಗಬೇಕು? ಇದನ್ನು ನೀನು ಮೊದಲು ಆಲೋಚಿಸತಕ್ಕುದಿದೆ.

ಲಲಿತ—ಲಾವಣ್ಯಸಿಂಹ! ಲಾವಣ್ಯನು ಎಲ್ಲಿರುವನು? ಅವನು ಸತ್ತುಹೋಗಿರಬೇಕು.

ಹೀಗೆ ಹೇಳಿ ಲಲಿತನು ಅಯ್ಯೋ ಎಂದು ಅತ್ತನು. ಇದನ್ನು ನೋಡಿ ಜುಮೇಲಿಯನು ತನ್ನ ವಸ್ತ್ರದಿಂದ ಲಲಿತನ ಕಣ್ಣೀರನ್ನು ತೊಡೆದು—ಲಲಿತಸಿಂಹ! ಲಾವಣ್ಯನು ಇನ್ನೂ ಬದುಕಿರುವನು, ಎಂದು ಹೇಳಿ, ನಡೆದುದೆಲ್ಲವನ್ನೂ ಒಂದೊಂದಾಗಿ ವಿವರಿಸಿ ತಿಳಿಸಿದನು. ಕಟ್ಟಕಡೆಗೆ ಪರಮಾನಂದಸ್ವಾಮಿಯು ಲಾವಣ್ಯನ ಲಾಲನ ಪಾಲನಗಳ ಭಾರವನ್ನು ವಹಿಸಿರುವನೆಂಬುದನ್ನೂ ತಿಳಿಸಿಬಿಟ್ಟನು. ಲಾವಣ್ಯನು ಬದುಕಿರುವ ಸುದ್ದಿಯನ್ನು ಕೇಳಿ, ಲಲಿತನು ಆನಂದದಿಂದ—ಮಿತ್ರನೇ! ಹಾಗಾದರೆ ಯುದ್ಧ ಮಾಡಲೇಬೇಕು. ಕುಮುದಿನಿಗಾಗಿ ಯುದ್ಧಮಾಡುವೆನು, ಲಾವಣ್ಯನಿಗಾಗಿ ಯುದ್ಧಮಾಡುವೆನು. ಈ ಕೆಲಸವನ್ನು ನಾನು ಮಾಡದೇ ಹೋದರೆ, ಆಕೆಯು ನನ್ನ ಮೇಲೆ ಕೋಪಗೊಳ್ಳುವಳು. ಸಖನೇ! ನಾನು ಖಂಡಿತವಾಗಿಯೂ ಯುದ್ಧಮಾಡುವೆನು, ಎಂದು ಆದರದಿಂದ ಮಾತನಾಡಿದನು.

ಜಮೇ—ಹಾಗಾದರೆ ಹೊರಡು. ಯುದ್ಧಮಾಡುವವನು ಹೀಗೆ ಏಕಾಕಿಯಾಗಿ ಕುಳಿತು ಮಗುವಿನಂತೆ ಅಳುವುದೆಂದರೇನು?

ಬಳಿಕ ಇಬ್ಬರೂ ಶಿಬಿರಾಭಿಮುಖವಾಗಿ ತೆರಳಿದರು. ದಾರಿಯಲ್ಲಿ ಕುಮಾರ ವೀರೇಂದ್ರನು ಕಾಣಿಸಿಕೊಂಡು—ಪ್ರಭೂ! ತಿಳಿದು ಬಂದಿರುವ ಅದೊಂದು ಸುದ್ದಿಯನ್ನು, ನಾನು ತಮಗೆ ಅರಿಕೆಮಾಡಿಕೊಳ್ಳಬೇಕೆಂದಿರುವೆನು. ದೇಹಳಿಯಲ್ಲಿ ಸೇನಾಪತಿಯಾದ ಮಹಮ್ಮದ ತೋಕೀಖಾನನೆಂಬುವನು ಮಾರವಾಡದ ರಾಜನಿಗೆ ಸಾಹಾಯ್ಯಮಾಡುವುದಕ್ಕಾಗಿ ೧೦,೦೦೦ ಕಾಲಾಳುಗಳನ್ನೂ ೫೦೦೦ ಅಶ್ವಾರೋಹಿಗಳನ್ನೂ ಕರೆದುಕೊಂಡು ರಾಜಧಾನಿಯ ಉತ್ತರ ದಿಕ್ಕಿನಲ್ಲಿ ಠಾಣ್ಯವನ್ನಿರಿಸಿರುವನೆಂದು ನನಗೆ ವರ್ತಮಾನ ಬಂದಿರುವುದು, ಎಂದು ತಿಳಿಸಿದನು. ಇದನ್ನು ಕೇಳಿ ಲಲಿತನು ಎದೆಯೊಡೆದವನಾಗಿ ಜುಮೇಲಿಯನನ್ನು ನೋಡಿ—ಮಿತ್ರನೇ! ಈ ಯುದ್ಧದಲ್ಲಿ ನಮಗೆ ಜಯವಾಗುವುದೇ? ಎಂದು ಪ್ರಶ್ನೆ ಮಾಡಿದನು.

ಜುಮೇಲಿಯನು ಆತನ ಮಾತಿಗೆ ಉತ್ತರಕೊಡುವಷ್ಟರೊಳಗಾಗಿ, ನಾಲ್ಕು ದಿಕ್ಕುಗಳಿಂದಲೂ ಜಯಧ್ವನಿಯೆದ್ದು ಪ್ರಕೃತಿಗರ್ಭನಿರ್ಭೇದವನ್ನುಂಟುಮಾಡಿತು. ಆಗ ಲಕ್ಷ್ಮೀಪತಿಸಿಂಹನು ಲಲಿತನ ಬಳಿಗೈತಂದು —ಮಹಾರಾಜ! ಶುಭ ಸಮಾಚಾರವನ್ನು ಕೇಳೋಣವಾಗಲಿ, ಪುರಪ್ರಮುಖರಾದ ಶ್ರೀಮಂತರೆನಿಸಿದ ಲಕ್ಷ್ಮಣಸಿಂಹ, ವಿಮಲಸಿಂಹ, ಭೀಮಸಿಂಹ, ಅಮರಸಿಂಹ ಮೊದಲಾದವರು, ಒಬ್ಬೊಬ್ಬರೂ ಹತ್ತು ಹತ್ತು ಸಾವಿರ ಸೈನ್ಯವನ್ನು ತೆಗೆದುಕೊಂಡು ನಮ್ಮಲ್ಲಿಗೆ ಬಂದು ಸೇರಿರುವರು, ಎಂದು ಸಂತೋಷದಿಂದ ತಿಳಿಸಿದನು.

ಇದನ್ನು ಕೇಳಿ ಎಲ್ಲರೂ ಪರಮಾನಂದಭರಿತರಾಗಿ ಠಾಣ್ಯದ ಕಡೆಗೆ ತೆರಳಿದರು. ಎಲ್ಲರೂ ಯುವರಾಜನನ್ನು ನೋಡಿದ ಕೂಡಲೆ ಅನುಭವಿಸಿದ ಆನಂದವನ್ನು ಕುರಿತು ವರ್ಣನೆ ಮಾಡಬೇಕಾದರೆ ನಮ್ಮ ಭಾಷಾಪ್ರಪಂಚದಲ್ಲಿ ಸರಿಯಾದ ಪದಗಳೇ ದೊರೆಯಲಾರವು. ರಾಜಪುತ್ರ ಸೈನ್ಯದವರೂ, ಭಿಲ್ಲ ಸೈನ್ಯದವರೂ ಸೇರಿಕೊಂಡು, ಬ್ರಹ್ಮಾಂಡಕಟಾಹವು ಒಡೆದುಹೋಗುವಂತೆ ಮಾಡಿದ ಜಯಧ್ವನಿಯು ಒಂದೆಡೆ

ಯಲ್ಲಿ ಅಡಗಿರಲಾರದೆ, ಕ್ರಮಕ್ರಮವಾಗಿ ರಾಜಧಾನಿಯ ಅರಮನೆಯ ಅಂತಃಪುರದಲ್ಲಿದ್ದ ಕಮಲಿನಿಯ ಕಿವಿಗೂ ಬಿದ್ದಿತು.

---

## ಅರವತ್ತೈನೆಯ ವಿಲಾಸ

ಸೂರ್ಯನು ಪಶ್ಚಿಮಾಚಲವನ್ನು ಸೇರುವುದಕ್ಕೆ ಇನ್ನೂ ಒಂದೆರಡು ಗಂಟೆಗಳ ಕಾಲವು ಬೇಕಾಗಿದ್ದಿತು. ಆ ಸಮಯದಲ್ಲಿ ಪರಮಾನಂದ ಸ್ವಾಮಿಯು ಸಮೀಪದ ಅದೊಂದು ಅರಣ್ಯದ ಮಧ್ಯದಲ್ಲಿ ಒಂದು ಮರವನ್ನು ಆಶ್ರಯಿಸಿಕೊಂಡು ಆರನ್ನೋ ನಿರೀಕ್ಷಿಸುತ್ತಾ ನಿಂತಿದ್ದನು. ಎಷ್ಟು ಹೊತ್ತಾದರೂ ಆರೂ ಬಾರದಿರುವುದನ್ನು ನೋಡಿ, ಸನ್ಯಾಸಿಯು ಬೇರೊಂದೆಡೆಗೆ ಹೊರಟು ಹೋಗಬೇಕೆಂದಿರುವಲ್ಲಿ, ಭಿಲ್ಲರ ಕಾತ್ಯಾಯನಿಯು ಆತನ ಮುಂದೆ ಮೂರ್ತಿಮತ್ತಾಗಿ ಬಂದ ಪ್ರಕೃತಿದೇವಿಯೋ ಎಂಬಂತೆ ಒಂದು ನಿಂತಳು. ಇಂದಿನ ಕಾತ್ಯಾಯನಿಯನ್ನು ನೋಡುವುದಕ್ಕೆ ಮಾನವನಿಗೆ ಎರಡು ಕಣ್ಣುಗಳು ಸಾಲವಾಗಿದ್ದುವು.

ಪರಮಾನಂದ ಸ್ವಾಮಿಯು ಕಾತ್ಯಾಯನಿಯನ್ನು ನೋಡಿ—ಮಗು! ನಾನು ನಿನಗಾಗಿ ಬಲು ಹೊತ್ತಿನಿಂದಲೂ ಕಾದಿರುವೆನು, ಎಂದನು.

ಕಾತ್ಯಾ—ತಂದೆಯೇ! ಹೊಸದಾದ ಕರ್ತವ್ಯವೇನೂ ಇಲ್ಲವಷ್ಟೇ? ಈ ವಿಷಯವು ತಮಗೆ ಗೊತ್ತೇ ಇರಬೇಕು.

ಸನ್ಯಾಸಿ—ನೀನು ಕರ್ತವ್ಯಕ್ಕೆ ಸಿಕ್ಕಿಬಿದ್ದಿರುವುದನ್ನು ಮರೆತೆಯಾ, ಹೇಗೆ?

ಕಾತ್ಯಾ—ಅದೇನು, ತಿಳಿಸೋಣವಾಗಲಿ?

ಸನ್ಯಾಸಿ—ನಾನು ಲಾವಣ್ಯನನ್ನು ಒಂದಿರುಗಿ ಕೊಟ್ಟಾಗ, ನೀನು ಸ್ವೀಕರಿಸಬೇಕಲ್ಲವೇ?

ಕಾತ್ಯಾ—ಈಗ ತಾವು ಆ ಮಗುವನ್ನು ತಂದಿರೋಣವಾಗಿದೆಯೇನು? ಈ ಸಮಯದಲ್ಲಿ ನಾನು ಆ ಮಗುವನ್ನು ಕಟ್ಟಿಕೊಂಡು ಮಾಡುವು

ದೇನು ? ಅದರ ತಂದೆಯೇ ಇಲ್ಲಿರುವಾಗ, ಆತನೇ ಅದರ ರಕ್ಷಣೆಯ ಭಾರವನ್ನು ವಹಿಸಲೇ ಬೇಕಾಗುವುದು.

ಸನ್ಯಾಸಿ—ನಾನು ಆ ಶಿಶುವನ್ನು ಇಲ್ಲಿಗೆ ತಂದಿಲ್ಲ. ನೀನು ಮಗುವಿನ ವಿಚಾರವಾಗಿ ಚಿಂತಿಸಬೇಕಾದುದಿಲ್ಲ.

ಕಾತ್ಯಾ—ಹಾಗಾದರೆ, ಮತ್ತೇನು ವಿಷಯವೋ ಅಪ್ಪಣೆಯಾಗಲಿ.

ಸನ್ಯಾಸಿ—ನಾನು ನಿನ್ನೊಡನೆ ಮಾತನಾಡುವುದಕ್ಕಾಗಿ ಬಂದಿರುವೆನು. ಈ ಯುದ್ಧವು ಆವ ರೀತಿಯಾಗಿ ಪರಿಣಮಿಸುವುದೋ ಗೊತ್ತಾಗಲೊಲ್ಲದು. ಈ ಯುದ್ಧದಲ್ಲಿ ಆರು ಸಾಯುವರೋ, ಆರು ಬದುಕುವರೋ ದೇವನೊಬ್ಬನೇ ಬಲ್ಲನು. ಯುದ್ಧದಲ್ಲಿ ಜಯಾಪಜಯಗಳನ್ನು ನಿರ್ಣಯಮಾಡಲು ಆರಿಂದಲೂ ಸಾಧ್ಯವಲ್ಲ.

ಕಾತ್ಯಾ—ನೀವು ಜ್ಯೋತಿಶ್ಯಾಸ್ತ್ರರೀತಿಯಾಗಿ ಗುಣಿಸಿ ನೋಡಲಿಲ್ಲವೇ ?

ಸನ್ಯಾಸಿ—ಗುಣಿಸಿ ನೋಡಿರುವೆನು. ಆದರೆ ಸಿದ್ಧಾಂತವು ನನ್ನ ತಲೆಗೆ ಹಿಡಿಯಲಿಲ್ಲ. ಆದುದರಿಂದ ಯುದ್ಧಕ್ಕೆ ಮೊದಲೇ ಕೆಲವು ಸಂಗತಿಗಳನ್ನು ನಿನಗೆ ತಿಳಿಸಿಬಿಡೋಣವೆಂದು ಬಂದೆನು.

ಕಾತ್ಯಾ—ತಿಳಿಸೋಣವಾಗಲಿ.

ಸನ್ಯಾಸಿ—ನನಗೂ ನಿನಗೂ ಮತ್ತೆ ದರ್ಶನವಾಗಲಿಕ್ಕಿಲ್ಲ. ನಾನು ಈಗಳೇ ಈ ದೇಶವನ್ನು ತ್ಯಾಗಮಾಡಿ ಹಿಮಾಲಯಕ್ಕೆ ಯೋಗಸಾಧನೆಗಾಗಿ ಹೊರಟುಹೋಗುವೆನು.

ಕಾತ್ಯಾ—ತಂದೆಯೇ ! ತಮ್ಮ ಧರ್ಮಮಾರ್ಗಕ್ಕೆ ನಾನು ಅಡ್ಡಿಯಾಗಿ ಬರಲಾರೆನು. ತಾವು ದೊಡ್ಡ ಮನಸ್ಸು ಮಾಡಿ ಮೂರು ನಾಲ್ಕು ದಿನಗಳ ವರೆಗಾದರೂ ತಡೆದರೆ, ನಾನೂ ತಮ್ಮೊಡನೆಯೇ ಬಂದುಬಿಡುವೆನು.

ಸನ್ಯಾಸಿ—ಏನು ! ಇಷ್ಟು ದಿನವಾದರೂ ಮಾರವಾಡದ ಮಹಾರಾಣಿಯಾಗುವುದಕ್ಕೆ ನಿನಗೆ ಇಷ್ಟವೇ ಬರಲಿಲ್ಲವೇ ?

ಕಾತ್ಯಾ—ತಂದೆಯೆ ! ನನ್ನ ಪ್ರಕೃತದ ಸ್ಥಿತಿಯಾದರೋ, ತಾವು ನನಗೆ ಬಾಲ್ಯದಲ್ಲಿ ಕೊಟ್ಟ ವಿದ್ಯಾಭ್ಯಾಸದ ಫಲವೇ ಆಗಿರುವುದು.

ಸನ್ಯಾಸಿ—ನೀನು ಲಲಿತನನ್ನು ಪ್ರೀತಿಸುವುದಿಲ್ಲವೇ ?

ಕಾತ್ಯಾ—ತಾವು ಸನ್ಯಾಸಿಗಳು, ತಮಗೆ ಹೆಂಗುಸಿನ ಪ್ರೀತಿಯೆಂಬುದು ಹೇಗೆ ಗೊತ್ತಾಗಬೇಕು ?

ಸನ್ಯಾಸಿ—ಮಗು ! ನಾನು ಸನ್ಯಾಸಿಯಲ್ಲ. ನಾನೇ ಮಾರವಾಡದ ಮಹಾರಾಣನು.

ಕಾತ್ಯಾಯನಿಯು ಇದನ್ನು ಕೇಳಿ ವಿಸ್ಮಿತೆಯಾಗಿ ತನ್ನೊಳಗೆ ತಾನೇ, 'ನಮ್ಮ ಪರಮಾನಂದ ಸ್ವಾಮಿಗೆ ಹುಚ್ಚು ಹಿಡಿದಂತಿದೆ. ಈತನಿಗೂ ಮಾರವಾಡದ ಮಹಾರಾಣನಿಗೂ ಆವ ಸಂಬಂಧವಿದ್ದೀತು ? ಈತನು ತಾನೇ ಮಾರವಾಡದ ಮಹಾರಾಣನೆಂದು ಹೇಳಿಕೊಳ್ಳುವುದನ್ನು ನೋಡಿದರೆ, ನನಗೆ ಆಶ್ಚರ್ಯವೇ ಆಗುತ್ತಿರುವುದು,' ಎಂದು ಚಿಂತಿಸುತ್ತಾ ನಿಂತುಬಿಟ್ಟಳು.

ಇದನ್ನು ನೋಡಿ ಪರಮಾನಂದ ಸ್ವಾಮಿಯು ಹೇಳತೊಡಗಿದನು:-

"ಮಗು ! ನನ್ನ ಮಾತ ಕೇಳಿ ನಿನಗೆ ಆಶ್ಚರ್ಯವಾಗಬಹುದು. ಈ ಸುದ್ದಿಯು ಆರಿಗೂ ಆಶ್ಚರ್ಯವನ್ನುಂಟುಮಾಡಿಯೇ ಮಾಡುವುದು. ಸತ್ಯವಾಗಿಯೂ ನಾನೇ ಮಾರವಾಡದ ಮಹಾರಾಣನು. ನಾನೇ ಅಜಯಸಿಂಹನು. ನಾನೇ ವೃದ್ಧನಾದ ಅಮರಸಿಂಹ ಮಹಾರಾಣನ ಜ್ಯೇಷ್ಠ ಪುತ್ರನು. ಈ ಲಲಿತಸಿಂಹನೇ ನನ್ನ ಮಗನು. ಅಜಯಸಿಂಹನು ಸತ್ತು ಹೋದನೆಂದು ಎಲ್ಲರೂ ತಿಳಿದಿರುವರು, ಆದರೆ ಅದು ಸುಳ್ಳಿನ ಸುದ್ದಿಯು. ಅಜಯಸಿಂಹನು ಇನ್ನೂ ಸತ್ತಿಲ್ಲ. ಕಾತ್ಯಾಯನಿ ! ನೀನು ಆವ ರೀತಿಯಲ್ಲಿ ಲಲಿತನನ್ನು ಪ್ರೀತಿಸುತ್ತಿರುವೆಯೋ ಹಾಗೆಯೇ ನಾನೂ ಬಾಲ್ಯದಲ್ಲಿ ನನ್ನ ಹೆಂಡತಿಯನ್ನು ಪ್ರೀತಿಸುತ್ತಿದ್ದೆನು. ಪ್ರೀತಿಯ ಸ್ವರೂಪವನ್ನು

ನಾನೂ ಬಲ್ಲೆನು. ಪ್ರೀತಿಸುವುದರಿಂದ ಹೃದಯದಲ್ಲಿ ಆವ ಭಾವಗಳುಂಟಾಗುವುದೋ ಅವೆಲ್ಲವನ್ನೂ ನಾನು ಚೆನ್ನಾಗಿಯೂ ಅರಿತವನಾಗಿಯೇ ಇರುವೆನು. ಸಂಯೋಗದಿಂದುಂಟಾಗಬಹುದಾದ ಸುಖವನ್ನೂ, ವಿಯೋಗದಿಂದುಂಟಾಗಬಹುದಾದ ದುಃಖವನ್ನೂ ನಾನು ಚೆನ್ನಾಗಿಯೂ ಅನುಭವಿಸಿರುವೆನು. ಲಲಿತನ ಬಾಲ್ಯದಲ್ಲಿಯೇ ನನ್ನ ಹೆಂಡತಿಯು ಸತ್ತು ಹೋದಳು. ಅಂದಿನಿಂದಲೂ ನನಗುಂಟಾಗಿರುವ ಯಾತನೆಯನ್ನು ಅರಿಯ ಬಲ್ಲವರಾರು? ನಾನು ಮೊದಲು ಬೇಟೆಗಾಗಿ ಅರಣ್ಯಕ್ಕೆ ಬಂದವನು ಮತ್ತೆ ಅರಮನೆಗೆ ಹೋಗದೆಯೇ ಕಾಷಾಯ ವಸ್ತ್ರವನ್ನುಟ್ಟು ಸನ್ಯಾಸಿಯಾಗಿರುವೆನು. ಬೇಟೆಗೆಂದು ಹೋದ ನನ್ನನ್ನು ದುಷ್ಟಮೃಗಗಳು ನುಂಗಿಬಿಟ್ಟವೆಂದು ಎಲ್ಲರೂ ತಿಳಿದಿರುವರು. ಎಲ್ಲರೂ ಹಾಗೆಯೇ ತಿಳಿದುಕೊಂಡಿರಲಿ. ಈ ಇಪ್ಪತ್ತು ವರ್ಷಗಳಿಂದಲೂ ನಾನು ನನ್ನ ಸತ್ತ ಹೆಂಡತಿಯನ್ನು ಸ್ಮರಿಸಿಕೊಂಡು ಗ್ರಾಮೈಕರಾತ್ರಿಯಾಗಿ ಅಲೆಯುತ್ತಿರುವೆನು. ಕಾತ್ಯಾಯನಿ! ಗೊತ್ತಾಯಿತೇ! ಪ್ರೀತಿಯೆಂಥದೆಂಬುದು ನನಗೂ ಚೆನ್ನಾಗಿ ಗೊತ್ತು."

ಕಾತ್ಯಾಯನಿಯು ಈ ಮಾತುಗಳನ್ನು ಕೇಳಿ ಬೆರಗಾಗಿ ಹೋದಳು. ಬಳಿಕ ಆಕೆಯು ಆವ ಮಾತನ್ನೂ ಆಡದೆ ಸುಮ್ಮನೆಯೇ ಇದ್ದುಬಿಟ್ಟಳು. ಸನ್ಯಾಸಿಯು ಮತ್ತೆ ಮಾತನಾಡಿದನು. ಅದೇನೆಂದರೆ:—"ಈ ಪೂರ್ವವೃತ್ತಾಂತವನ್ನು ನಿನಗೆ ನಾನು ತಿಳಿಸಬೇಕಾದುದೇನೂ ಇರುವುದಿಲ್ಲ. ಇತರರು ಇದನ್ನರಿಯುವುದರಿಂದ ಆಗುವುದೇನು? ಆದರೆ ಲಲಿತಸಿಂಹನು ಇದನ್ನು ಅರಿವುದರಿಂದ ಪ್ರಯೋಜನವುಂಟು. ನಾನು ಅವನನ್ನು ಮತ್ತೆ ನೋಡಲಾರೆನು; ನೋಡಿದರೂ ಈ ವಿಷಯವನ್ನು ಆತನಿಗೆ ತಿಳಿಸಲಾರೆನು. ಕಾತ್ಯಾಯನಿ! ಈ ಹದಿನಾಲ್ಕು ವರ್ಷಗಳಿಂದಲೂ ಅತಿ ಪ್ರಯಾಸಪಟ್ಟು ನಿನ್ನನ್ನು ಸಾಕಿ ಸಲಹಿರುವೆನು. ನಿನ್ನನ್ನು ನಾನು ನನ್ನ ಮಗಳೆಂದೇ ತಿಳಿದು, ಇಂದಿನ ವರೆಗೂ ರಕ್ಷಿಸಿಕೊಂಡು ಬಂದಿರುವೆನು. ನಿನ್ನನ್ನು ನಾನು ಒಂದು ದಿನವಾದರೂ ಪಾಲಿತ ಕನ್ಯೆಯೆಂದು ತಿಳಿದವನೇ ಅಲ್ಲ. ಇಂದಿಗೆ ಮೂರು ವರ್ಷಗಳ ಹಿಂದೆ, ನಾನು ನಿನ್ನನ್ನು ಲಲಿತನ ಬಳಿಗೆ ಕರೆದುಕೊಂಡು ಹೋಗಿದ್ದೆನು. ನೀನು ಲಲಿತನನ್ನು ಪ್ರೀತಿಸುವುದಕ್ಕೆ

ಏನೇನ ಮಾಡಬೇಕೋ ಅದೆಲ್ಲವನ್ನೂ ಮಾಡಿದೆನು. ಕಾರಣವೇನೆಂದರೆ— ಲಲಿತನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡಬೇಕೆಂದು ನನಗೆ ತುಂಬಾ ಆಸೆಯಿದ್ದಿತು. ಈಯುದ್ದೇಶವನ್ನು ನೆರವೇರಿಸಿಕೊಳ್ಳುವುದಕ್ಕಾಗಿ, ನಾನು ಭಿಲ್ಲರನ್ನು ಸ್ವಾಧೀನಪಡಿಸಿಕೊಂಡು ನಿನ್ನನ್ನು ಅವರ ಆರಾಧ್ಯ ದೇವತೆಯನ್ನಾಗಿ ಮಾಡಿದೆನು. ಅಲ್ಲದೆಯೂ ನಿನ್ನನ್ನು ಲಲಿತನಿಗೆ ಕೊಟ್ಟು ವಿವಾಹವನ್ನೂ ಮಾಡಿದೆನು. ನನ್ನ ಇಷ್ಟವು ನೆರವೇರಿದುದು. ಇಷ್ಟ ಪಟ್ಟರೆ, ನೀನು ಮಾರವಾಡದ ಮಹಾರಾಣಿಯಾಗು, ಇಲ್ಲವಾದರೆ ಬಿಟ್ಟು ಬಿಡು. ನಿನ್ನ ಇಷ್ಟಕ್ಕೆ ವಿರೋಧವಾಗಿ ನಡೆಯುವುದು ನನಗೆ ಇಷ್ಟವಿಲ್ಲ. ''

ಕಾತ್ಯಾಯನಿಯು ಈ ಮಾತನ್ನು ಕೇಳಿ ಸುಮ್ಮನೆಯೇ ನಿಂತಿದ್ದಳು. ಬಳಿಕ ಸನ್ಯಾಸಿಯು ಮತ್ತೆ ಇಂತೆಂದನು:-—'' ಮಹಾರಾಜಸಿಂಹನು ನನ್ನ ತಮ್ಮನು. ಜ್ಯೋತಿಷ್ಯದ ರೀತಿಯಾಗಿ ಗುಣಿಸಿ ನೋಡಿದುದರಲ್ಲಿ, ಮಹಾರಾಜಸಿಂಹನೇ ಮಹಾರಾಣನಾಗುವುದಾಗಿ ತಿಳಿದು ಬಂದಿತು. ಆದುದರಿಂದಲೇ ನಾನು ನಿನ್ನನ್ನು ಹುಚ್ಚಿಯನ್ನಾಗಿ ಮಾಡಿ ಅವನಿಗೆ ಅಡಿಗಡಿಗೂ ನಿನ್ನಿಂದ ಎಚ್ಚರಿಕೆಗೊಳಿಸುತ್ತಿದ್ದೆನು. ಆವ ದಿನ ಮಹಾರಾಜಸಿಂಹನು ಪಾಪಕಾರ್ಯವನ್ನು ನೆರವೇರಿಸುವುದಕ್ಕಾಗಿ ಸಭಾಪರಿತ್ಯಾಗ ಮಾಡಿದನೋ, ಆಗಳೇ ನೀನು ನನ್ನ ಇಷ್ಟವರಿತು, 'ಮಾಡಬೇಡ, ಮಾಡಬೇಡ, ಮಾಡಬೇಡ,' ಎಂದು ಮೂರು ಸಲ ಆತನಿಗೆ ಎಚ್ಚರಿಕೆಯನ್ನು ಕೊಟ್ಟಿರುವೆ. ಆದರೂ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಆತನು ತನ್ನ ತಂದೆಯನ್ನು ಕೊಂದೇ ಕೊಂದನು. ಪಿತೃಘಾತಿಗೆ ಸರಿಯಾದ ದಂಡವಿಧಾನವಾಗದಿದ್ದರೆ, ಪಿತೃದೇವತೆಗೆ ಶಾಂತಿಯುಂಟಾಗಲಿಕ್ಕಿಲ್ಲ. ಇದೆಲ್ಲವನ್ನೂ ಲಲಿತನಿಗೆ ತಿಳಿಸು. ಹಾಗೂ ಪಿತೃಘಾತಿಗೆ ಸರಿಯಾದ ದಂಡನವಾಗಬೇಕೆಂದು ನಾನು ಹೇಳಿದೆನೆಂಬುದಾಗಿ ನೀನು ಅವನಿಗೆ ತಿಳಿಸು. ನಾನು ಸನ್ಯಾಸಿಯು; ನಾನು ಮತ್ತೆ ಸಂಸಾರ ಸಾಗರದಲ್ಲಿ ಪದಾರ್ಪಣಮಾಡಲಾರೆನು. ನಿನ್ನನ್ನು ನಾನು ಲಾಲನ ಪಾಲನ ಮಾಡದಿದ್ದರೆ, ನಾನು ಈ ದಿಕ್ಕಿನ ಕಡೆಗೆ ತಲೆಯನ್ನಿಟ್ಟು ಮಲಗುತ್ತಲೇ ಇರಲಿಲ್ಲ. ನೀನು ದೊರೆತ ಮೇಲೆ, ನಿನ್ನನ್ನು ಲಲಿತನಿಗೆ ಕೊಟ್ಟು

ಮದುವೆ ಮಾಡಬೇಕೆಂಬ ಆಸೆ ಜನಿಸಿತು. ಈ ಯುದ್ದೇಶದ ಸಾಧನೆಗಾಗಿ ನಾನು ಯೋಗಸಾಧನೆಯನ್ನೂ, ಧರ್ಮಕರ್ಮಗಳನ್ನೂ ಬಿಟ್ಟು ಇಲ್ಲಿಯ ವರೆಗೂ ಬರಬೇಕಾಯಿತು. ಕಾತ್ಯಾಯನಿ! ಆದುದು ಆಗಿಯೇ ಹೋಯಿತು. ಅಜಯಸಿಂಹನು ಇನ್ನು ಬದುಕಿಲ್ಲವೆಂದು ನೀನು ಲಲಿತನಿಗೆ ತಿಳಿಸಿ ಬಿಡು."

ಇಷ್ಟು ಹೊತ್ತಿನ ಮೇಲೆ ಕಾತ್ಯಾಯನಿಯು ಮಾತನಾಡಿದಳು.

ಕಾತ್ಯಾ---ತಾವು ಆರಲ್ಲಿ ಲಾವಣ್ಯನನ್ನು ಬಿಟ್ಟು ಬಂದಿರೋಣವಾಗಿರುವುದು?

ಸನ್ಯಾಸಿ---ಸರಿಯಾದ ಸಮಯದಲ್ಲಿ ಲಾವಣ್ಯನನ್ನು ಹೊದ್ದುವೆ.

ಕಾತ್ಯಾ---ತಾವು ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗಬಾರದೇತಕೆ?

ಸನ್ಯಾಸಿ---ಈಗ ಬೇಡ. ಮುಂದೆ ನೀನೂ ನನ್ನಂತೆಯೇ ಸನ್ಯಾಸವನ್ನು ಗ್ರಹಣಮಾಡುವೆ.

ಕಾತ್ಯಾ---ಯುದ್ಧವು ಹೇಗಾಗುವುದು?

ಸನ್ಯಾಸಿ---ನಾನು ಹೇಗೆ ಹೇಳಲಿ?

ಕಾತ್ಯಾ---ತಾವು ನನಗೆ ಈ ವಿಷಯವನ್ನು ಅದೇಕೆ ತಿಳಿಸುವುದಿಲ್ಲ? ತಿಳಿಸಿದರೆ ತಾನೇ ಆಗುವುದೇನು? ತಾವು ತಿಳಿಸಬೇಕಾದುದೂ ಇಲ್ಲ, ನಾನು ತಿಳಿಯಬೇಕಾದುದೂ ಇಲ್ಲ.

ಸನ್ಯಾಸಿ---ಹಾಗಾದರೆ ಹೊರಡು. ನಾಳೆಯು ಬೆಳಗ್ಗೆ ಯುದ್ಧವು ಪ್ರಾರಂಭವಾಗುವ ಸಂಭವವುಂಟು. ಯುದ್ಧಕ್ಕೆ ಮೊದಲೇ, ನಾನು ಹೇಳಿದುದೆಲ್ಲವನ್ನೂ ಲಲಿತನಿಗೆ ತಿಳಿಸಿಬಿಡು.

ಕಾತ್ಯಾ---ತಂದೆಯೆ! ಲಲಿತನು ಯುದ್ಧದಿಂದ ಹಿಂದಿರುಗುವನೇ? ತಿಳಿಸೋಣವಾಗಲಿ.

ಹೀಗೆ ಹೇಳಿ ಕಾತ್ಯಾಯನಿಯು ದುಃಖಶೋಕಗಳಿಂದ ಬಲವಾಗಿ ಅತ್ತು ಬಿಟ್ಟಳು. ಅವಳ ಅಳುವಿಗೆ ತುದಿ ಮೊದಲಿರಲಿಲ್ಲ. ಆಕೆಯು ಅತ್ತು ಅತ್ತು ಸಾಕಾಗಿ ಕೊಂಚ ಮಟ್ಟಿಗೆ ಸಮಾಧಾನ ಪಟ್ಟುಕೊಂಡು ನೋಡುವಲ್ಲಿ ಪರಮಾನಂದ ಸ್ವಾಮಿಯು ಮಾಯವಾಗಿ ಬಿಟ್ಟಿದ್ದನು.

---

## ಅರವತ್ತೊಂದನೆಯ ವಿಲಾಸ

ಮಾರವಾಡದ ರಾಜಧಾನಿಯು ರಣರಂಗವಾಗಿ ಹೋಗಿರುವುದು. ಉತ್ತರದಲ್ಲಿ ಮಹಮ್ಮದೀಯರ ಸೈನ್ಯವು ಠಾಣ್ಯವನ್ನು ಹೂಡಿರುವುದು; ದಕ್ಷಿಣದಲ್ಲಿ ಲಲಿತಸಿಂಹನು ಪುರಪ್ರಮುಖರೊಡನೆಯೂ, ಭಿಲ್ಲರೊಡನೆಯೂ ಯುದ್ಧಕ್ಕೆ ಸಿದ್ಧನಾಗಿ ನಿಂತಿರುವನು. ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಮಹಾರಾಜಸಿಂಹನ ಅಪರಿಮಿತವಾದ ಸೈನ್ಯವು ಆವರಿಸಿಕೊಂಡು ರಾಜಧಾನಿಯನ್ನು ರಕ್ಷಿಸಿಕೊಂಡು ಬರುತ್ತಿರುವುದು. ರಾಜಧಾನಿಯ ಹಾದಿ ಬೀದಿಗಳಲ್ಲಿಯೂ ಸೈನಿಕರು ಶಸ್ತ್ರಾಸ್ತ್ರಪಾಣಿಗಳಾಗಿ ಸುತ್ತುತ್ತಿರುವರು. ಆನೆಗಳ ಬೃಂಹಿತಗಳೂ, ಕುದುರೆಗಳ ಹೇಷಾರವಗಳೂ, ಶಸ್ತ್ರಗಳ ಝಣತ್ಕಾರಗಳೂ, ಸೈನಿಕರ ಜಯಕಾರವೂ, ಊರ ಜನರ ಕೋಲಾಹಲಧ್ವನಿಯೂ ಎಲ್ಲೆಲ್ಲಿಯೂ ತುಂಬಿ ಹೋಗಿ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸದಂತಾಗಿ ಹೋಗಿರುವುದು. ನಗರದ ವ್ಯಾಪಾರಿಗಳೆಲ್ಲರೂ ತಮ್ಮ ತಮ್ಮ ಅಂಗಡಿಗಳನ್ನು ಮುಚ್ಚಿ ಬಿಟ್ಟಿರುವರು. ಕೆಲಸಗಾರರು ಆವ ಕೆಲಸಕ್ಕೂ ಹೋಗದೆ ಮನೆಯಲ್ಲಿಯೇ ಉಳಿದುಬಿಟ್ಟಿರುವರು. ಹೆಂಗುಸರೂ ಮಕ್ಕಳೂ ಮನೆಯ ಬಾಗಿಲುಗಳನ್ನು ಭದ್ರಪಡಿಸಿಕೊಂಡು ಒಳಗೇ ಇರುವರು. ಎಲ್ಲೆಲ್ಲಿ ನೋಡಿದರೂ ಸೈನಿಕರ ಸಂಚಾರ; ಎಲ್ಲೆಲ್ಲಿ ನೋಡಿದರೂ ಭಯದ ಸಮಾಚಾರ. ಆಕಾಶದಲ್ಲಿ ಕಾಗೆ ಹದ್ದು ಮುಂತಾದುವು ಸಂಚರಿಸುವುದಕ್ಕೆ ಮೊದಲು ಮಾಡಿರುವುವು.

ಮಹಾರಾಜಸಿಂಹನು ಎಚ್ಚರನಾಗಿರುವನು. ಎರಡು ವರ್ಷಗಳ ಹಿಂದೆ ಆತನು ಆವ ರೀತಿಯಲ್ಲಿ ಅಜೇಯನಾದ ಸೇನಾಪತಿಯಾಗಿದ್ದನೋ,

ಈಗಳೂ ಅದರಂತೆಯೇ ಇರುವನು. ಎರಡು ವರ್ಷಗಳಿಂದಲೂ ಉದಾಸೀನತೆಗೆ ಈಡು ಮಾಡಲ್ಪಟ್ಟಿದ್ದ ಸೈನ್ಯವು ಇಂದು ಯುದ್ಧಕ್ಕಾಗಿ ತಹತಹಪಡುತ್ತಿರುವುದು. ಮಹಾರಾಜಸಿಂಹನು ಆವಾಗಲೂ ಕುದುರೆಯ ಮೇಲೆಯೇ ಕುಳಿತುಕೊಂಡು ಮಾಡಬೇಕಾದ ಕೆಲಸವನ್ನು ತನ್ನ ಕಣ್ಣಿನ ಇದಿರಿನಲ್ಲಿಯೇ ಮಾಡಿಸುತ್ತಿರುವನು. ಇದನ್ನು ನೋಡಿ ಸೈನಿಕರಿಗೆ ಬಲೋತ್ಸಾಹಗಳು ಇಮ್ಮಡಿಸುತ್ತಿರುವುವು. ಕಮಲಿನಿಯ ರತ್ನಾಭರಣಗಳನ್ನು ವಿಕ್ರಯಮಾಡಿ ಬಂದ ಹಣವೆಲ್ಲವನ್ನೂ ಸೈನಿಕರ ಬಾಯಲ್ಲಿ ಸುರಿದುದಲ್ಲದೆ, ನಗರದ ಹಣಗಾರರಿಂದ ಅಪರಿಮಿತವಾಗಿ ಹಣವನ್ನು ಸಾಲವಾಗಿ ತರಿಸಿ ಅದನ್ನು ನೀರಿನಂತೆ ವೆಚ್ಚಮಾಡಿದುದರಿಂದ, ಸೈನಿಕರು ಸ್ವಾಮಿಗಾಗಿ ಪ್ರಾಣವನ್ನು ಒಪ್ಪಿಸಲು ಮುಂದೆ ಬಂದು ನಿಂದಿರುವರು.

ಎಲ್ಲವೂ ಸಿದ್ಧವಾಗಿರುವುದು. ಇನ್ನು ಯುದ್ಧವಾಗುವುದೊಂದೇ ಉಳಿದಿರುವುದು. ಉಭಯ ಪಕ್ಷದವರೂ ಮೊದಲು ಆರು ಮೇಲೆ ಬೀಳುವರೋ ನೋಡೋಣವೆಂದು ಸಮಯವನ್ನು ಇದಿರು ನೋಡುತ್ತಿರುವರು. 'ಸೈನ್ಯವನ್ನು ಕಟ್ಟಿಕೊಂಡು ಯುದ್ಧಕ್ಕಾಗಿಯೇ ಬಂದಿರುವ ಲಲಿತನು ಮೊದಲು ರಾಜಧಾನಿಯನ್ನು ಆಕ್ರಮಣ ಮಾಡುವುದಾದರೆ, ತಾನು ಆತ್ಮರಕ್ಷಣೆಯನ್ನು ಮಾಡಿಕೊಳ್ಳಬಹುದು,' ಎಂದು ಮಹಾರಾಜಸಿಂಹನು ಆಲೋಚಿಸಿ ನೋಡಿದನು. ಆದರೆ ಲಲಿತನು ಮುಂದೆ ಬೀಳುವ ಸುದ್ದಿಯೇ ಇರಲಿಲ್ಲ. ಆಗ ಮಹಾರಾಜಸಿಂಹನಿಗೆ ಗೂಢಚಾರರಿಂದ ತಿಳಿದು ಬಂದುದೇನೆಂದರೆ:—" ಭಿಲ್ಲರು ಯುದ್ಧದ ವಿಚಾರವನ್ನೇ ಮರೆತು ಆನಂದ ಸಾಗರದಲ್ಲಿ ಮಗ್ನರಾಗಿ ಹೋಗಿರುವರು. ಅವರಿಗೆ ಯುದ್ಧ ಮಾಡಲು ಉತ್ಸಾಹವಿದ್ದಂತೆ ತೋರಿಬರುತ್ತಿಲ್ಲ. ಎಲ್ಲರೂ ಪಾನಮಾಡಿ ಮೈಮರೆತು ಬಿದ್ದಿರುವರು. ಈ ಸಮಯದಲ್ಲಿ ಶತ್ರುಗಳು ಸುಖೋಚ್ಛೇದ್ಯರೆಂದು ತೋರುವುದು."

ಮಹಾರಾಜಸಿಂಹನು ಇದನ್ನು ಕೇಳಿ ಭಿಲ್ಲರಿಗೂ ಪುರಪ್ರಮುಖರಿಗೂ ಸರಿಯಾಗಿ ಬುದ್ಧಿಗಲಿಸುವುದಕ್ಕೆ ಇದೇ ಸರಿಯಾದ ಕಾಲವೆಂದು ನಿರ್ಧರಮಾಡಿಕೊಂಡು ಸೇನಾನಾಯಕರನ್ನು ಕರೆದು — ನಾಳೆಯ ಬೆಳಗ್ಗೆ ಶತ್ರುವನ್ನು ನಾವೇ ಮೊದಲು ಆಕ್ರಮಣ ಮಾಡಬೇಕು, ಎಂದು ಕಟ್ಟ

ಪ್ಪಣೆ ಮಾಡಿದನು. ರಾಜಾಜ್ಞೆಯು ಗೋಪ್ಯವಾಗಿ ಸೈನಿಕರೆಲ್ಲರಿಗೂ ತಿಳಿಸಿದುದಾಯಿತು. ಹಾಗೂ ಮೊಗಲರ ಸೈನ್ಯದವರಿಗೂ ಈ ಸುದ್ದಿಯು ಕರ್ಣಗೋಚರವಾದುದು. ಆ ದಿನದ ರಾತ್ರಿಯಲ್ಲಿ ಆರಿಗೂ ನಿದ್ರೆಯೆಂಬುದೇ ಉಂಟಾಗಲಿಲ್ಲ.

---

## ಅರುವತ್ತೆರಡನೆಯ ವಿಲಾಸ

ಮಹಾರಾಜಸಿಂಹನು ಸೈನಿಕರಿಗೆ ಹೇಳಬೇಕಾದುದೆಲ್ಲವನ್ನೂ ಹೇಳಿದ ಬಳಿಕ, ಅರ್ಧರಾತ್ರದ ಸಮಯದಲ್ಲಿ ತನ್ನ ಅರಮನೆಗೆ ಬಂದನು. ಆತನು ವಿಶ್ರಾಂತಿಗಾಗಿ ತನ್ನ ಕೋಣೆಗೆ ಹೋಗಿ ಹಾಸುಗೆಯ ಮೇಲೆ ಮಲಗಿದನು. ಆತನ ಕಣ್ಣುಗಳಿಗೆ ನಿದ್ರೆಯೇ ಹತ್ತಲಿಲ್ಲ.

ಕೊಂಚ ಹೊತ್ತಿನ ಮೇಲೆ ಕಮಲಿನಿಯು ಗಂಡನ ಕೋಣೆಗೆ ಬಂದು ನೋಡಲಾಗಿ, ಮಹಾರಾಜನು ಹಾಸುಗೆಯ ಮೇಲೆ ಮಲಗಿ ಆವಾವುದನ್ನೋ ಆಲೋಚಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ಚಿಂತಾಸಾಗರದಲ್ಲಿ ಮುಳುಗಿದ್ದ ಮಹಾರಾಜನಿಗೆ ಕಮಲಿನಿಯು ಬಂದುದು ಗೊತ್ತಾಗಲೇ ಇಲ್ಲ.

ಕಮಲಿನಿಯು ಗದ್ದಲವಾಗದಿರಲೆಂದು ಹಜ್ಜೆಯ ಮೇಲೆ ಹಜ್ಜೆಯನ್ನಿಡುತ್ತಾ ಗಂಡನ ಬಳಿಗೈತಂದು ಆತನ ಮೈಮೇಲೆ ಕೈಯಿಟ್ಟಳು. ಮಹಾರಾಜನು ಚಕಿತನಾಗಿ ಹಿಂದಿರುಗಿ ನೋಡಲು, ಕಮಲಿನಿಯು ಕಾಳಿಯಂತೆ ಪಕ್ಕದಲ್ಲಿ ಬಂದು ನಿಂತಿದ್ದಳು. ರಾಜನು ಕಮಲಿನಿಯನ್ನು ನೋಡಿ—ಪ್ರಿಯೆ! ಈಗಲೂ ಅದೇ ಸ್ವಪ್ನವನ್ನೇ ಕಾಣುತ್ತಿದ್ದೆನು, ಎಂದನು.

ಕಮಲಿನಿ—(ನಗುತ್ತಾ) ಕಣ್ಣು ಮುಚ್ಚಿದರೆ ನಿನಗೆ ಭೂತಗಳೇ ಬಂದು ಸುತ್ತಿಕೊಳ್ಳುವುವು. ಇದಕ್ಕೆ ನೀನೇನ ಮಾಡಬಲ್ಲೆ?

ಮಹಾ—ನಗಬೇಡ, ಕಮಲಿನಿ! ನಿಜವಾಗಿಯೂ ನಾನು ಆ ಸ್ವಪ್ನವನ್ನು ಕಂಡೆನು. ಏನಾದರೂ ಆಗಲಿ, ನಾನು ಯುದ್ಧಮಾಡದೆಯೇ ಹಿಂದಿರುಗಿ ಬರತಕ್ಕವನಲ್ಲ.

ಕಮಲಿನಿ—ನಿನಗೆ ಇಷ್ಟರ ಮಟ್ಟಿಗೆ ತೋರಿರುವುದು ಆಶ್ಚರ್ಯವೇ ಸರಿ.

ಮಹಾ—ನಾಳೆಯ ಬೆಳಗ್ಗೆ ಯುದ್ಧವಾಗುವುದೆಂದು ನನಗೆ ಈ ಸ್ವಪ್ನದಿಂದ ತಿಳಿದು ಬಂದಿತು.

ಕಮಲಿನಿ—ಇಷ್ಟಾದರೂ ನಿನ್ನ ಬಾಯಿಂದ ಶೂರನಂತೆ ಮಾತೇ ಬರುತ್ತಿಲ್ಲ. ನಿನ್ನನ್ನು ಆವ ಹೆಸರಿನಿಂದ ಕರೆಯಬೇಕೋ ಗೊತ್ತಿಲ್ಲ.

ಮಹಾ—ಕಮಲಿನಿ! ನನ್ನದೊಂದು ಮಾತು. ಇಲ್ಲಿ ಬಂದು ಕುಳಿತುಕೊಳ್ಳು, ತಿಳಿಸುವೆನು. ಕಮಲಿನಿ! ಈಗಳೇ ನಾವಿಬ್ಬರೂ ಎಲ್ಲಿಗಾದರೂ ಓಡಿಹೋಗಿ ತಲೆಯನ್ನು ಮರೆಮಾಡಿಕೊಂಡು ಬದುಕಿಕೊಳ್ಳುವ. ನನಗೇನೋ ಭಯವೇ ಆಗುತ್ತಿರುವುದು. ಇಷ್ಟು ಬೇಗನೆ ಸಾಯಲು ನನಗೆ ಕೊಂಚವೂ ಇಷ್ಟವಿಲ್ಲ. ನಾನು ಮಹಾ ಪಾಪಿಯಾದುದರಿಂದ, ಸಾಯಲೇ ಬೇಕು. ಆದರೆ ಸಾಯುವುದಕ್ಕೆ ನನಗೆ ಸಾಹಸವೇ ಉಂಟಾಗುತ್ತಿಲ್ಲ. ಸತ್ತಕೂಡಲೇ ನನಗೆ ನರಕಯಾತನೆಯು ಸಿದ್ಧವಾಗಿಯೇ ಇರುವುದರಿಂದ ನಾನು ಸಾಯುವುದಕ್ಕೇ ಇಷ್ಟಪಡುವುದಿಲ್ಲ. ಕಮಲಿನಿ! ಓ ಕಮಲಿನಿ! ಇನ್ನೂ ಕೆಲವು ಕಾಲವಾದರೂ ಬದುಕುವ ಹಾಗೆ ಮಾಡು.

ಕಮಲಿನಿ—(ನಕ್ಕು) ನಿನ್ನನ್ನು ಕೊಲ್ಲುವರಾರು? ಭಿಲ್ಲರು ಕೊಂಚವಾಗಿಯೇ ಇರುವರು. ನಿನ್ನ ಸೈನ್ಯವಾದರೋ ಅಪರಿಮಿತವಾಗಿರುವುದು. ಅಲ್ಲದೆ, ನಮಗೆ ಮೊಗಲರ ಒತ್ತಾಸೆಯೂ ಇರುವುದು. ಹೀಗಿರುವಲ್ಲಿ ಭಯವೆಂದರೇನು. ಭಿಲ್ಲರಲ್ಲಿ ಮೊಗಲರನ್ನು ಸೋಲಿಸುವ ಧೀರ ನಾವನಿರುವನು? ಒಂದು ವೇಳೆ ಅವರು ಜಯಿಸುವುದಾದರೆ, ಪೂರ್ವದ ಸೂರ್ಯನು ಪಶ್ಚಿಮದಲ್ಲಿ ಹುಟ್ಟಬೇಕಾದೀತು.

ಮಹಾ—(ಕಾತರ ಸ್ವರದಿಂದ) ಪ್ರಿಯೆ! ಯುದ್ಧದಲ್ಲಿ ನಾವೇ ಜಯಿಸಬಹುದು. ಆದರೆ ಯುದ್ಧದಲ್ಲಿ ಬದುಕುವವರಾರೋ, ಸಾಯುವವರಾರೋ ಆರಿಗೆ ಗೊತ್ತು? ಯುದ್ಧಕ್ಕೆ ಹೋದರೆ, ಆರಿಗಾದರೂ ಬದುಕುವ ಆಸೆಯೇ ಇರುವುದಿಲ್ಲ. ದೂರದಿಂದ ಅದೊಂದು ಬಾಣವು

ಬಂದು ತಗುಲಿದರಾಯಿತು. ಆದುದರಿಂದ, ಕಮಲಿನಿ! ನನಗೆ ಸಾಯುವುದಕ್ಕೆ ಕೊಂಚವೂ ಇಷ್ಟವಿಲ್ಲ.

ಕಮಲಿನಿ—ಇಷ್ಟಾದರೂ ನೀನು ಪ್ರಾಣವನ್ನು ಉಳಿಸಿಕೊಂಡು ಮಾಡುವುದೇನು? ಬಳಿಕ ನಾನು ನಿನ್ನನ್ನು ಒಂದು ಪಂಜರದಲ್ಲಿ ಹಿಡಿದಿಟ್ಟು ಕಾಡ ಮೃಗವನ್ನು ಎಲ್ಲರಿಗೂ ತೋರುವಂತೆ, ನಾನೂ ಪಿತೃಘಾತಿಯಾದ ನಿನ್ನನ್ನು ತೋರುತ್ತಾ ಊರೂರ ಅಲೆಯಬೇಕಾಗುವುದು.

ಮಹಾ—ಸುಮ್ಮನಿರು ಸುಮ್ಮನಿರು.

ಕಮಲಿನಿ—ಅದೇಕೆ ಸುಮ್ಮನಿರಬೇಕು? ನನಗೇನು ಭಯ! ಓಡಿ ಹೋಗುವುದಾದರೆ, ನೀನೇ ಓಡಿಹೋಗು; ನಾನೆಂದಿಗೂ ಓಡಿ ಹೋಗಲಾರೆನು. ನಿನಗಾಗಿ ನಾನೇ ಯುದ್ಧಮಾಡಿ ನೋಡುವೆನು. ಯುದ್ಧದಲ್ಲಿ ಮಡಿದರಂತೂ ಒಳ್ಳೆಯದೇ ಆಯಿತು. ಆಗ ನನ್ನನ್ನು ಎಲ್ಲರೂ ವೀರರಮಣಿಯೆಂದು ಕೊಂಡಾಡುವರು.

ಇದನ್ನು ಕೇಳಿ ಮಹಾರಾಜನು ಮತ್ತಾವ ಮಾತನ್ನೂ ಆಡಲಿಲ್ಲ. ಕೊಂಚ ಹೊತ್ತಿನ ಮೇಲೆ, ಆತನು—ಪ್ರಿಯೆ! ನಿನಗೆ ನನ್ನ ಯಾತನೆಯು ಗೊತ್ತಾಗುವಂತಿಲ್ಲ. ಆವ ಯಾತನೆಯಿಂದ ನನ್ನ ಹೃದಯವು ನುಚ್ಚು ನೂರಾಗಿ ಹೋಗಿರುವುದೋ, ಆ ಯಾತನೆಯನ್ನು ನೀನು ಹೇಗೆ ತಾನೇ ಅರಿಯಬಲ್ಲೆ? ಕಮಲಿನಿ! ನನ್ನನ್ನು ಇನ್ನೂ ಕೆಲವು ದಿನಗಳ ವರೆಗಾದರೂ ಬದುಕಿಸಿಕೊಳ್ಳು. ನಾನು ಯುದ್ಧದಲ್ಲಿ ಖಂಡಿತವಾಗಿಯೂ ಬದುಕಿ ಬರಲಾರೆನು. ಕಮಲಿನಿ! ನನ್ನನ್ನು ಕಾಪಿಡು.

ಕಮಲಿನಿ—ಪ್ರಿಯನೇ! ಹುಚ್ಚನಂತಾಡಬೇಡ. ನಿನ್ನನ್ನು ಕೊಲ್ಲುವವರಾರಿರುವರು? ಸನ್ಯಾಸಿಯು ಗುಣಿಸಿ ಎಲ್ಲವನ್ನೂ ಹೇಳಿಲ್ಲವೇ? ಇಷ್ಟರಲ್ಲಿಯೇ ಅದೆಲ್ಲವೂ ಮರೆತು ಹೋದುದೇ?

ಮಹಾರಾಜಸಿಂಹನು ಸುಮ್ಮನಿದ್ದನು.

ಕಮಲಿನಿ—ಲೋಕದಲ್ಲಿ ಪಿತೃಘಾತಿಯಾದ ನರರಾಕ್ಷಸನೆಂದು ಹೊಗಳಿಸಿಕೊಳ್ಳುವುದಕ್ಕಿಂತಲೂ ಸಾಯುವುದು ಮೇಲಲ್ಲವೇ?

ಮಹಾ—ನಾನು ಓಡಿ ಹೋಗುವುದಾದರೆ, ನನ್ನನ್ನು ಹಿಡಿದು ದಂಡಿಸುವವರಾರು ?

ಕಮಲಿನಿ—(ಶೀವ್ರಯಿಂದ) ಮಹಾರಾಜ ! ನೀನು ಯುದ್ಧವನ್ನು ಮಾಡದೇ ಹೋದರೆ, ನಿನ್ನನ್ನು ನಾನೇ ಹಿಡಿದುಕೊಟ್ಟು ಗಲ್ಲಿಗೆ ಹಾಕಿಸಿ ಬಿಡುವೆನು. ನನ್ನನ್ನು ಸಾಮಾನ್ಯೆಯೆಂದು ತಿಳಿಯಬೇಡ, ಕಂಡೆಯಾ ?

ಮಹಾ—ಪ್ರಿಯೆ ! ಸುಮ್ಮನಿರು ಸುಮ್ಮನಿರು, ಗದ್ದಲಮಾಡ ಬೇಡ. ನಿನ್ನ ಕಾಲಿಗೆ ಬೀಳುವೆನು.

ಕಮಲಿನಿ—ಮಹಾರಾಜ ! ನೀನು ಯುದ್ಧವನ್ನು ಮಾಡಲೇ ಬೇಕು. ನಮ್ಮಿಬ್ಬರಲ್ಲಿ ಆರೊಬ್ಬರಾದರೂ ಸಾಯಲೇ ಬೇಕಾಗುವುದು. ಆವ ಕಾರಣದಿಂದಲಾದರೂ ನಾನು ಮಾರವಾಡದ ಮಹಾರಾಣಿಯಾಗಿರಲೇ ಬೇಕು. ನಾನು ಬದುಕಿರುವ ವರೆಗೂ, ನನ್ನ ಅಧಿಕಾರವನ್ನು ಮತ್ತಾರಿಗೂ ಕೊಡತಕ್ಕವಳಾಗಿಲ್ಲ.

ಕಮಲಿನಿಯು ಹೀಗೆ ಹೇಳಿ ಕೋಪದಿಂದ ಮುಖವನ್ನು ಕೆಂಪಗೆ ಮಾಡಿಕೊಂಡು ಹೊರಗೆ ಬಂದು ಬಿಟ್ಟಳು. ಮಹಾರಾಜಸಿಂಹನು ಬಲು ಹೊತ್ತು ಆವಾವುದನ್ನೋ ಚಿಂತಿಸುತ್ತಾ ಕಾಲವನ್ನು ಕಳೆದ ಬಳಿಕ, ತನ್ನ ಕೋಣೆಯಿಂದ ಹೊರ ಹೊರಟನು.

ಮಹಾರಾಜಸಿಂಹನು ಹೊರಗೆ ಬಂದು ತನ್ನ ಕುದುರೆಯನ್ನೇರಿ ಸೈನ್ಯದ ಬಳಿಗೆ ಬಂದು ಸೇರಿದನು. ರಾಜನು ಬಂದುದನ್ನು ನೋಡಿ ಸೈನ್ಯದವರೆಲ್ಲರೂ ಭಿಲ್ಲರೊಡನೆ ಹೋರಾಡುವುದಕ್ಕೆ ವಿಜಯಯಾತ್ರೆಯನ್ನು ಮಾಡಿದರು.

---

## ಅರವತ್ತಮೂರನೆಯ ವಿಲಾಸ

ಲಲಿತಸಿಂಹನ ಶಿಬಿರದಲ್ಲಿ ಎಲ್ಲರೂ ಮಲಗಿರುವರು. ಲಲಿತನ ಕಡೆಯುವರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿಯೇ ಇದ್ದುಕೊಂಡು, ಯುದ್ಧವು ಪ್ರಾರಂಭವಾಗುವ ವರೆಗೂ ವಿಶ್ರಾಂತಿಯನ್ನು ತೆಗೆದುಕೊಳ್ಳುವುದಕ್ಕಾಗಿ

ನಿದ್ರಿಸುತ್ತಿರುವರು. ಜುಮೇಲಿಯನು ಎಲ್ಲರಿಗೂ ವಿಶ್ರಾಂತಿಯನ್ನು ಪಡೆಯರೆಂದು ಹೇಳಿದ್ದುದರಿಂದ ಎಲ್ಲರೂ ನಿದ್ರಿಸುತ್ತಿರುವರು. ಬೆಳಗಾದ ಕೂಡಲೆ, ಯುದ್ಧವು ಪ್ರಾರಂಭವಾಗುವುದೆಂದು ಜುಮೇಲಿಯನು ತಿಳಿದಿದ್ದನಾದ ಕಾರಣ, ಆತನು ಎಲ್ಲರಿಗೂ ವಿಶ್ರಾಂತಿಗಾಗಿ ಅಪ್ಪಣೆಮಾಡಿದ್ದನು. ಆದರೆ ಆತನು ಮಟ್ಟಿಗೆ ವಿಶ್ರಾಂತಿಯನ್ನು ತೆಗೆದುಕೊಳ್ಳದೆಯೇ ಕಾದಿರುತ್ತಿದ್ದನು. ಅವನ ಜತೆಯಲ್ಲಿ ಲಲಿತನೂ ಎಚ್ಚರದಿಂದಿರುತ್ತಿದ್ದನು. ಆವ ಸಮಯದಲ್ಲಿ ಕಮಲಿನಿಯು ತನ್ನ ಗಂಡನಿಗೆ ಯುದ್ಧಮಾಡುವುದಕ್ಕೆ ಹುರಿದುಂಬಿಸುತ್ತಿದ್ದಳೋ, ಅದೇ ಸಮಯದಲ್ಲಿ ಜುಮೇಲಿಯನೂ ಲಲಿತನಿಗೆ ಬಗೆಬಗೆಯಾಗಿ ಉಪದೇಶಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ಆಗ ಜುಮೇಲಿಯನು ಲಲಿತನನ್ನು ಕುರಿತು—ರಾಜಕುಮಾರ! ನಿನ್ನಲ್ಲಿ ನನ್ನದೊಂದು ಪ್ರಾರ್ಥನೆಯುಂಟು, ಎಂದನು.

ಲಲಿತ—ಮಿತ್ರನೇ! ಈ ಸಂಸಾರದಲ್ಲಿ ಕುಮುದಿನಿಯನ್ನು ಬಿಟ್ಟರೆ, ನಾನು ನಿನ್ನನ್ನೇ ಪ್ರೀತಿಸುತ್ತಿರುವುದು. ಅಲ್ಲದೆಯೂ ನಿನ್ನ ಬಳಿಯಲ್ಲಿ ನಾನು ಸಾಸಿರಮಡಿಯಾಗಿ ಋಣಿಯಾಗಿರುವೆನು. ಹೀಗಿರುವಲ್ಲಿ ನನ್ನಲ್ಲಿ ನಿನ್ನ ಪ್ರಾರ್ಥನೆಯೆಂಬುದೇನು? ನೀನು ಏನನ್ನು ಅಪ್ಪಣೆಮಾಡುವೆಯೋ ನಾನು ಅದನ್ನು ನೆರವೇರಿಸಿ ಧನ್ಯನಾಗುವೆನು.

ಜುಮೇ—ಪ್ರಭೂ! ನೀನು ನಾಳೆಯ ದಿನ ಯುದ್ಧಕ್ಕೆ ಹೋಗಕೂಡದು. ಹಾಗೂ ಯುದ್ಧರಂಗದಲ್ಲಿಯೂ ಇರಕೂಡದು. ಇದೇ ನನ್ನ ಪ್ರಾರ್ಥನೆ.

ಇದನ್ನು ಕೇಳಿ ಲಲಿತನು ವಿಸ್ಮಿತನಾಗಿ ಬಲು ಹೊತ್ತು ಜುಮೇಲಿಯನನ್ನೇ ನೋಡುತ್ತಿದ್ದು—ಜುಮೇಲಿಯಾ! ಇದೇಕೆ ಹೀಗೆ ಹೇಳುವೆ? ಯುದ್ಧಮಾಡಬೇಕೆಂದು ಪ್ರೇರಿಸಿದವನೂ ನೀನೇ; ಈಗ ಯುದ್ಧಕ್ಕೆ ಹೋಗಕೂಡದೆಂದು ನಿಷೇಧಿಸುತ್ತಿರುವವನೂ ನೀನೇ. ನಿನ್ನ ಹೃದಯವೇ ನನಗೆ ಗೊತ್ತಾಗಲೊಲ್ಲದು, ಎಂದು ನುಡಿದನು.

ಜುಮೇ—ನಾನೇ ನಿನಗಾಗಿ ಯುದ್ಧಮಾಡುವೆನು. ನೀನು ಮಟ್ಟಿಗೆ ಯುದ್ಧಕ್ಕೆ ಹೋಗಬೇಡ. ನನ್ನ ಈ ಪ್ರಾರ್ಥನೆಯನ್ನು ನೆರವೇರಿಸಿ ಕೊಡಲಾರೆಯಾ?

ಲಲಿತ—ಹೀಗೆ ನಾನು ಮಾಡುವುದಾದರೆ, ಜನರೇನೆಂದಾರು? ಇದು ಸಾಧ್ಯವೇ? ನಾನು ಯುದ್ಧರಂಗದಲ್ಲಿ ಕಾಣಿಸಿಕೊಳ್ಳದೇ ಹೋದಲ್ಲಿ ರಾಜಪುತ್ರ ಸೈನಿಕರು ಯುದ್ಧವನ್ನು ಮಾಡುವುದೇ ಇಲ್ಲ. ಭಿಲ್ಲರು ತಾನೇ ನನ್ನನ್ನು ಬಿಟ್ಟು ಹೇಗೆ ಯುದ್ಧಮಾಡುವರು? ಜುಮೋಲಿಯಾ! ಇದಾಗ ಲಾರದು. ನಿನ್ನ ಈ ಪ್ರಾರ್ಥನೆಯನ್ನು ನಾನು ನಡೆಯಿಸಿಕೊಡಲಾರದವ ನಾಗಿರುವೆನು.

ಜುಮೋ—(ಚಮತ್ಕೃತನಾಗಿ) ರಾಜಕುಮಾರ! ಶತ್ರು ಸೈನ್ಯವು ಬಂದೇ ಬಿಟ್ಟಿತು, (ಕಿವಿಗೊಟ್ಟು) ಅವರ ಪದಧ್ವನಿಯು ಕೇಳಿ ಬರುತ್ತಿ ರುವುದು.

ಹೀಗೆ ಹೇಳಿ ಜುಮೋಲಿಯನು ತನ್ನ ವೇಣುವನ್ನು ಊದಲಾರಂಭಿ ಸಿದನು. ಸುಮಧುರವಾದ ಆ ವೇಣುಗಾನವು ರಾತ್ರಿಯ ಕೊನೆಯ ಯಾಮದ ಪ್ರಶಾಂತತೆಯನ್ನು ಭೇದಿಸಿಕೊಂಡು ಭಿಲ್ಲ ಸೈನಿಕರ ಕರ್ಣ ಕುಹರವನ್ನು ತುಂಬಿತು. ಆ ಕೂಡಲೆಯೇ ಭಿಲ್ಲ ಸೈನಿಕರೆಲ್ಲರೂ ತಟ್ಟನೆ ಎದ್ದು ನಿಂತು ಯುದ್ಧಕ್ಕೆ ಸಿದ್ಧರಾಗಿಬಿಟ್ಟರು.

ಬಳಿಕ ಜುಮೋಲಿಯನು ವೇಣುಗಾನವನ್ನು ನಿಲ್ಲಿಸಿ, ಲಲಿತನ ಕೈಗಳನ್ನು ಹಿಡಿದುಕೊಂಡು, ಲಲಿತಸಿಂಹ! ಈಗಳಾದರೂ ನನ್ನ ಪ್ರಾರ್ಥನೆ ಯನ್ನು ನೆರವೇರಿಸಿಕೊಡೋಣವಾಗಲಿ. ನೀನು ಮಟ್ಟಿಗೆ ಯುದ್ಧಕ್ಕೆ ಹೋಗಬೇಡ, ಎಂದು ಕಂಬನಿಗರೆಯುತ್ತಾ ಅಂಗಲಾಚಿದನು.

ಲಲಿತ —(ನಗುತ್ತಾ) ಮಿತ್ರನೇ! ನೀನು ನನ್ನನ್ನು ಅಧಿಕವಾಗಿ ಪ್ರೀತಿಸುತ್ತಿರುವೆಯಾದ ಕಾರಣ, ನನ್ನ ವಿಷಯದಲ್ಲಿ ಇಷ್ಟು ಭಯಪಡು ತ್ತಿರುವೆ. ಭಯವೇನೂ ಇಲ್ಲ. ನಾನು ಯುದ್ಧದಲ್ಲಿ ಸಾಯುವುದೂ ಇಲ್ಲ.

ಇವರಿಬ್ಬರೂ ಹೀಗೆ ಮಾತನಾಡುತ್ತಿರುವಲ್ಲಿ, ಮಹಾರಾಜಸಿಂಹನ ಸೈನ್ಯದವರು ಭಿಲ್ಲ ಸೈನ್ಯದವರ ಹತ್ತಿರಕ್ಕೆ ಬಂದು ಗರ್ಭನಿರ್ಭೇದವಾಗು ವಂತೆ ಜಯಧ್ವನಿಯನ್ನು ಮಾಡಿದರು. ಆ ಕೂಡಲೆಯೇ ಲಲಿತಸಿಂಹನ ಕಡೆಯವರೂ ಅದಕ್ಕಿಂತಲೂ ಅತಿಶಯವಾಗಿ ಜಯಧ್ವನಿಯಿಂದ ಪ್ರತ್ಯು ತ್ತರವಿತ್ತರು.

ಮತ್ತೆ ಮಾತನಾಡುವುದಕ್ಕೆ ಸಮಯವಿಲ್ಲದುದರಿಂದ ಜುಮೇಲಿಯನೂ ಲಲಿತಸಿಂಹನೂ ತಮ್ಮ ತಮ್ಮ ಕುದುರೆಗಳನ್ನೇರಿ ಕತ್ತಿಗಳನ್ನು ಝುಳಪಿಸುತ್ತಾ ಹೊರಟರು.

---

## ಅರವತ್ತನಾಲ್ಕನೆಯ ವಿಲಾಸ

ಯುದ್ಧವು ಪ್ರಾರಂಭವಾಗಿರುವುದು. ಪರಸ್ಪರ ಜಯಾಪೇಕ್ಷೆಯಿಂದ ಉಭಯಪಕ್ಷದವರಿಗೂ ಭಯಂಕರವಾದ ಯುದ್ಧವು ಸಿದ್ಧವಾಗಿರುವುದು. ಸೈನಿಕರ ಚೀತ್ಕಾರವೂ, ಶಸ್ತ್ರಾಸ್ತ್ರಗಳ ಝುಣತ್ಕಾರವೂ, ಬಿಲ್ಲುಗಳ ಟಂಕಾರವೂ, ಆನೆಗಳ ಘೀಟ್ಕಾರವೂ, ಕುದುರೆಗಳ ಹೇಷಾರವವೂ, ಸೇನಾಪತಿಗಳ ಉತ್ಸಾಹಧ್ವನಿಯೂ, ಏಟು ತಿಂದವರ ಆರ್ತನಾದವೂ, ಗುಂಡುಗಳ ಢಂ ಢಮಾರ್ ಶಬ್ದವೂ ಎಲ್ಲೆಲ್ಲಿಯೂ ವ್ಯಾಪಿಸಿ ಹೋಗಿರುವುವು.

ಏಕಾಕಾರವಾದ ಈ ಧ್ವನಿಗಳ ಮಧ್ಯದಲ್ಲಿ ಮಹಾರಾಜಸಿಂಹನ ಸೈನಿಕರು ಭಿಲ್ಲ ಸೈನಿಕರನ್ನು ಆಕ್ರಮಣಮಾಡಿರುವರು. ಮಹಾರಾಜಸಿಂಹನು ಮುಂಗಡೆಯಲ್ಲಿ ನಿಂತುಕೊಂಡು, 'ಹೊಡೆಯಿರಿ, ಬಡಿಯಿರಿ, ಕಡಿಯಿರಿ, ತಿವಿಯಿರಿ, ಇರಿಯಿರಿ,' ಎಂದು ಅಬ್ಬರಿಸುತ್ತಾ ತಾನೂ ಕೈಗೆ ಸಿಕ್ಕಿದ ಭಿಲ್ಲರನ್ನು ತನ್ನ ಕತ್ತಿಯಿಂದ ಕತ್ತರಿಸಿ ಹಾಕುತ್ತಿರುವನು. ಇಷ್ಟಾದರೂ ಭಿಲ್ಲರು ಅವುದಕ್ಕೂ ಹೆದರದೆ, ಮಹಾರಾಜಸಿಂಹನ ಸೈನ್ಯದ ಮೇಲೆ ಮದದಾನೆಗಳಂತೆ ನುಗ್ಗಿ ರಾಜಪುತ್ರರನ್ನು ಧ್ವಂಸಮಾಡಿಬಿಡುತ್ತಿರುವರು. ಒಂದೊಂದು ವೇಳೆ ಮಹಾರಾಜಸಿಂಹನ ಕಡೆಯವರು ಮುಂದೆ ನುಗ್ಗಿದರೆ, ಮತ್ತೊಂದು ವೇಳೆ ಲಲಿತಸಿಂಹನ ಕಡೆಯವರು ಮುಂದೆ ನುಗ್ಗಿ ಕೈಗೆ ಸಿಕ್ಕಿದವರನ್ನು ಚೂರು ಚೂರಾಗಿ ಕತ್ತರಿಸಿ ಹಾಕುತ್ತಿರುವರು. ಯುದ್ಧದಲ್ಲಿ ಪರ್ವತದಂತೆ ಸ್ಥಿರವಾಗಿ ನಿಂತಿರತಕ್ಕ ಭಿಲ್ಲರನ್ನು ತಳ್ಳಿಕೊಂಡು ಹೋಗಲು ರಾಜಪೂತರಿಗಾಗಲಿ, ಮೊಗಲರಿಗೇ ಆಗಲಿ ಸಾಮರ್ಥ್ಯವು ಸಾಲದೇ ಹೋಯಿತು.

ಜುಮೇಲಿಯನು ಸೇನಾಪತಿಯಾಗಿ ನಿಂತುಕೊಂಡು ಭಿಲ್ಲ ಸೈನಿಕರಲ್ಲಿ ವಜ್ರವ್ಯೂಹವನ್ನು ರಚಿಸಿರುವನು. ಹದಿನಾಲ್ಕು ವರ್ಷದ ಬಾಲ

ಕನು ಲಲಿತಸಿಂಹನಿಗೆ ಸೇನಾಪತಿಯಾಗಿ ನಿಂತುಕೊಂಡು ಯುದ್ಧದಲ್ಲಿ ತನ್ನ ಲೀಲಾವಿಲಾಸವನ್ನು ತೋರ್ಪಡಿಸುತ್ತಿರುವನೆಂದು ನಾವು ಈ ಗ್ರಂಥ ದಲ್ಲಿ ಬರೆವುದಾದರೆ, ನಮ್ಮ ವಾಚಕಮಹಾಶಯರೆಲ್ಲರೂ ಇದೊಂದು ಸುಳ್ಳಿನ ಸುದ್ದಿಯೆಂದು ಹೇಳಿದರೂ ಹೇಳಬಹುದು. ಈ ವಿಷಯದಲ್ಲಿ ನೀತಿಕಾರರು ಹೇಳಿರುವುದೇನೆಂದರೆ—

ಸಿಂಹಃಶಿಶುರಪಿ ನಿಪತತಿ । ಮದ ಮಲಿನ ಕಪೋಲ ಭಿತ್ತಿಷು ಗಜೇಷು ||
ಪ್ರಕೃತಿರಿಯಂ ಸತ್ತ್ವವತಾಂ । ನಖಲು ವಯ ಸ್ತೇಜಸೋ ಹೇತುಃ ||

ತಾತ್ಪರ್ಯ :—ಸಿಂಹವು ಮರಿಯಾಗಿದ್ದರೂ, ಮದದಿಂದ ಮದಿಸಿದ ಆನೆಗಳ ಮೇಲೆ ಬೀಳುವುದು. ಇದು ಪರಾಕ್ರಮಶಾಲಿಗಳ ಸ್ವಭಾವವೇ ಆಗಿರುವುದು. ಆದುದರಿಂದ ಶಕ್ತಿಗೆ ವಯಸ್ಸು ಎಂದಿಗೂ ಕಾರಣವಾಗಲಾರದು.

ಹಸ್ತೀ ಸ್ಥೂಲತನುಃ ಸಚಾಂಕುಶ ವಶಃ ಕಿಂ ಹಸ್ತಿಮಾತ್ರೋಂಕುಶಃ ।
ವಜ್ರೇಣಾಭಿ ಹತಾಃ ಪತಂತಿ ಗಿರಯಃ ಕಿಂ ಶೈಲ ಮಾತ್ರಂ ಪವಿಃ ||
ದೀಪೇ ಪ್ರಜ್ವಲಿತೇ ಪ್ರಣಶ್ಯತಿ ತಮಃ ಕಿಂ ದೀಪ ಮಾತ್ರಂ ತಮಃ ।
ತೇಜೋ ಯಸ್ಯ ವಿರಾಜತೇ ಸಬಲವಾ ಸ್ಥೂಲೇಷು ಕಃ ಪ್ರತ್ಯಯಃ ||

ತಾತ್ಪರ್ಯ :—ಆನೆಯು ದೊಡ್ಡದಾದ ಪ್ರಾಣಿ, ಅದು ಸಣ್ಣದಾದ ಅಂಕುಶಕ್ಕೆ ಅಧೀನವು. ಅಂಕುಶವು ಆನೆಯಷ್ಟು ದೊಡ್ಡದೇ? ವಜ್ರಾಯುಧದಿಂದ ಪರ್ವತಗಳು ಪುಡಿ ಪುಡಿಯಾಗಿ ಹೋಗಿರುವುವು. ವಜ್ರಾಯುಧವು ಪರ್ವತದಷ್ಟು ಗಾತ್ರವುಳ್ಳದೇ? ದೀಪವನ್ನು ಹಚ್ಚಿಸಿದ ಕೂಡಲೆ ಎಲ್ಲೆಲ್ಲಿಯೂ ಹರಡಿರುವ ಕತ್ತಲೆಯು ಮಾಯವಾಗಿ ಬಿಡುವುದು. ದೀಪವು ಕತ್ತಲೆಯಷ್ಟು ಹೆಚ್ಚಿನದೇ? ಲೋಕದಲ್ಲಿ ದೃಷ್ಟಾಂತವು ಹೀಗಿರುವುದರಿಂದ, ಆರಲ್ಲಿ ತೇಜಸ್ಸಿರುವುದೋ ಆತನೇ ಪರಾಕ್ರಮಿಯು. ದೊಡ್ಡದಾಗಿದ್ದ ಮಾತ್ರಕ್ಕೆ ಬಂದ ಭಾಗ್ಯವೇನು?

ಆದುದರಿಂದ ಜುಮೇಲಿಯನು ಚಿಕ್ಕವನಾಗಿದ್ದರೂ ಆತನು ಬಲು ಪರಾಕ್ರಮಶಾಲಿಯಾಗಿದ್ದನು. ಇಂತಹ ಜುಮೇಲಿಯನು ವಜ್ರವ್ಯೂಹವನ್ನು ರಚನೆಮಾಡಿರುವನು. ಅವರ ಮಧ್ಯದಲ್ಲಿ ಲಲಿತನು ನಿಂತಿರುವನು.

ಆತನ ಎಡಬಲಗಳಲ್ಲಿ ವೀರೇಂದ್ರನ ಶೈಲೇಂದ್ರರು ೫೦೦೦ ಕೆಚ್ಚೆದೆಯ ಕಟ್ಟಾಳುಗಳ ಸೈನ್ಯವನ್ನು ಇಟ್ಟುಕೊಂಡು ನಿಂತಿರುವರು. ಪುರ ಪ್ರಮುಖರು ತಮ್ಮ ತಮ್ಮ ಸೈನ್ಯದೊಡನೆ ವಜ್ರವ್ಯೂಹದ ಸೂಕ್ಷ್ಮಾಗ್ರ ಗಳಲ್ಲಿ ನಿಂತಿರುವರು. ವ್ಯೂಹದ ಅಕ್ಕಪಕ್ಕಗಳಲ್ಲಿ ನೂರಾರು ತೋಪು ಗಳು ಸಿದ್ಧಪಡಿಸಲ್ಪಟ್ಟಿರುವುವು. ಹಿಂಗಡೆಯಲ್ಲಿ ಗುರಿಯನ್ನು ಭೇದಿಸು ವುದರಲ್ಲಿ ದಕ್ಷರಾದ ಹತ್ತಾರುಸಾವಿರ ಭಿಲ್ಲರು ಬಿಲ್ಲುಗಳನ್ನೂ ಬಾಣ ಗಳನ್ನೂ ಹಿಡಿದುಕೊಂಡು ಸಮಯವನ್ನು ಕಾಯುತ್ತಿರುವರು. ಜುಮೇ ಲಿಯನು ಕುದುರೆಯ ಮೇಲೆ ಕುಳಿತುಕೊಂಡು ಎಲ್ಲೆಡೆಗಳಲ್ಲಿಯೂ ಸಂಚರಿಸುತ್ತಿರುವನು.

ರಜಪೂತರು ಈ ವ್ಯೂಹವನ್ನು ನೋಡಿ ಬೆರಗಾಗಿ, ಆವ ಕಡೆಯಿಂ ದಲೂ ವ್ಯೂಹದೊಳಗೆ ನುಗ್ಗಿ ಹೋಗುವುದಕ್ಕೆ ಸಾಧ್ಯವಾಗದೆ ದೂರ ದೂರವಾಗಿಯೇ ನಿಂತು ನೋಡುತ್ತಿರುವರು. ಮೊಗಲರು ಒಂದೊಂದು ವೇಳೆ ವ್ಯೂಹವನ್ನು ಭೇದಿಸುವುದಕ್ಕೆ ಮುಂದೆ ಬಂದು ಭಿಲ್ಲರ ಏಟನ್ನು ಸಹಿಸಲಾರದೆಯೇ ಹಿಂದಿರುಗಿ ಹೋಗುತ್ತಿರುವರು. ಆನೆಗಳ ತುಳಿತ ದಿಂದ ನೂರಾರು ಮಂದಿ ರಜಪೂತರು ರಣದೇವತೆಯ ಅಗ್ರಪೂಜೆಯಲ್ಲಿ ಬಲಿಯಾದರು. ನೂರಾರು ಮಂದಿ ಮೊಗಲರು ಭಿಲ್ಲರ ಯಮದಂಡ ದಂತಿರುವ ಗದೆಗಳ ಪ್ರಹಾರದಿಂದ ಚೆಂಡಿನಂತಾಗಿ ನೆಲದ ಮೇಲೆ ಉರುಳಿಹೋದರು.

ಬಾಣಪ್ರಯೋಗದಲ್ಲಿ ಅದ್ವಿತೀಯರೆನಿಸಿದ ಭಿಲ್ಲರು ತಮ್ಮ ತಮ್ಮ ಹಸ್ತಲಾಘವವನ್ನು ತೋರುತ್ತಿರುವರು. ರಜಪೂತರೂ ಬಾಣಪ್ರಯೋ ಗದಲ್ಲಿ ತಮ್ಮ ಅಸಮಸಾಹಸವನ್ನು ತೋರಬೇಕೆಂದು ಧನುಸ್ಸಿನ ಹೆದೆ ಯನ್ನು ಕಿವಿಯ ವರೆಗೂ ಎಳೆದು ಅದರಲ್ಲಿ ಬಾಣವನ್ನು ಹೂಡಿ ಶತ್ರುಗ ಳಿಗೆ ಗುರಿಯಿಟ್ಟು ಹೊಡೆಯುತ್ತಿರುವರು. ಭಿಲ್ಲರು ತಮ್ಮ ಕೈಚಳಕದಿಂದ ಬಾಣಗಳನ್ನು ಬಿಟ್ಟು ಶತ್ರುಗಳ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿ ಹಾಕುತ್ತಿರುವರು. ಒಂದೊಂದು ವೇಳೆ ಇಕ್ಕಡೆಗಳಿಂದಲೂ ಹೊರಟ ಬಾಣಗಳು ಅಂತರಾಳದಲ್ಲಿ ಒಂದಕ್ಕೊಂದು ತಗುಲಿ ಬೆಂಕಿಯ ಕಿಡಿಗಳು ಹೂಮಳೆಯಂತೆ ರಣಾಂಗಣವನ್ನು ಅಲಂಕರಿಸುತ್ತಿರುವುವು. ಒಂದೊಂದು

ವೇಳೆ ಧೂಮಕೇತುಗಳಂತೆ ಪುಂಖಾನುಪುಂಖವಾಗಿ ಹೊರಟಿರುವ ಭಿಲ್ಲರ ಬಾಣಗಳು ಶತ್ರುಗಳ ಸೈನ್ಯವನ್ನು ನುಗ್ಗಿ ಕೆಲವರ ತಲೆಗಳನ್ನೂ, ಕೆಲವರ ಕೈಗಳನ್ನೂ, ಕೆಲವರ ಕಾಲುಗಳನ್ನೂ ಬೇರ್ಪಡಿಸಿ ನೆಲದ ಮೇಲೆ ಕೆಡಹುತ್ತಿರುವುವು.

ಕೆಲವೆಡೆಗಳಲ್ಲಿ ಕತ್ತಿಗಳ ಪರಸ್ಪರಾಘಾತಗಳಿಂದ ರುಂಡಗಳು ಮುಂಡಗಳಿಂದ ಬೇರ್ಪಟ್ಟು ರಣಾಂಗಣದಲ್ಲಿ ಕೊಂಚಹೊತ್ತು ಹಾರಾಡಿ ನೆಲದ ಮೇಲೆ ಬಿದ್ದು ಹೋಗುತ್ತಿದ್ದುವು. ಇದನ್ನು ನೋಡಿದರೆ ಮೃತ್ಯು ದೇವತೆಯು ವಿನೋದದಿಂದ ಚೆಂಡಿನ ಆಟವನ್ನು ಆಡುತ್ತಿರುವಳೋ ಎಂದು ಊಹಿಸುವುದಕ್ಕೂ ಸಾಕಾಗಿದ್ದಿತು.

ಇದೇ ರೀತಿಯಲ್ಲಿ ಒಂದೆರಡು ಗಂಟೆಗಳ ಕಾಲದ ವರೆಗೂ ಯುದ್ಧವು ನಡೆಯಿತು. ಆದರೂ ರಜಪೂತ ಸೈನ್ಯವು ಆ ವಜ್ರವ್ಯೂಹವನ್ನು ಮಟ್ಟಿಗೆ ಭೇದಿಸಲು ಸಾಧ್ಯವಾಗಲಿಲ್ಲ. ವಜ್ರವ್ಯೂಹವನ್ನು ಭೇದಿಸುವುದಕ್ಕೆ ಬಂದ ರಜಪೂತರಾಗಲಿ, ಮೊಗಲರೇ ಆಗಲಿ, ಮತ್ತೆ ಹಿಂದಿರುಗಿ ತಮ್ಮ ಸೈನ್ಯದ ಕಡೆಗೆ ಹೋದವರೇ ಅಲ್ಲ.

ಇದನ್ನು ನೋಡಿ ಮಹಾರಾಜಸಿಂಹನು ಒಂದು ತೆರನಾಗಿ ಹೆದರಿದನು. ಬಳಿಕ ಭಿಲ್ಲರನ್ನು ಭೇದಿಸುವುದಕ್ಕೆ ಹೋಗಿ ಗಾಯಪಟ್ಟು ಹಿಂದಿರುಗಿದ ತನ್ನ ಸೈನ್ಯದವರನ್ನು ನೋಡಿ, ಮಹಾರಾಜಸಿಂಹನು ರೇಗಿ ರೇಗಿ ಬಿದ್ದು ಬಾಯಿಗೆ ಬಂದ ಹಾಗೆ ಬೈದನು. ಆದರೂ ಏನೂ ಪ್ರಯೋಜನವಾಗಲಿಲ್ಲ. ಇದರಿಂದ ಮಹಾರಾಜಸಿಂಹನು ತನಗೆ ಅಪಜಯವುಂಟಾಗುವುದೆಂದು ತಿಳಿದು, 'ಬಂದುದೆಲ್ಲಾ ಬರಲಿ, ಕೊನೆಯ ಪ್ರಯತ್ನವನ್ನಾದರೂ ಮಾಡಿ ನೋಡೋಣ' ಎಂದು ಸಿದ್ಧಾಂತಮಾಡಿಕೊಂಡವನಾಗಿ, ವಜ್ರವ್ಯೂಹದ ಸುತ್ತಲೂ ತನ್ನ ಸೈನ್ಯವು ಆಕ್ರಮಣಮಾಡುವಂತೆ ಸೇನಾನಾಯಕರಿಗೆ ಅಪ್ಪಣೆ ಮಾಡಿದನು. ಬಳಿಕ ತಾನೂ ವೀರಾವೇಶದಿಂದ ಮುಂದಕ್ಕೆ ನುಗ್ಗಿಕೊಂಡು ಹೊರಟನು. ಆಗ ಭಿಲ್ಲರ ಕಡೆಯಿಂದ ಬಾಣಗಳು ತಂಡ ತಂಡವಾಗಿ ಸುಯ್ ಎಂದು ನುಗ್ಗಿಕೊಂಡು ಬಂದು ಮಹಾರಾಜಸಿಂಹನ ಆನೆಗೆ ತಗುಲಿದುವು. ಕೂಡಲೆಯೇ

ರಾಜನ ಆನೆಯು ಯಾತನೆಯಿಂದ ಅರಚುತ್ತಾ ಹುಚ್ಚು ಹಿಡಿದಿದೆಯೋ ಎಂಬಂತೆ ತೋರಿದ ಕಡೆಗೆ ನುಗ್ಗಲಾರಂಭಿಸಿತು. ಇದನ್ನು ಹಿಡಿದು ನಿಲ್ಲಿಸುವುದಕ್ಕೆ ಆರಿಂದಲೂ ಸಾಧ್ಯವಾಗಲಿಲ್ಲ. ಕಟ್ಟಕಡೆಗೆ ರಾಜನ ಆನೆಯು ದಾರಿಯಲ್ಲಿ ಸಿಕ್ಕಿದವರನ್ನು ಸಂಹರಿಸುತ್ತಾ ರಜಪೂತರ ಸೈನ್ಯದ ಮಧ್ಯದಲ್ಲಿ ಬಂದು ಬಿದ್ದು ಬಿಟ್ಟಿತು.

ಮಹಾರಾಜಸಿಂಹನ ಆನೆಯ ದುರ್ವರ್ತನದಿಂದ, ಭಿಲ್ಲರ ವ್ಯೂಹ ರಚನೆಯು ಕೊಂಚವಾಗಿ ಸಡಲಿತು. ಕೂಡಲೆಯೇ ರಜಪೂತರು ವೀರೇಂದ್ರಸಿಂಹನನ್ನು ಆಕ್ರಮಣಮಾಡಿದರು. ವೀರೇಂದ್ರನು ನಿಸ್ಸಹಾಯ ನಾಗಿ ಬಲುಹೊತ್ತು ಶತ್ರುಗಳೊಡನೆ ಹೋರಾಡಿದ ಬಳಿಕ ಶಕ್ತಿಗುಂದಿದ ವನಾಗಿ ಲಲಿತಸಿಂಹನ ಕಡೆ ನೋಡಿದನು.

ವೀರೇಂದ್ರನ ದುರ್ದಶೆಯನ್ನು ನೋಡಿ ಲಲಿತಸಿಂಹನ ಮನವು ಕರಗಿತು. ತರುವಾಯ ಆತನು ಜುಮೇಲಿಯನನ್ನು ನೋಡಿ—ಸಖನೇ ಇನ್ನು ನಾನು ನಿನ್ನ ಆಜ್ಞೆಯನ್ನು ಪಾಲನ ಮಾಡಲಾರದವನಾಗಿರುವೆನು. ನನ್ನ ಪ್ರಾಣವನ್ನಾದರೂ ಕೊಟ್ಟು ವೀರೇಂದ್ರನನ್ನು ರಕ್ಷಿಸುವೆನು, ಇಲ್ಲ ವಾದರೆ ಅಲ್ಲಿಯೇ ಸಾಯುವೆನು, ಎಂದು ಹೇಳುತ್ತಾ ಅಂಬಿನ ವೇಗ ದಿಂದ ತನ್ನ ಕುದುರೆಯನ್ನು ಓಡಿಸಿಕೊಂಡು ವೀರೇಂದ್ರನಿದ್ದಲ್ಲಿಗೆ ಬಂದನು. ಜುಮೇಲಿಯನು ಲಲಿತನ ಮಾತಿಗೆ ಪ್ರತ್ಯುತ್ತರವಾಗಿ—ಲಲಿತಸಿಂಹ! ಏನು ಕೆಲಸಮಾಡುವೆ? ಎಂದು ಕೂಗಿಕೊಳ್ಳುತ್ತಿರುವಷ್ಟ ರೊಳಗಾಗಿ ಲಲಿತಸಿಂಹನು ಶತ್ರು ಸೈನ್ಯದೊಳಗೆ ನುಗ್ಗಿ ವೀರೇಂದ್ರ ಸಿಂಹನ ಹತ್ತಿರಕ್ಕೆ ಬಂದು ಬಿಟ್ಟಿದ್ದನು. ಜುಮೇಲಿಯನ ಕಾತರೋ ಕ್ತಿಗಳು ಅವನ ಕಿವಿಗೆ ಬೀಳಲೇ ಇಲ್ಲ.

---

## ಅರವತ್ತೈದನೆಯ ವಿಲಾಸ

ಜುಮೇಲಿಯನು ಒಂದು ಸಲ ಭಿಲ್ಲರ ವ್ಯೂಹವನ್ನು ಸುತ್ತಲೂ ನೋಡಿದನು. ಬಳಿಕ ಆತನು ನಿಟ್ಟುಸಿರನ್ನು ಬಿಟ್ಟು ಮುಖದ ಬೆವರನ್ನು ತೊಡೆದುಕೊಂಡು—ಭಿಲ್ಲ ಸೈನಿಕರೇ! ರಾಜಕುಮಾರನನ್ನು ರಕ್ಷಿಸಿರಿ

ರಕ್ಷಿಸಿರಿ, ಎಂದು ಗಟ್ಟಿಯಾಗಿ ಕೂಗಿಕೊಂಡನು. ಹೀಗೆ ಹೇಳಿ ಜುಮ್ಮೇಲಿಯನು ತನ್ನ ಕುದುರೆಯನ್ನು ಓಡಿಸಿಕೊಂಡು ಶತ್ರುಗಳ ಮಧ್ಯದಲ್ಲಿ ನುಗ್ಗಿಕೊಂಡು ಹೋದನು. ಆತನ ಹಿಂದೆ ೫೦೦೦ ಭಿಲ್ಲರೂ, ೨೦೦೦ ರಾಜಪುತ್ರರೊಡನೆ ಶೈಲೇಂದ್ರನೂ ಹೊರಟರು.

ಲಲಿತನು ಮಾಡಿದ ಅಚಾತುರ್ಯದಿಂದ ಭಿಲ್ಲರ ವ್ಯೂಹವು ಭಗ್ನವಾಯಿತು. ಮೊದಲು ಯುದ್ಧವು ಕ್ರಮವರಿತು ಹೇಗೆ ನಡೆಯಿಸಲ್ಪಟ್ಟಿದ್ದೋ, ವ್ಯೂಹವು ಭಗ್ನವಾದ ಮೇಲೆ ಆ ಕ್ರಮವು ಅಕ್ರಮವಾಗಿ ಹೋಯಿತು. ಸಿಕ್ಕಿದವರು ಸಿಕ್ಕಿದವರನ್ನು ಹೊಡೆಯುತ್ತಾ ಸಿಕ್ಕಿದ ಹಾಗೆ ಕೆಲಸಮಾಡ ತೊಡಗಿದರು. ಉಭಯ ಪಕ್ಷದವರೂ ಸೇರಿಹೋಗಿ ದಂಡಾದಂಡಿ, ತಲಾತಲಿ, ಕೇಶಾ ಕೇಶಿ, ಮುಷ್ಟೀ ಮುಷ್ಟಿ ಯುದ್ಧಮಾಡ ತೊಡಗಿದರು, ತೋಪುಗಳ ಹೊಗೆಗಳಿಂದಲೂ, ಜನರ ಕೋಲಾಹಲ ದಿಂದಲೂ ಆರ ಮಾತು ಆರಿಗೂ ಕೇಳದೆಯೂ, ಆರು ಆರಿಗೂ ಕಾಣಸದೆಯೂ ಘೋರವಾದ ದ್ವಂದ್ವ ಯುದ್ಧದಲ್ಲಿ ಉಭಯ ಪಕ್ಷದವರೂ ಸೇರಿ ಹೋಗಿರುವರು. ರಕ್ತವು ದರದರನೆ ಸುರಿದು ಯುದ್ಧರಂಗವನ್ನು ತೋಯಿಸಿ ಬಿಟ್ಟಿರುವುದು.

ಲಲಿತನು ವೀರೇಂದ್ರನನ್ನು ಕಾಪಿಡುವುದಕ್ಕಾಗಿ ಹೊರಟಿದ್ದನಷ್ಟೇ! ಅವನ ಉದ್ದೇಶವೂ ನೆರವೇರಲಿಲ್ಲ, ಅವನ ಪ್ರಯತ್ನವೂ ಫಲಿಸಲಿಲ್ಲ. ಲಲಿತನು ವೀರೇಂದ್ರನ ಬಳಿಗೆ ಹೋಗುವಷ್ಟರೊಳಗಾಗಿ, ವೀರೇಂದ್ರನು ಶತ್ರುಗಳಿಂದ ಆಹತನಾಗಿ ಕೆಳಗೆ ಬಿದ್ದು ಸಾಯುವುದರಲ್ಲಿದ್ದನು. ಆತನು ಲಲಿತನನ್ನು ನೋಡಿ—ಮಿತ್ರನೇ! ನಾನು ಬದುಕುವ ಹಾಗಿಲ್ಲ. ನೀನಾದರೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳು. ನಾನು ಸತ್ತರೆ, ದೇಶಕ್ಕೇನೂ ನಷ್ಟವಿಲ್ಲ; ನೀನು ಸತ್ತರೆ ಸರ್ವನಾಶವೇ ಆಗಿ ಹೋಗುವುದು, ಎಂದು ಕ್ಷೀಣಸ್ವರದಿಂದ ಹೇಳಿದನು.

ಇದನ್ನು ಕೇಳಿದ ಕೂಡಲೆ, ಲಲಿತನಿಗೆ ಜ್ಞಾನೋದಯವಾಯಿತು. ಲಲಿತನು ತಾನು ಮಾಡಿದ ಕೆಲಸವು ಅಪಾಯಕರವಾದುದೆಂದು ತಿಳಿದು ಪಶ್ಚಾತ್ತಾಪ ಪಡುವುದರೊಳಗಾಗಿ, ಶತ್ರುಗಳು ಓಡಿಬಂದು ಆತನನ್ನು

ಆಕ್ರಮಣಮಾಡಿ ಗಟ್ಟಿಯಾಗಿ ಜಯ ಘೋಷವನ್ನು ಮಾಡಿದರು. ಮಹಾರಾಜಸಿಂಹನು ದೂರದಿಂದಲೇ ಇದೆಲ್ಲವನ್ನೂ ನೋಡಿ ಸಿಂಹದಂತೆ ತಟ್ಟನೆ ಲಲಿತನಿದ್ದಲ್ಲಿಗೆ ಬಂದು ಬಿಟ್ಟನು. ಇದನ್ನು ನೋಡಿದ ಕೂಡಲೆ ಲಲಿತನು ಎದೆಗೆಟ್ಟವನಾಗಿ, ಆತ್ಮರಕ್ಷಣೆಯಾಗುವುದು ದುರ್ಲಭವೆಂದು ತಿಳಿದು ಹಿಂದೆ ಮುಂದೆ ನೋಡಲಾರಂಭಿಸಿದನು. ಅಷ್ಟೆನ್ನುವುದರೊಳಗಾಗಿ ಜುಮೇಲಿಯನು ತನ್ನ ಅಂಗರಕ್ಷಕರೊಡನೆ ಶತ್ರುಗಳನ್ನು ಭೇದಿಸಿಕೊಂಡು ಲಲಿತನ ಹತ್ತಿರಕ್ಕೆ ಬಂದನು. ಆಗ ಜುಮೇಲಿಯನ ಸಹಜವಾದ ಸೌಂದರ್ಯವು ತಾನೇ ತಾನಾಗಿ ಪ್ರಕಾಶಿಸುತ್ತಿದ್ದಿತು.

ರಜಪೂತರು ಜುಮೇಲಿಯನ ರಭಸವನ್ನು ನೋಡಿ ಹೆದರಿದವರಾಗಿ ಕೊಂಚ ಹೊತ್ತು ಹಿಂದೆ ಸರಿದು ನಿಂತರಾದರೂ, ಜುಮೇಲಿಯನನ್ನು ಹಿಡಿದು ನಿರ್ಬಂಧಿಸುವುದಕ್ಕಾಗಿ ತಮ್ಮ ಶಕ್ತಿಯೆಲ್ಲವನ್ನೂ ವೆಚ್ಚಮಾಡಿ ನೋಡಿದರು. ಪರ್ವತದಿಂದ ವೇಗವಾಗಿ ಉರುಳುತ್ತಿರುವ ಗಂಗಾಪ್ರವಾಹವನ್ನು ಅಡ್ಡಗಿಸುವುದು ಹೇಗೆ ಅಸಾಧ್ಯವೋ, ಹಾಗೆಯೇ ಜುಮೇಲಿಯನ ಆರಭಟೆಯನ್ನು ಇದಿರಿಸಲು ಶತ್ರುಗಳಿಗೆ ಸಾಧ್ಯವಾಗದೇ ಹೋಯಿತು.

ಲಲಿತನು ಬೆರಗಾಗಿ ನಿಂತಿರುವನು. ಆತನು ಜುಮೇಲಿಯನ ಅನ್ಯಾದೃಶವಾದ ಶಕ್ತಿಸಾಹಸಗಳನ್ನೂ, ದಿವ್ಯ ತೇಜಸ್ಸನ್ನೂ ನೋಡಿ ದಿಕ್ಕು ತೋರದವನಾಗಿ ಆತ್ಮರಕ್ಷಣೆಯ ಕಡೆಗೆ ಕೊಂಚವೂ ಗಮನ ಕೊಡದೆಯೇ ಸುಮ್ಮನೆ ನಿಂತುಬಿಟ್ಟನು. ಇದನ್ನು ಕಂಡುಕೊಂಡು ಶತ್ರುವೊಬ್ಬನು ಶನ್ನ ಕತ್ತಿಯನ್ನು ಲಲಿತನ ಮೇಲೆ ಬೀಸುವುದರಲ್ಲಿದ್ದನು. ಜುಮೇಲಿಯನು ಅಷ್ಟು ಹೊತ್ತಿಗೆ ಓಡಿ ಬಂದು ಆ ಕತ್ತಿಯನ್ನು ಅಡ್ಡಗಿಸದಿದ್ದರೆ, ಲಲಿತನ ಪಾಡು ನಾಯಿ ಪಾಡಾಗಿ ಹೋಗಿ ಬಿಡುತ್ತಿದ್ದಿತು.

ಜುಮೇಲಿಯನು ಲಲಿತನನ್ನು ಪ್ರಾಣಾಪತ್ತಿನಿಂದ ಉದ್ಧಾರಮಾಡಿ ಮತ್ತೊಂದೆಡೆಗೆ ಕರೆದುಕೊಂಡು ಹೋಗುವುದರಲ್ಲಿದ್ದನು. ಆಗ ಮಹಾರಾಜಸಿಂಹನು ಎಲ್ಲಿಂದಲೋ ಹಾರಿ ಬಂದು ಲಲಿತನನ್ನು ಮುತ್ತಿದನು. ಲಲಿತನು ಉನ್ಮತ್ತನಂತಾಗಿ ಶಕ್ತಿಮೀರಿ ಶತ್ರುವಿನೊಡನೆ ಹೋರಾಡಿದನು.

ಲಲಿತನನ್ನು ಬಿಡಿಸಿಕೊಳ್ಳುವುದಕ್ಕಾಗಿ ಜುಮೇಲಿಯನು ತೋರಿದ ಸಾಹಸವು ಅತ್ಯದ್ಭುತವಾದುದು.

ದುರ್ದೈವಯೋಗದಿಂದ ಲಲಿತನಿಗೆ ಇದರಿಂದ ಪ್ರಯೋಜನವೇನೂ ಆಗಲಿಲ್ಲ. ಲಲಿತನು ಶತ್ರುಗಳ ಪ್ರಹಾರದಿಂದ ಶಕ್ತಿಗುಂದಿದವನಾಗಿ ಬಸವಳಿದು ನೆಲದ ಮೇಲೆ ಬಿದ್ದು ಬಿಟ್ಟನು. ಆಗೆ ಜುಮೇಲಿಯನು ತನ್ನ ಕಡೆಯುವರನ್ನು ಕೂಗಿ—ಲಲಿತನನ್ನು ಎತ್ತಿಕೊಂಡು ಹೋಗಿ ನಿರಪಾಯವಾದ ಸ್ಥಲದಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳಿರಿ, ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಅಲ್ಲದೆಯೂ, ‘ ನಾನು ಇಲ್ಲಿಯೇ ಇದ್ದು ಪಿತೃಘಾತಿಯ ರಕ್ತವನ್ನು ನನ್ನ ಬಾಯಾರಿದ ಅಸ್ತ್ರಕ್ಕೆ ಕುಡಿಸಬೇಕೆಂದಿರುವೆನು. ಈ ನರರಾಕ್ಷಸನನ್ನು ನಾನು ಸಂಹರಿಸಿದಲ್ಲದೆ, ರಣಾಂಗಣದಿಂದ ಹೊರಗೆ ಬರಲಾರೆನು,’ ಎಂದು ವೀರಪ್ರತಿಜ್ಞೆಯನ್ನು ಮಾಡಿ ನಿಂತನು. ಬಳಿಕ ನಾವಿರಾರು ಭಿಲ್ಲರು ಲಲಿತನನ್ನು ಎತ್ತಿಕೊಂಡು ಹೋದರು. ಜುಮೇಲಿಯನು ಮಹಾರಾಜಸಿಂಹನೊಡನೆ ಹೆಣಗಾಡುವುದಕ್ಕೆ ಮುಂದೆ ನುಗ್ಗಿದನು.

---

## ಅರವತ್ತಾರನೆಯ ವಿಲಾಸ

ಮಹಾರಾಜಸಿಂಹನು ಜುಮೇಲಿಯನನ್ನು ನೋಡಿದ ಕೂಡಲೆ, ಆ ಸ್ಥಲವನ್ನು ಬಿಟ್ಟು ಬೇರೊಂದೆಡೆಗೆ ಹೊರಟುಹೋಗುವುದರಲ್ಲಿದ್ದನು. ರಾಜನ ಈ ಲಕ್ಷಣವನ್ನು ಕಂಡುಕೊಂಡು, ಜುಮೇಲಿಯನು ಆತನ ಇದಿರಿನಲ್ಲಿ ಬಂದು ನಿಂತು—ರಾಕ್ಷಸ, ನರರಾಕ್ಷಸ! ಈಗೆ ನಿನಗೆ ಸರಿಯಾದ ದಂಡವನ್ನು ವಿಧಿಸುವುದಕ್ಕಾಗಿ ನಾನೇ ಬಂದಿರುವೆನು, ಎಂದ ಮಾತನ್ನು ಕೇಳಿ ಮಹಾರಾಜಸಿಂಹನು ತನ್ನ ಕುದುರೆಯನ್ನು ಹಿಡಿದು ನಿಲ್ಲಿಸಿ—ಎಲಾ ಹಾಲುಗಲ್ಲದ ಭಿಲ್ಲರ ಬಾಲ! ಮಹಾರಾಜಸಿಂಹನೆಂಥವನೆಂಬುದನ್ನು ನೀನು ಇನ್ನೂ ಅರಿತವನಾಗಿಲ್ಲ; ಎಚ್ಚರಿಕೆ! ಎಂದು ಉತ್ತರವಿತ್ತನು.

ಜುಮೇಲಿಯನು—(ತಿರಸ್ಕಾರದಿಂದ) ತಂದೆಯನ್ನು ಕೊಂದ ನಿನ್ನಂತಹ ಮಾರವಾಡದ ನರರಾಕ್ಷಸನನ್ನು ಕಾಣದವರಾರು?

ಮಹಾರಾಜಸಿಂಹನು ಈಯುಪಮಾನವನ್ನು ತಡೆಯಲಾರದವನಾಗಿ ಜುಮೇಲಿಯನನ್ನು ಆಕ್ರಮಣಮಾಡಿ—ಮಗು! ನಿನ್ನನ್ನು ಕೊಂದು ನನ್ನ ಕೈಗಳನ್ನು ಕಳಂಕಿತವನ್ನಾಗಿ ಮಾಡಿಕೊಳ್ಳಲಾರೆನು. ಇನ್ನೂ ಬದುಕ ಬೇಕೆಂಬ ಆಸೆ ನಿನಗಿರುವುದಾದರೆ ಈಗಳೇ ಓಡಿಹೋಗು. ಇನ್ನು ನಾವು ಆರಿಗಾಗಿ ಯುದ್ಧಮಾಡಬೇಕು? ಲಲಿತನು ಮಡಿದು ಬಿದ್ದಿರುವನು; ಎಂದು ನುಡಿದನು.

ಜುಮೇಲಿಯನು ಆತನ ಮಾತಿಗೆ ಆವ ಪ್ರತ್ಯುತ್ತರವನ್ನೂ ಕೊಡದೆ, ಮಹಾರಾಜಸಿಂಹನ ಕಪಾಲಕ್ಕೆ ಘಳೀರೆಂದು ಹೊಡೆದನು. ಮಹಾರಾಜನು ಇದನ್ನು ನೋಡಿ ನಕ್ಕು—ಮಗು! ನಾನು ನಿನಗೆ ಪ್ರತಿಯಾಗಿ ಮಾಡಬೇಕೆಂದರೆ, ನಿನ್ನನ್ನು ತಿಗಣೆಯಂತೆ ಹೊಸಕಿಬಿಡಬಲ್ಲೆನು, ಎಂದು ಅಬ್ಬರದ ಮಾತನಾಡಿದನು.

ಜುಮೇ—ಪಿತೃಘಾತುಕ! ನನ್ನನ್ನು ಕೆಣಕಿ ನೀನು ಬದುಕ ಬಲ್ಲೆಯಾ?

ಮಹಾ—ಬಾಯ ಮುಚ್ಚು. ನಿನ್ನ ಹರಟೇ ಸಾಕು. ಹೆಚ್ಚು ಮಾತನಾಡಿದರೆ—

ಜುಮೇ—ಹೆಚ್ಚು ಮಾತನಾಡಿದರೆ ನಿನ್ನನ್ನು ಸಿಗಿದು ತೋರಣ ಕಟ್ಟಿ ಬಿಡುವೆನು. ನನ್ನನ್ನು ಆರೆಂದು ತಿಳಿದಿರುವೆ? ನಾನು ವೃದ್ಧನಾದ ಮಹಾರಾಣನಲ್ಲ.

ಮಹಾ—(ಹಲ್ಲುಮುಡಿ ಕಚ್ಚಿ) ಬಾಯಿಗೆ ಬಂದ ಹಾಗೆ ಬಗುಳ ಬೇಡ, ಕಂಡೆಯಾ? ನನ್ನನ್ನು ಆವ ಧೀರನಾದ ಗಂಡಸೂ ಕೊಲ್ಲಲಾರನು. ಹೀಗೆಂದ ಮೇಲೆ, ನಿನ್ನಂತಹ ಪುಡಿಹಿಟ್ಟುಗಳಿಂದಾಗುವುದೇನು, ಗೊತ್ತಾಯಿತೇ?

ಜುಮೇ—ನರಾಧಮ! ನಾನು ಪುರುಷನಲ್ಲ. ನಾನೇ ಭಿಲ್ಲರ ಕಾತ್ಯಾಯನಿಯೆನಿಸಿದ ಆ ಹುಚ್ಚಿ.

ಮಹಾರಾಜಸಿಂಹನು ಈ ಮಾತನ್ನು ಕೇಳಿದನೋ ಇಲ್ಲವೋ ಹತ್ತು ಹಜ್ಜೆಗಳು ಹಿಂದಕ್ಕೆ ಸರಿದು ಹೋದನು. ಆ ಕೂಡಲೆ ಅವನ ಕಣ್ಣಿದಿರಿನಲ್ಲಿ ಆ ಸ್ವಪ್ನವು ತಾಂಡವವಾಡಲಾರಂಭಿಸಿತು. ಬಳಿಕ ಅವನ ಕೈಯಿಂದ ಕತ್ತಿಯು ಕಳಚಿ ಬೀಳುವುದರಲ್ಲಿದ್ದಿತು. ಆದರೂ ಆತನು ತನ್ನ ಶಕ್ತಿಯನ್ನು ಒಟ್ಟು ಗೂಡಿಸಿಕೊಂಡು—ನೀನು ನಿಜವಾಗಿಯೂ ಕಾತ್ಯಾಯನಿಯೇ ಆಗಿದ್ದರೂ, ನಾನು ಮಟ್ಟಿಗೆ ನಿನ್ನ ಕೈಯಿಂದ ಸಾಯಲಾರೆನು. ಕಾರಣವೇನೆಂದರೆ—ನನಗೆ ಸ್ತ್ರೀಯಿಂದಲೂ ಮರಣವಿಲ್ಲ, ಎಂದು ಮಾತನಾಡಿದನು.

ಜುಮೇ—ನಾನು ಗಂಡಸಲ್ಲ; ಇಂದಿನ ವರೆಗೂ ನನ್ನನ್ನು ಆರೂ ಹೆಂಗುಸೆಂದು ತಿಳಿದವರೇ ಇಲ್ಲ, ಎಂದ ಮೇಲೆ ನಾನು ಗಂಡಸೂ ಅಲ್ಲ, ಹೆಂಗುಸೂ ಅಲ್ಲ. ನಾನು ನಿನಗೆ ಪುಲ್ಲಿಂಗವಾಗಿಯೂ ಸ್ತ್ರೀಲಿಂಗವಾಗಿಯೂ ಇರುವ ಮೃತ್ಯುವು. ನನ್ನಿಂದಲೇ ನಿನಗೆ ಮರಣವುಂಟಾಗತಕ್ಕುದು ದೈವೇಚ್ಛೆ, ದೈವಲೀಲೆ, ದೈವಮಾಯೆ. ಇದು ಎಂದೆಂದಿಗೂ ವ್ಯರ್ಥವಾಗದ ಕಾಲಜ್ಞಾನವು.

ಇದನ್ನು ಕೇಳುತ್ತಿರುವಾಗಲೇ, ಮಹಾರಾಜಸಿಂಹನ ಕಣ್ಣುಗಳಲ್ಲಿ ಕತ್ತಲೆಯು ಕವಿದುಕೊಂಡು ಬಂದಿತು. ಆದರೂ ಆತನು ನಿಮಿಷಮಾತ್ರದಲ್ಲಿ ಚೇತರಿಸಿಕೊಂಡು ರಾಕ್ಷಸೀಶಕ್ತಿಯನ್ನು ತಾಳಿದವನಾಗಿ, ಒಂದೇ ಹಾರು ಹಾರಿ ಜುಮೇಲಿಯನ ಕೇಶರಾಶಿಯನ್ನು ಹಿಡಿದು ಆತನ ತಲೆಯನ್ನು ಬಗ್ಗಿಸಿ ಅದನ್ನು ಕತ್ತರಿಸಿ ಬಿಡುವುದಕ್ಕಾಗಿ ಕತ್ತಿಯನ್ನೆತ್ತಿದನು.

ದೈವಮಾಯೆಯು ಮಾನವನಿಗೆ ಅ ಗೋ ಚ ರ ವಾ ದು ದು ಮೇಲಕ್ಕೆತ್ತಿದ್ದ ಕತ್ತಿಯು ಕೆಳಗೆ ಬರುವುದರೊಳಗಾಗಿ ಮಹಾರಾಜಸಿಂಹನು ಚೀತ್ಕಾರಮಾಡುತ್ತಾ ಕುದುರೆಯಿಂದ ಕೆಳಗೆ ದುಡುಪ್ಪೆಂದು ಬಿದ್ದನು. ಕೂಡಲೆಯೇ ಜುಮೇಲಿಯನು ತನ್ನ ಸೊಂಟದಿಂದ ಕಠಾರಿಯನ್ನು ಹೊರಗೆ ತೆಗೆದು—ನಿನ್ನಂತಹ ಪರಮ ಚಂಡಾಲರು ಈ ಲೋಕದಲ್ಲಿರಬಾರದು. ನಿನ್ನಂತಹವರಿಗೆ ನರಕವೇ ಸರಿಯಾದ ಸ್ಥಲವು, ಎಂದು ಹೇಳುತ್ತಾ ಮಹಾರಾಜಸಿಂಹನ ಎದೆಯಲ್ಲಿ ಕಠಾರಿಯನ್ನು ಬಲವಾಗಿ

ನಟ್ಟನು. ಬಳಿಕ ರಜಪೂತ ಸೈನ್ಯವು ಹಾಹಾಕಾರಮಾಡುತ್ತಾ ಹಿಂದಕ್ಕೆ ಸರಿಯಿತು. ಕೂಡಲೇ ಭಿಲ್ಲ ಸೈನ್ಯವು ಜಯಧ್ವನಿ ಮಾಡಿತು.

ಜುಮೇಲಿಯನು ರಾಜ್ಯಕ್ಕೆ ಕಂಟಕ ಸ್ವರೂಪನಾಗಿದ್ದ ಮಹಾರಾಜ ಸಿಂಹನನ್ನು ಯಮನ ರಾಜಧಾನಿಗೆ ಅತಿಥಿಯನ್ನಾಗಿ ಕಳುಹಿದ ಬಳಿಕ, ಶಸ್ತ್ರಾಘಾತದಿಂದ ನರಳುತ್ತಿದ್ದ ಲಲಿತಸಿಂಹನ ಬಳಿಗೆ ಬಂದು, ಆತನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕಣ್ಣೀರ ಸುರಿಸಲಾರಂಭಿಸಿದಳು. ಜುಮೇಲಿಯನು ಬಲು ಹೊತ್ತು ಮೌನದಿಂದ ಇದ್ದ ಬಳಿಕ ಲಲಿತನನ್ನು ಕುರಿತು—ನಾಥ! ಒಂದು ಸಲವಾದರೂ ನನ್ನೊಡನೆ ಮಾತನಾಡು. ಈ ಯುದ್ಧರಂಗದಲ್ಲಿ ಒಂದು ಕ್ಷಣವಾದರೂ ನಿನ್ನನ್ನು ಆದರಿಸುವುದಕ್ಕೆ ನನಗೆ ಸಮಯವೇ ದೊರೆಯಲಿಲ್ಲ. ಈಯಪರಾಧವನ್ನು ಮನ್ನಿಸು, ಎಂದು ವಿನಯದಿಂದ ಮಾತನಾಡಿದಳು.

ರಕ್ತಸ್ರಾವದಿಂದ ಶಕ್ತಿಹೀನನಾಗಿ ಮೂರ್ಛೆಗೊಂಡಿದ್ದ ಲಲಿತನು ಎಚ್ಚತ್ತು ಕಣ್ಣು ತೆರೆದು ನೋಡಿದನು. ಜುಮೇಲಿಯನು ತನ್ನನ್ನು ಉಪಚರಿಸುತ್ತಿರುವುದನ್ನು ನೋಡಿ—ಜು-ಮೇ-ಲಿ-ಯಾ! ಎಂದು ಕ್ಷೀಣ ಸ್ವರದಿಂದ ಮಾತನಾಡಿದನು.

ಜುಮೇ—(ಕಂಬನಿಗರೆದು) ಪ್ರಭೂ! ನಾನು ತಮ್ಮ ಚರಣ ದಾಸಿಯಾದ ಕಾತ್ಯಾಯನಿ.

ಲಲಿತ—(ಕಣ್ಣುತೆರೆದು) ಕಾ-ತ್ಯಾ-ಯ-ನಿ!

ಹೀಗೆ ಹೇಳಿ ಲಲಿತನು ಮತ್ತೆ ಕಣ್ಣು ಮುಚ್ಚಿದನು. ಕಾತ್ಯಾಯನಿಯು ಗೋಳೋ ಎಂದು ಅಳುತ್ತಾ—ಪತಿಯೆ! ಒಂದು ಮಾತನ್ನಾದರೂ ಆಡಬಾರದೇ! ನಾನು ನಿನ್ನನ್ನು ಪಡೆದುಕೊಂಡಿದ್ದರೂ, ನೀನು ಮಟ್ಟಿಗೆ ನನಗೆ ದುರ್ಲಭನಾದೆಯಲ್ಲಾ! ಎಂದು ಗದ್ಗದ ಸ್ವರದಿಂದ ಮಾತನಾಡಿದಳು.

ಲಲಿತನು ಮತ್ತೆ ಕಣ್ಣು ತೆರೆದು ನೋಡಿ, ಅತಿ ಪ್ರಯಾಸದಿಂದ ಮಾತನಾಡಿದನು:—

" ಜುಮೇಲಿಯಾ ! ನನಗೆ ಆಗಿಂದಾಗ ಜುಮೇಲಿಯನೂ ಕಾತ್ಯಾಯನಿಯೂ ಒಂದೇ ಎಂದು ಹೊಳೆಯುತ್ತಿದ್ದಿತು. ಆದರೆ ಅದನ್ನು ನಾನು ದೃಢಪಡಿಸಲಾರದವನಾಗಿದ್ದೆನು. ಕಾತ್ಯಾಯನಿ! ಈ ವಿಷಯವು ನನಗೆ ಮೊದಲೇ ಗೊತ್ತಿದ್ದಿದ್ದರೆ, ನಾನು ಖಂಡಿತವಾಗಿಯೂ ಸಾಯುವುದಕ್ಕೆ ಮುಂದುವರಿದು ಬರುತ್ತಿರಲಿಲ್ಲ. ಈಗ ಎಲ್ಲವೂ ಕೈಮೀರಿ ಹೋಗಿರುವುದು. ಆದರೆ ನನ್ನ ಲಾವಣ್ಯ— "

ಮುಂದೆ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಆದರೆ ಪ್ರಾಣವಾಯು ಮಟ್ಟಿಗೆ ಹೊರಟೇ ಹೋಯಿತು. ಬಳಿಕ ಕಾತ್ಯಾಯನಿಯು ಇತಿ ಕರ್ತವ್ಯತಾ ಮೂಢೆಯಾಗಿ ಲಲಿತನ ಮೇಲೆ ಬಿದ್ದು ಹೊರಳಾಡಿ ಹೋದಳು.

ಇನ್ನು ಆ ಜುಮೇಲಿಯನಿಲ್ಲ; ಇನ್ನು ಆ ಭಿಲ್ಲರ ಅಜೇಯ ಸೇನಾಪತಿಯಿಲ್ಲ. ಈಗ ಆ ಸೇನಾಪತಿಯು—ಗಂಡನನ್ನು ಕಳೆದುಕೊಂಡ ಕಾತ್ಯಾಯನಿಯು, ವಿಧವೆಯಾಗಿ ಸ್ವಾಮಿಯ ಪಾದ ಮೂಲದಲ್ಲಿ ತಲೆಯಿಟ್ಟುಕೊಂಡು ವ್ಯಸನದಿಂದ ಮಗುವಿನಂತೆ ಅತ್ತು ಅತ್ತು ಸೋತು ಹೋಗಿ ಬಿದ್ದಿರುವಳು. ಎಷ್ಟು ವಿದ್ಯಾಭ್ಯಾಸ ಮಾಡಿದರೆ ತಾನೇ ಏನು? ಎಷ್ಟು ಲೋಕಾನುಭವವನ್ನು ಪಡೆದುಕೊಂಡಿದ್ದರೆ ತಾನೇ ಏನು? ಎಷ್ಟು ವಿವೇಕ ವೈರಾಗ್ಯಗಳಿಂದ ಶೋಭಿಸುತ್ತಿದ್ದರೆ ತಾನೇ ಏನು? ಸ್ತ್ರೀಯಲ್ಲಿರುವ ಸ್ತ್ರೀತ್ವವು ಹೋಗುವುದೆಂಪರೇನು? ಹತ್ತಿರದಲ್ಲಿ ನಿಂತಿದ್ದ ಭಿಲ್ಲ ಸೈನಿಕರು ಈ ದೃಶ್ಯವನ್ನು ನೋಡಿ ವಿಸ್ಮಿತರಾಗಿ ಬೊಂಬೆಯಂತೆ ನಿಂತುಬಿಟ್ಟರು.

ಲಲಿತನು ಮಡಿದ ಸುದ್ದಿಯನ್ನು ಕೇಳಿ, ಭಿಲ್ಲ ಸೈನಿಕರೂ ಅವರ ಮಿತ್ರರಾದ ರಜಪೂತ ಸೈನಿಕರೂ ಪುತ್ತೆ ಯುದ್ಧವನ್ನು ಮಾಡುವುದಕ್ಕೆ ಇಷ್ಟಪಡದವರಾಗಿ ಹಿಂಪಕ್ಕೆ ಸರಿದು ಹೋದರು.

ಈ ಸಮಯದಲ್ಲಿ ಮಹಮ್ಮದ ತೋಕೀಖಾನನು ತನ್ನ ಸೈನ್ಯವನ್ನು ಒಟ್ಟುಗೂಡಿಸಲಾರಂಭಿಸಿದನು. ಆಗ ರಣಕ್ಷೇತ್ರದಲ್ಲಿ ಅದೊಂದು ವಿಚಿತ್ರ ಘಟನೆಯುಂಟಾದುದು. ಅದು ಮುಂದೆ ಗೊತ್ತಾಗುವುದು.

---

## ಅರವತ್ತೇಳನೆಯ ವಿಲಾಸ

ಉಭಯ ಪಕ್ಷದವರ ರಕ್ತಸ್ರಾವದಿಂದ ಕೆಸರಾಗಿ ಹೋಗಿರುವ, ಅಂಗೋಪಾಂಗಗಳನ್ನು ಕಳೆದುಕೊಂಡು ಸಂಕಟದಿಂದ ಆರ್ತನಾದ ಮಾಡುತ್ತಿರುವ ಯೋಧರ ಯುದ್ಧರಂಗದಲ್ಲಿ ಕಾತ್ಯಾಯನಿಯು ತನ್ನ ಪತಿಗಾಗಿ ಅಳುತ್ತಿರುವಳು. ಆಕೆಗೆ ಬಾಹ್ಯಪ್ರಪಂಚದ ಜ್ಞಾನವೇ ವಿಲೋಪಿಸಿರುವುದು. ಆಕೆಯು ಯುದ್ಧರಂಗದಲ್ಲಿ ಏನು ನಡೆಯುತ್ತಿರುವುದೆಂಬುದನ್ನು ಅರಿಯದೆಯೇ ತನ್ನ ಪತಿಯ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಗೋಳೋ ಎಂದು ಅಳುತ್ತಿರುವಳು.

ಈ ಸಮಯದಲ್ಲಿ ಆರೋ ಬಂದು ಬೆನ್ನ ಮೇಲೆ ಕೈಯಿಟ್ಟು— ಜುಮೇಲಿಯಾ! ಎಂದು ಕೂಗಿದಂತಾಯಿತು. ಇದು ಆಕೆಗೆ ಕೇಳಿಸಲಿಲ್ಲ. ಮತ್ತೆ, 'ಕಾತ್ಯಾಯನಿ' ಎಂಬ ಶಬ್ದವು ಕೇಳಿಬರಲಾಗಿ, ಆಕೆಯು ತಲೆಯೆತ್ತಿ ನೋಡಿದಳು. ಬಳಿಯಲ್ಲಿ ರಾಜಪುತ್ರಯೋಧನೊಬ್ಬನು ನಿಂತಿದ್ದನು. ಕಾತ್ಯಾಯನಿಯು ಆತನನ್ನು ಗುರುತಿಸಲಾರದೇ ಹೋದಳು.

ಯೋಧ—ಕಾತ್ಯಾಯನಿ! ನಾನು—ಅಜಯಸಿಂಹ. ನಾನು-ಪರಮಾನಂದ ಸ್ವಾಮಿ. ನಾನು ನಿನಗಾಗಿ ಇಲ್ಲಿಯ ವರೆಗೂ ಯುದ್ಧ ಮಾಡುತ್ತಿದ್ದೆನು.

ಕಾತ್ಯಾ—(ಕಂಬನಿಗರೆದು) ತಂದೆಯೇ! ನನಗೆ ಸರ್ವನಾಶವಾಗಿ ಹೋಗಿರುವುದು.

ಪರಮಾ—ನನಗೆ ಸರ್ವನಾಶವಾಗಲಿಲ್ಲವೇ? ಆದರೂ ನಾನು ಮಗುವಿನಂತಾಗಲಿ, ಹೆಂಗುಸಿನಂತಾಗಲಿ ಅಳುತ್ತಿಲ್ಲ. ಕಾತ್ಯಾಯನಿ! ಇದಕ್ಕಾಗಿಯೇ ನಾನು ನಿನ್ನನ್ನು ಹದಿನಾಲ್ಕು ವರ್ಷಗಳಿಂದಲೂ ಪುರುಷನಂತೆ ಏರ್ಪಡಿಸಿದ್ದುದು? ಇದಕ್ಕಾಗಿಯೇ ನಾನು ನಿನಗೆ ಪುರುಷನಂತೆ ವಿದ್ಯಾಭ್ಯಾಸಮಾಡಿಸಿದುದು? ಇಷ್ಟಾದರೂ ನೀನು ಪುರುಷನಂತೆ ಆಗಲಾರದೇ ಹೋದೆಯಾ?

ಕಾತ್ಯಾ—(ಗದ್ಗದಸ್ವರದಿಂದ) ನಾನು ಎಷ್ಟಾದರೂ ಹುಡುಗಿ. ತಾವು ನನ್ನನ್ನು ಹುಡುಗನನ್ನಾಗಿ ಮಾಡೋಣವಾಯಿತು. ಅದಕ್ಕೆ ಸರಿಯಾಗಿ ನಾನೂ ಗಂಡಸಿನಂತೆ ಯುದ್ಧದಲ್ಲಿ ಹೋರಾಡಿದೆನು. ದ್ವಂದ್ವಯುದ್ಧದಲ್ಲಿ ಪರಮಪಾಪಿಯಾದ ಮಹಾರಾಜಸಿಂಹನನ್ನೂ ಕೊಂದುದಾಯಿತು. ನಾನು ಮತ್ತೇನ ಮಾಡಬಲ್ಲೆನು, ತಿಳಿಸೋಣವಾಗಲಿ? ನಾನು ನನ್ನ ಸ್ವಾಮಿಗಾಗಿ ಅಳಕೂಡದೆಂದು ತಾವು ಹೇಳೋಣವಾಗುತ್ತದೆಯೇನು?

ಪರಮಾ—ನನ್ನ ಮಗನು ಸತ್ತು ಇದಿರಿನಲ್ಲಿಯೇ ಬಿದ್ದಿರುವನು. ಇದನ್ನು ನಾನು ನೋಡಿಯೂ ಅಳುತ್ತಿಲ್ಲ. ಅಳುವುದಕ್ಕೆ ಇದು ಕಾಲವಲ್ಲ; ಅಳುವುದಕ್ಕೆ ಕಾಲವು ಮುಂದೆ ಬರುವುದು.

ಕಾತ್ಯಾ—ತಂದೆಯೇ! ನಾನು ನಿಮ್ಮಡಿ ದಾವರೆಗಳಿಗೆರಗಿ ಬೇಡುವೆನು. ಸ್ವಾಮಿಗಾಗಿ ಅಳುವುದಕ್ಕೆ ಕೊಂಚ ಮಟ್ಟಿಗೆ ಅವಕಾಶವನ್ನು ಕೊಡೋಣವಾಗಲಿ. ಇಲ್ಲದೇ ಹೋದರೆ, ನಾನು ನಿಜವಾಗಿಯೂ ಹುಚ್ಚಿಯಾಗಿಬಿಡುವೆನು. ನನ್ನ ಹೃದಯವಾದರೋ ಒಡೆದೇ ಹೋಗಿರುವುದು. ಇನ್ನು ನಾನು ಬದುಕಿರಲಾರೆನು. ಗುರುದೇವ! ಸಾಯುವುದಕ್ಕೆ ನನಗೆ ಅಪ್ಪಣೆಕೊಡೋಣವಾಗಲಿ. ನಾಥ! ಒಂದು ಮಾತನ್ನಾದರೂ ಆಡಬಾರದೆ! ನಾನು ನಿನಗೆ ಮಾಡಿದ ಅಪರಾಧವಾದರೂ ಏನು?

ಪರಮಾ—ಕಾತ್ಯಾಯನಿ! ನನ್ನ ಮಾತು ನಿನಗೆ ಕೇಳಿಸಿತೇ? ನನ್ನ ಮಾತು ನಿನಗೆ ಅರ್ಥವಾಯಿತೇ? ಈಗ ನಾನು ಲಾವಣ್ಯನನ್ನು ನಿನಗೆ ಕೊಟ್ಟುಬಿಡುವೆನು; ಕಟ್ಟಳೆಗೆ ಅನುಸಾರವಾಗಿ ನೀನು ಅವನ್ನು ತೆಗೆದುಕೊಳ್ಳಬೇಕು. ನಾನು ಮಗುವನ್ನು ನಿನಗೆ ಒಪ್ಪಿಸಿ ಹೋಗುವುದಕ್ಕಾಗಿಯೇ ಇಲ್ಲಿಗೆ ಬಂದುದು.

ಪರಮಾನಂದನು ಹೀಗೆ ಹೇಳಿ ಆ ಮಗುವನ್ನು ಕಾತ್ಯಾಯನಿಯ ಮಡಲಲ್ಲಿರಿಸಿ—ಕಾತ್ಯಾಯನಿ! ನಮ್ಮ ಕಡೆಯ ಭಿಲ್ಲರೂ, ರಜಪೂತರೂ ರಣರಂಗವನ್ನು ಬಿಟ್ಟು ಹೊರಟು ಹೋಗುತ್ತಿರುವರು. ಮುಸಲಮಾನ

ಸೈನ್ಯದವರು ರಜಪೂತರ ಗೌರವವನ್ನು ತುಳಿದು ಬಿಡುವುದಕ್ಕಾಗಿ ಮುಂದೆ ಬರುತ್ತಿರುವರು. ನಿನಗೆ ಇಷ್ಟವಿರುವುದಾದರೆ, ಲಾವಣ್ಯನನ್ನು ಈ ರಣದೇವತೆಗೆ ಬಲಿಕೊಟ್ಟು ಮಾರವಾಡದ ರಾಜವಂಶವನ್ನು ನಿರ್ಮೂಲ ಮಾಡಿಬಿಡು, ಎಂದು ತಿಳಿಸಿದನು.

ಪರಮಾನಂದ ಸ್ವಾಮಿಯು ಹೀಗೆ ಹೇಳಿದ ಬಳಿಕ, ಅಲ್ಲಿ ಒಂದು ಕ್ಷಣವೂ ನಿಲ್ಲದೆ ದೂರವಾಗಿ ಹೊರಟು ಹೋದನು.

ಕಾತ್ಯಾಯನಿಯ ಮಡಲಲ್ಲಿ ಲಾವಣ್ಯಸಿಂಹನು ಮಲಗಿರುವನು. ಸುತ್ತಲೂ ರಕ್ತದ ಪ್ರವಾಹವು ಹರಿಯುತ್ತಿರುವುದು ; ಗಾಯಪಟ್ಟವರು ಸಂಕಟದಿಂದ ರೋದನ ಮಾಡುತ್ತಿರುವರು, ಹದ್ದು ಕಾಗೆಗಳು ಕೆಟ್ಟ ಕೂಗನ್ನು ಕೂಗುತ್ತಾ ಅಂತರಿಕ್ಷದಲ್ಲಿ ಮಂಡಲಾಕಾರವಾಗಿ ಹಾರಾಡುತ್ತಿರುವುವು. ಇಂತಹ ಭಯಂಕರವಾದ ಸ್ಥಾನದಲ್ಲಿ ಹದಿನಾಲ್ಕು ವರ್ಷದ ಹುಡುಗಿಯು ಗಂಡನನ್ನು ಕಳೆದುಕೊಂಡು ಸಂಕಟಪಡುತ್ತಿರುವಳು. ಅವಳ ತೊಡೆಯ ಮೇಲೆ ಲಾವಣ್ಯ ಸಿಂಹನು ಮಲಗಿಕೊಂಡು ಕೈಕಾಲುಗಳನ್ನು ಆಡಿಸುತ್ತಿರುವನು.

ಆಗ ಕಾತ್ಯಾಯನಿಯ ದೃಷ್ಟಿಯು ಲಾವಣ್ಯನ ಮೇಲೆ ಬಿದ್ದಿತು. ಆ ಕ್ಷಣದಲ್ಲಿಯೇ ಚಿತ್ತೂರು ದುರ್ಗದ ಹಿಂದಣ ಭಯಂಕರವಾದ ದೃಶ್ಯವು ಕಣ್ಣ ಮುಂದೆ ಬಂದು ಮಾಯವಾಗಿಬಿಟ್ಟಿತು ; ಕುಮುದಿನಿಯ ವಿಷಣ್ಣ ವದನವು ಆಕೆಯ ಮುಂದೆ ಬಂದು ಕಾಣಸಿಕೊಂಡು ಹೊರಟು ಹೋಯಿತು. ಅಲ್ಲದೆಯೂ ತನ್ನ ಸ್ವಾಮಿಯು ಸಾಯುವ ಕಾಲದಲ್ಲಿ ಆಡಿದ ' ಲಾವಣ್ಯ—' ಎಂದು ಹೇಳಿದ ಅರ್ಧೋಕ್ತಿಯು ಆಕೆಯ ಜ್ಞಾಪಕಕ್ಕೆ ಬಂದಿತು. ಒಡನೆಯೇ ಕಾತ್ಯಾಯನಿಯು ಮಗುವನ್ನು ಎತ್ತಿಕೊಂಡು ನಿಂತಳು. ಸಿಂತು ಸುತ್ತಲೂ ನೋಡಲಾಗಿ, ಭಿಲ್ಲರೂ ರಾಜಪೂತರೂ ದೂರ ಸರಿದು ಹೋಗುತ್ತಿದ್ದರು.

ಲಲಿತಸಿಂಹನ ಪಕ್ಕದಲ್ಲಿ ಕತ್ತಿಯೊಂದು ಬಿದ್ದಿದ್ದಿತು. ಕಾತ್ಯಾಯನಿಯು ಅದನ್ನು ತೆಗೆದುಕೊಂಡು ಅಂತರಿಕ್ಷದಲ್ಲಿ ಝಳಪಿಸುತ್ತಾ ಭಿಲ್ಲರನ್ನು ಕುರಿತು ಗಟ್ಟಿಯಾಗಿ—ಬನ್ನಿರಿ ಬನ್ನಿರಿ ; ಮಹಾರಾಣನ ದೇಹ

ವನ್ನು ರಕ್ಷಿಸಿರಿ ರಕ್ಷಿಸಿರಿ, ಎಂದು ಕೂಗಿ ಕೊಂಡಳು. ಅವಳ ಮಾತು ಆರ ಕಿವಿಯಲ್ಲಿಯೂ ಬೀಳಲಿಲ್ಲ. ಕೊಳಲನ್ನು ಊದಿ ಬರಮಾಡಿ ಕೊಳ್ಳೋಣವೆಂದರೆ, ಅದೂ ಹತ್ತಿರದಲ್ಲಿರಲಿಲ್ಲ. ಕುದುರೆಯನ್ನಾದರೂ ಏರಿ ಹೋಗೋಣವೆಂದು ನೋಡಿದಳು. ಆವ ಕುದುರೆಯೂ ಸಮೀಪ ದಲ್ಲಿರಲಿಲ್ಲ. ಕಾತ್ಯಾಯನಿಯು ತನ್ನ ದುರದೃಷ್ಟವನ್ನು ಪರಿಪರಿಯಾಗಿ ನಿಂದಿಸಿಕೊಳ್ಳುತ್ತಾ ಮುಂದೆ ಮಾಡಬೇಕಾದುದೇನೆಂಬುದನ್ನೇ ಅರಿಯದವ ಳಾಗಿ ಸುಮ್ಮನೇ ನಿಂತುಬಿಟ್ಟಳು.

---

## ಅರವತ್ತೆಂಟನೆಯ ವಿಲಾಸ

ಆನೆಯ ಮೇಲೆ ಕುಳಿತುಕೊಂಡು ಹೋಗುತ್ತಿದ್ದ ಶೈಲೇಂದ್ರ ಸಿಂಹನು ಏಕಾಕಿನಿಯಾಗಿ ನಿಂತಿರುವ ಕಾತ್ಯಾಯನಿಯನ್ನು ದೂರ ದಿಂದಲೇ ನೋಡಿದನು. ಜಮೇಲಿಯನು ಇನ್ನೂ ಬದುಕಿರುವನೆಂದು ಆತನು ತಿಳಿದು, ಕೆಲವು ಮಂದಿ ರಜಪೂತರನ್ನು ಜತೆಯಲ್ಲಿ ಕರೆದು ಕೊಂಡು ಜುಮೇಲಿಯನಿದ್ದಲ್ಲಿಗೆ ಬಂದನು. ರಣಾಂಗಣಾಭಿಮುಖನಾಗಿ ಹೋಗುತ್ತಿದ್ದ ಶೈಲೇಂದ್ರನನ್ನು ನೋಡಿ ಉಳಿದ ಭಿಲ್ಲರೂ, ರಜಪೂತರೂ ಆಶ್ಚರ್ಯದಿಂದ ಬೆರಗಾದರು. ಶೈಲೇಂದ್ರನು ಹತ್ತಿರಕ್ಕೆ ಬಂದಕೂಡಲೆ, ಜುಮೇಲಿಯನು ಆತನ ಆನೆಯ ಮೇಲೆ ಏರಿ, ಶೈಲೇಂದ್ರನನ್ನು ಕುರಿತು— ಶೈಲೇಂದ್ರಸಿಂಹ! ಛತ್ರಚಾಮರಗಳನ್ನು ಎತ್ತಿ ಹಿಡಿಯೋಣವಾಗಲಿ. ನನ್ನ ಬಳಿಯಲ್ಲಿ ಮಾರವಾಡದ ಭಾವಿ ಮಹಾರಾಣನಾದ ಲಾವಣ್ಯಸಿಂಹ ನಿರುವನು, ಎಂದಳು.

ಶೈಲೇಂದ್ರನು ಆವ ಮಾತನ್ನೂ ಆಡದೆ ಸುಮ್ಮನೇ ನಿಂತಿರಲು, ಜುಮೇಲಿಯನು ತನ್ನ ಮಡಲಲ್ಲಿ ಕಟ್ಟಿಕೊಂಡಿದ್ದ ಲಾವಣ್ಯಸಿಂಹನನ್ನು ಹೊರಗೆ ತೆಗೆದು ತೋರಿ—ಇದೇ ಲಲಿತಸಿಂಹನ ಮಗುವಾದ ಲಾವಣ್ಯ ಸಿಂಹನು; ಇದೇ ಮಾರವಾಡದ ಭಾವಿ ಮಹಾರಾಣನು, ಎಂದು ತಿಳಿಸಿದಳು.

ಶೈಲೇಂದ್ರನು ಆವ ಮಾತನಾಡುವುದಕ್ಕೂ ತೋರದವನಾಗಿ, ಜುಮೇಲಿಯನ ಇಷ್ಟದಂತೆ ಶ್ವೇತಛತ್ರವನ್ನು ಎತ್ತಿ ಹಿಡಿದುಕೊಂಡನು. ಬಳಿಕ ಜುಮೇಲಿಯನು ತನ್ನ ಪುರುಷವೇಷವನ್ನು ತೆಗೆದುಹಾಕಿ ಭಿಲ್ಲರ ಕಾತ್ಯಾಯನಿಯಾಗಿ 'ಜಯ ಲಾವಣ್ಯಸಿಂಹಕೀ ಜಯ; ಜಯಜಯ ಮಹಾರಾಣಾಕೀ ಜಯಜಯ,' ಎಂದು ಗಟ್ಟಿಯಾಗಿ ಜಯಧ್ವನಿಯನ್ನು ಮಾಡಿದಳು.

ಇದನ್ನು ನೋಡಿ ಭಿಲ್ಲರೂ ರಜಪೂತರೂ 'ಲಲಿತಸಿಂಹನು ಬದುಕಿರುವನು' ಎಂದು ಸಂತೋಷದಿಂದ ರಣಾಂಗಣಕ್ಕೆ ಬಂದು ನೋಡಲಾಗಿ, ಆನೆಯ ಮೇಲೆ ಅಪೂರ್ವದೇವತಾ ಮೂರ್ತಿಯಾದ ಕಾತ್ಯಾಯನಿಯು ವಿರಾಜಿಸುತ್ತಿದ್ದಳು. ಆಕೆಯನ್ನು ನೋಡಿದವರೆಲ್ಲರೂ ಕೈಲಾಸವಾಸಿನಿಯಾದ ತ್ರಿಭುವನೇಶ್ವರಿಯು ತಮ್ಮನ್ನು ಉದ್ಧಾರಮಾಡುವುದಕ್ಕಾಗಿ ಅವತರಿಸಿ ಬಂದಿರುವಳೆಂದು ತಿಳಿದು ಪರಮಾನಂದ ಭರಿತರಾದರು.

ಕಾತ್ಯಾಯನಿಯನ್ನು ನೋಡಿದ ಕೂಡಲೆ, ಭಿಲ್ಲರಿಗೆ ದೇವೀಮಂದಿರದಲ್ಲಿ ತಾವು ಮಾಡಿದ್ದ ಪ್ರತಿಜ್ಞೆಯು ಜ್ಞಾಪಕಕ್ಕೆ ಬಂದಿತು. ಕೂಡಲೆಯೇ ಅವರು ರಣಾಂಗಣವನ್ನು ತ್ಯಾಗಮಾಡಿ ಹೋದುದು ಅಪರಾಧವಾಯಿತೆಂದು ಕೆನ್ನೆಗಳನ್ನು ತಟ್ಟಿಕೊಂಡು 'ಕಾತ್ಯಾಯನೀಮಾಯಿಕೀ ಜಯ' ಎಂದು ಗಟ್ಟಿಯಾಗಿ ಕೂಗಿಕೊಂಡರು. ಈ ಧ್ವನಿಯನ್ನು ಕೇಳಿದ ಮಹಮ್ಮದ ತೋಕೀ ಖಾನನ ಸೈನ್ಯದವರು ಮತ್ತೇನೋ ಪಿಡುಗು ಬಂದಿತೆಂದು ಹೆದರಿದವರಾಗಿ ಹಿಂದಕ್ಕೆ ಸರಿದು ಹೊರಟು ಹೋದರು.

ಯುದ್ಧವು ಮುಗಿಯಿತು. ಸಂಧ್ಯಾಕಾಲವಾಗುವುದರೊಳಗಾಗಿ ಭಯಂಕರವಾದ ಯುದ್ಧವು ಸಂಪೂರ್ಣವಾಗಿ ನಿಂತುಹೋಯಿತು. ಈ ಯುದ್ಧದಲ್ಲಿ ಭಿಲ್ಲರೇ ಗೆದ್ದರೆಂದು ತಿಳಿಸಬೇಕಾದುದೇನೂ ಇರುವುದಿಲ್ಲ. ಯುದ್ಧದಲ್ಲಿ ವಿಜಯ ಪತಾಕೆಯನ್ನು ನಟ್ಟು ಭಿಲ್ಲರೂ ಅವರ ಕಡೆಯ ರಜಪೂತರೂ ಪರಮಾನಂದ ಭರಿತರಾಗಿ ರಾಜಧಾನಿಯ ಕಡೆಗೆ ತೆರಳಿದರು.

ಅಂತರ್ಯವನ್ನು ವಿಚಾರಮಾಡಿ ನೋಡುವಲ್ಲಿ, ಈ ಯುದ್ಧದಿಂದ ಆರಿಗೂ ಸಂತೋಷವೆಂಬುದೇ ಇಲ್ಲ. ರಾಜಧಾನಿಯ ಒಂದೊಂದು ಮನೆಯಲ್ಲಿಯೂ ರೋದನ ಧ್ವನಿಯು ಕೇಳ ಬರುತ್ತಿರುವುದು. ಮಕ್ಕಳು ತಂದೆಯನ್ನು ಕಳೆದುಕೊಂಡು ಅಳುತ್ತಿರುವರು; ಹೆಂಡತಿಯು ಗಂಡನನ್ನು ಕಳೆದುಕೊಂಡು ಅಳುತ್ತಿರುವಳು; ಅಕ್ಕ ತಂಗೆಯರು ಅಣ್ಣ ತಮ್ಮಂದಿರನ್ನು ಕಳೆದುಕೊಂಡು ಅಳುತ್ತಿರುವಳು; ಮುದುಕಿಯಾದ ತಾಯಿಯು ಕೈಗೆ ಬಂದ ಮಗನನ್ನು ಕಳೆದುಕೊಂಡು ಬಿಕ್ಕಿಬಿಕ್ಕಿ ಅಳುತ್ತಿರುವಳು. ಇದನ್ನು ನೋಡಿದರೆ, ಯುದ್ಧಸಾಗರದಿಂದೆದ್ದ ಶೋಕ ತರಂಗಗಳು ಉಕ್ಕಿ ಹರಿದು ರಾಜಧಾನಿಯನ್ನು ಆವರಿಸಿರುವುದೋ ಎಂದು ತೋರುತ್ತಿದ್ದಿತು. ಆತ್ಮೀಯರನ್ನು ಕಳೆದುಕೊಂಡು ಸಂಕಟಪಡುತ್ತಿದ್ದವರೆಲ್ಲರೂ ದುಃಖಶೋಕ ಕ್ರೋಧಗಳಿಂದ ಕಮಲಿನಿಯನ್ನು ಬಾಯಿಗೆ ಬಂದ ಹಾಗೆ ಬೈಯುತ್ತಿದ್ದರು.

ಯುದ್ಧದಲ್ಲಿ ಜಯಶೀಲರಾಗಿ ಆರು ಹಿಂದಿರುಗಿ ಬಂದಿರುವರೋ ಅವರಿಗೂ ಸಂತೋಷವಿರಲಿಲ್ಲ. ಕಾರಣವೇನೆಂದರೆ—ಆರಿಗೋಸುಗ ಯುದ್ಧವೋ ಅಂತಹ ಲಲಿತಸಿಂಹನು ಯುದ್ಧಾಂಗಣದಲ್ಲಿ ದೀರ್ಘನಿದ್ರೆಯನ್ನು ಮಾಡಿಬಿಟ್ಟನು. ಅಲ್ಲದೆಯೂ ಶೈಲೇಂದ್ರನು ಹೊರತಾಗಿ ಉಳಿದ ಪುರಪ್ರಮುಖರೆಲ್ಲರೂ ಯುದ್ಧದಲ್ಲಿ ಮಡಿದು ಹೋಗಿರುವರು. ಉಳಿದವರು ಸತ್ತು ಹೋಗಿದ್ದ ಪುರಪ್ರಮುಖರ ಶವಗಳನ್ನು ಸಾಗಿಸಿಕೊಂಡು ರಾಜಧಾನಿಗೆ ಬಂದಿರುವರು. ಅವರ ದುಃಖವನ್ನು ಎಷ್ಟು ವರ್ಣಿಸಿದರೂ ಸಾಲದುದಾಗಿದೆ.

---

## ಅರವತ್ತೊಂಬತ್ತನೆಯ ವಿಲಾಸ

ಮಾರವಾಡದಲ್ಲಿ ಮತ್ತೆ ಶಾಂತಿಯು ಸ್ಥಾಪಿತವಾಗಿರುವುದು. ಆದರೂ ಪ್ರಜೆಗಳ ರೋದನ ಧ್ವನಿ ಮಟ್ಟಿಗೆ ಶಾಂತವಾಗಿರಲಿಲ್ಲ. ಅದು ಸುಲಭವಾಗಿ ಶಾಂತವಾಗುವ ಹಾಗೂ ಇರಲಿಲ್ಲ.

ಮಗುವಾದ ಲಾವಣ್ಯಸಿಂಹನು ಮಾರವಾಡದ ಮಹಾರಾಣನಾದನು. ಶೈಲೇಂದ್ರಸಿಂಹನು ಆ ಮಗುವಿನ ರಕ್ಷಕನಾಗಿಯೂ, ನಗರಾಧ್ಯಕ್ಷನಾಗಿಯೂ ನಿಯಮಿಸಲ್ಪಟ್ಟಿರುವನು. ಶೈಲೇಂದ್ರನ ಸಾದ್ಗುಣ್ಯದಿಂದ ಮಾರವಾಡದಲ್ಲಿ ಶಾಂತಿಯೇರ್ಪಟ್ಟು ಅತ್ಯಾಚಾರ, ಅನಾಚಾರ, ಅವಿಚಾರಗಳೆಂಬ ದುರ್ದೋಷಗಳು ದೂರ ಸರಿದು ಹೋದುವು.

ಮರುದಿನದ ಪ್ರಾತಃಕಾಲದಲ್ಲಿ ಮಾರವಾಡದ ರಾಜಧಾನಿಯಲ್ಲಿ ವಿರಾಟ್ಸಭೆಯು ಏರ್ಪಡಿಸಲ್ಪಟ್ಟಿರುವುದು. ದೇಶದ ಪ್ರಜೆಗಳೆಲ್ಲರೂ ಸ್ತ್ರೀ ಪುರುಷರು ಆದಿಯಾಗಿ ಬಂದಿರುವರು. ಸಭೆಯ ಹೊರಗಡೆಯಲ್ಲಿ ಮಾರವಾಡದ ಸೈನಿಕರೂ ಅವರ ಹಿಂಗಡೆಯಲ್ಲಿ ಭಿಲ್ಲ ಸೈನಿಕರೂ ಸಾಲು ಸಾಲಾಗಿ ನಿಂತಿರುವರು. ಇಷ್ಟಾದರೂ ' ಇಂದು ಲಾವಣ್ಯಸಿಂಹನು ಸಿಂಹಾಸನದ ಮೇಲೆ ಕುಳಿತುಕೊಳ್ಳುವನು ; ಇಂದಿನಿಂದ ಲಾವಣ್ಯನೇ ಮಾರವಾಡದ ಮಹಾರಾಣನಾಗುವನು,' ಎಂಬ ಸಂತೋಷವು ಆರ ಹೃದಯದಲ್ಲಿಯೂ ಪದಾರ್ಪಣಮಾಡಲಿಲ್ಲ.

ತಟ್ಟನೆ ವಾದ್ಯಗಳು ನಾಲ್ಕು ದಿಕ್ಕುಗಳಲ್ಲಿಯೂ ಮೊಳಗಿದುವು. ಬಳಿಕ ಸೈನಿಕರೆಲ್ಲರೂ ಜಯಘೋಷವನ್ನು ಮಾಡಿದರು. ತೋಪುಗಳು ಹಾರಿಸಲ್ಪಟ್ಟುವು. ಈ ಸಮಾರಂಭದಲ್ಲಿ ಮಹಾರಾಣಿ ಕಾತ್ಯಾಯನಿಯು ಲಾವಣ್ಯನನ್ನು ಎತ್ತಿಕೊಂಡು ಸಿಂಹಾಸನದ ಮೇಲೆ ಬಂದು ಕುಳಿತಳು. ಆಗ ಎಲ್ಲರೂ ' ಜಯ ಮಹಾರಾಣೀಕೀ ಜಯ ; ಜಯ ಕಾತ್ಯಾಯನೀ ಮಾಯಿಕೀ ಜಯ ; ಜಯ ಮಹಾರಾಣಾಕೀ ಜಯ, ಜಯ ಲಾವಣ್ಯ ಸಿಂಹಕೀ ಜಯ ' ಎಂದು ಜಯ ಜಯ ಘೋಷವನ್ನು ಮಾಡಿದರು.

ಲಾವಣ್ಯಸಿಂಹನಿಗೆ ಪಟ್ಟಾಭಿಷೇಕ ಮಹೋತ್ಸವವು ಯಥಾವಿಧಿಯಾಗಿ ಅತಿ ವಿಜೃಂಭಣೆಯಿಂದ ನಡೆಯಿತು. ಬಳಿಕ ಕಾತ್ಯಾಯನಿಯು ಎದ್ದು ನಿಂತು--ಪ್ರಜೆಗಳಿರಾ! ನಾನು ನಿಮ್ಮ ಲಾವಣ್ಯಸಿಂಹನನ್ನು ನಿಮಗೆ ಸಲ್ಲಿಸುವುದಕ್ಕಾಗಿ ಬಂದೆನು. ನಾನು ಮಾಡಿದ ಪ್ರಯತ್ನವು ಇಂದಿಗೆ ಸಫಲವಾಯಿತು. ಲಲಿತಸಿಂಹನೂ ಬದುಕಿದ್ದಿದ್ದರೆ ಎಷ್ಟೋ

ಚೆನ್ನಾಗಿರುತ್ತಿದ್ದಿತು. ದೈವ ಲೀಲಾ ವಿಲಾಸವನ್ನು ಬಲ್ಲವರಾರು? ಎಂದು ಮಾತನಾಡಿದಳು.

ಎಲ್ಲರೂ ಮೌನದಿಂದಿದ್ದುಕೊಂಡೇ ಧಾರಾಕಾರವಾಗಿ ಕಣ್ಣೀರ ಸುರಿಸಲಾರಂಭಿಸಿದರು.

ಕಾತ್ಯಾಯನಿಯು ಮತ್ತೆ ಹೇಳತೊಡಗಿದಳು :—

" ಇಹ ಸಂಸಾರದಲ್ಲಿ ಹಣೆಯ ಬರಹವನ್ನು ತಪ್ಪಿಸ ಬಲ್ಲವರಾರು? ದೈವವು ಹೇಗೆ ನಡೆಯಬೇಕೆಂದು ಬಯಸುವುದೋ, ಹಾಗೆಯೇ ನಡೆದು ಹೋಗುವುದು. ಇದರಲ್ಲಿ ಮನುಷ್ಯನ ಪ್ರಯತ್ನವು ಎಳ್ಳಷ್ಟೂ ಫಲಿಸದು. ಮನುಷ್ಯನು ಬಯಸುವುದೇ ಒಂದು ಬಗೆಯಾದರೆ, ಅದರ ಫಲವೇ ಬೇರೊಂದು ಬಗೆಯಾಗುವುದು. ಈಗ ನಾವುಗಳು ದುಃಖಪಡುವು ದೆಂಬುದು ಅದರ ಪರಿಣಾಮವೇ ಆಗಿರುವುದು. ಮನುಷ್ಯನಿಗಾದರೋ ರಾಜ್ಯಲೋಭವೆಂಬುದು ಬಲು ಕೆಟ್ಟುದು. ದುರಾಶೆಯು ಮನುಷ್ಯನಿಂದ ಆವ ಕೆಲಸವನ್ನಾದರೂ ಮಾಡಿಸಿ ಬಿಡುವುದು. ಪುರುಷನಿಗಿಂತಲೂ ಸ್ತ್ರೀಯು ಕೇವಲವಾಗಿ ಸ್ವಾರ್ಥಪರಾಯಣೆಯು. ಸ್ತ್ರೀಯು ತನ್ನ ಇಷ್ಟ ಸಾಧನೆಗಾಗಿ ಪುರುಷನನ್ನು ತನ್ನ ಮಾಯಾಪಾಶದಲ್ಲಿ ಸಿಲುಕಿಸಿಕೊಳ್ಳು ವುದಕ್ಕೆ ಆವಾಗಲೂ ಸಮಯವನ್ನು ಕಾಯುತ್ತಲೇ ಇರುವಳು. ವಿವೇಕ ಶಾಲಿಯಾದ ಪುರುಷನು ಈ ಪಾಶಕ್ಕೆ ಸಿಲುಕದ ಹಾಗೆ ತನ್ನನ್ನು ತಾನು ರಕ್ಷಿಸಿಕೊಳ್ಳುತ್ತಾ ಬರಬೇಕು. ಗಂಡಸು ಒಂದು ಸಲ ಹೆಂಗುಸಿನ ಬಲೆ ಯಲ್ಲಿ ಸಿಕ್ಕಿಬಿದ್ದನೆಂದರೆ, ಕಮಲಿನಿಯು ಮಹಾರಾಜಸಿಂಹನನ್ನು ಕುಣಿ ಸಿದ ಹಾಗೆ ಕುಣಿಸಿಬಿಡುವಳು. ಇದರಿಂದ ಹೆಂಗುಸಿನ ಮಾತನ್ನು ಕೇಳಲೇ ಕೂಡದೆಂದು ನನ್ನ ಅಭಿಪ್ರಾಯವಲ್ಲ. ಹೆಂಗುಸು ತನ್ನ ಸಂಸಾರದಲ್ಲಿ ಅಧಿದೇವತೆಯು; ಇಂತಹ ಅಧಿದೇವತೆಯರು ತಮ್ಮ ತಮ್ಮ ಎಲ್ಲೆಯನ್ನು ಮಟ್ಟಿಗೆ ಮೀರದೇ ಇರುವುದಾದರೆ, ಅಂತಹವರ ಸಲಹೆಗಳಿಂದಲೂ ಪ್ರಯೋಜನವುಂಟು.

ಭಾರತ ಮಹಿಳೆಯರಿರಾ! ನೀವುಗಳು ಪುರುಷನನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕೋತಿಯಂತೆ ಕುಣಿಸಬೇಡಿರಿ ಕಂಡಿರಾ? ನಿಮ್ಮಿಂದಲೇ

ಗಂಡಸು ಬದುಕಬೇಕು ; ನಿಮ್ಮಿಂದಲೇ ಗಂಡಸು ಸುಖಪಡಬೇ
ನಿಮ್ಮಿಂದಲೇ ಗಂಡಸು ಹೆಸರ ಹೇಳಬೇಕು ; ನಿಮ್ಮಿಂದಲೇ ಗಂಡ
ಪ್ರಾಪಂಚಿಕ ವ್ಯವಹಾರದಲ್ಲಿ ನುಗ್ಗಬೇಕು ; ನಿಮ್ಮಿಂದಲೇ ಗಂಡ
ಕೀರ್ತಿಯನ್ನು ಪಡೆಯಬೇಕು ; ನಿಮ್ಮಿಂದಲೇ ಗಂಡಸು ಸ್ವರ್ಗ ಸೋಪ
ವನ್ನಡರಬೇಕು. ನೀವು ಮಟ್ಟಿಗೆ ಸ್ವಕಾರ್ಯಸಾಧನೆಗಾಗಿ ಗಂಡಸ
ಉಪಕರಣಸಾಮಗ್ರಿಯನ್ನಾಗಿ ಮಾಡಿಕೊಳ್ಳದಿರಿ. ಈ ವಿಷಯ
ವ್ಯಾಸರು ಹೇಳಿರುವುದೇನೆಂದರೆ—

ಸ್ತ್ರಿಯೋ ಹಿ ಮೂಲಂ ಕಲಹಸ್ಯ ಪುಂಸಾಂ।
ಸ್ತ್ರಿಯೋ ಹಿ ಮೂಲಂ ನಿಧನಸ್ಯ ಪುಂಸಾಂ॥
ಸ್ತ್ರಿಯೋ ಹಿ ಮೂಲಂ ನರಕಸ್ಯ ಪುಂಸಾಂ।
ಸ್ತ್ರಿಯೋ ಹಿ ಮೂಲಂ ಸಕಲಸ್ಯ ಪುಂಸಾಂ॥

ತಾತ್ಪರ್ಯ :—ಗಂಡಸರ ಕಲಹಕ್ಕೆ ಹೆಂಗುಸೇ ಮೂಲಕಾರಣ
ಗಂಡಸರ ಸಾವಿಗೆ ಹೆಂಗುಸೇ ಮೂಲವು ; ಗಂಡಸರ ನರಕಪ್ರಾಪ್ತಿ
ಹೆಂಗುಸೇ ಕಾರಣವು. ಆದುದರಿಂದ ಗಂಡಸಿನ ಶುಭಾಶುಭಗಳಿಗೇ
ಹೆಂಗುಸೇ ಆದಿಕಾರಣವು.

ತತ್ತ್ವವು ಹೀಗಿರುವುದರಿಂದ ಗಂಡಹೆಂಡಿರಿಬ್ಬರೂ ಸೇರಿಕೊಂ
ಸಂಸಾರವನ್ನು ಸುಮುಖವಾಗಿ ನೆರವೇರಿಸಿಕೊಂಡು ಬರುತ್ತಾ ಇಹ
ಸುಖಸಂಪತ್ತಿಗಳನ್ನೂ, ಪರದಲ್ಲಿ ಶಾಶ್ವತವಾದ ಸದ್ಗತಿಯನ್ನೂ ಪಡೆ
ಕೊಳ್ಳುವುದಕ್ಕೆ ತಕ್ಕ ಹಾಗೆ ವರ್ತಿಸುತ್ತಿರಬೇಕೆಂದು ಎಲ್ಲಾ ಸ್ತ್ರೀಪುರ
ರಲ್ಲಿಯೂ ನನ್ನ ಪ್ರಾರ್ಥನೆ.

ಪ್ರಕೃತದಲ್ಲಿ ಲಲಿತಸಿಂಹನು ಸಾಯುವ ಕಾಲದಲ್ಲಿ ಈ ಲಾವ
ಸಿಂಹನನ್ನು ನನ್ನ ಕೈಯಲ್ಲಿಟ್ಟು ಅನಂತಧಾಮದಲ್ಲಿ ಅಡಗಿ ಹೋದ
ನಾನು ಆತನ ಚರಮ ಪ್ರಾರ್ಥನೆಯನ್ನು ನೆರವೇರಿಸಿದ ಬಳಿಕ
ನೊಡನೆ ನಾನೂ ಅನಂತಲೋಕಗಳಿಗೆ ತೆರಳುವವಳಾಗಿರುವೆನು. ಆದ
ರಿಂದ ನೀವುಗಳೆಲ್ಲರೂ ದೊಡ್ಡ ಮನಸ್ಸುಮಾಡಿ ಮಾರವಾಡದ ರ
ವಂಶಾಂಕುರನಾದ ಲಾವಣ್ಯಸಿಂಹನನ್ನು ಜಾಗರೂಕತೆಯಿಂದ ರಕ್ಷಿ
ಕೊಂಡು ಬರಬೇಕು. ಇದೇ ನನ್ನ ಚರಮಭಿಕ್ಷೆ.''

ಮಹಾರಾಣಿ ಕಾತ್ಯಾಯನಿಯು ಹೀಗೆ ಹೇಳಿ ಸುಮ್ಮನಾದಳು. ಬಳಿಕ ಜಯಧ್ವನಿಯು ಮೊಳಗಿತು.

ಮತ್ತೆ ಕಾತ್ಯಾಯನಿಯು ಮಾತನಾಡಿದಳು :—

" ಪ್ರಜೆಗಳಿರಾ ! ಮಹಾರಾಣಿ ಕಮಲಿನಿಯು—"

ಪ್ರಜೆಗಳು ಈ ಮಾತು ಪೂರ್ತಿಯಾಗುವುದಕ್ಕೆ ಆಸ್ಪದ ಕೊಡದೆ ದೊಡ್ಡ ಗದ್ದಲವೆಬ್ಬಿಸಿದರು. ಆಕೆಯ ಬಾಯಿಂದ ಮುಂದೆ ಆವ ಮಾತೂ ಹೊರಡಲಿಲ್ಲ. ಕಮಲಿನಿಯ ಹೆಸರ ಎತ್ತಿದ ಕೂಡಲೆ, ಜನರು ತಮ್ಮ ಅಸಮಾಧಾನವನ್ನು ತೋರ್ಪಡಿಸಿದರು. ಕೆಲವರು ' ಅವಳು ಮಹಾರಾಣಿಯಲ್ಲ; ಅವಳು ಮಹಾರಾಕ್ಷಸಿ,' ಎಂದರು. ಕೆಲವರು ' ಆ ನರರಾಕ್ಷಸಿಯೇ ಇಷ್ಟೆಲ್ಲಾ ಅನರ್ಥಕ್ಕೆ ಮೊದಲನೆಯ ಕಾರಣವು,' ಎಂದರು. ಕೆಲವರು, ' ಅಪ್ಪಣೆಯಾದರೆ ಆಕೆಯನ್ನು ಇಲ್ಲಿಯೇ ಸುಟ್ಟು ಬಿಡುವೆವು,' ಎಂದರು. ದೂರದಲ್ಲಿದ್ದ ಕೆಲವರು, ' ಆಕೆಯು ನಮ್ಮ ಕೈಗೆ ಸಿಕ್ಕುವುದಾದರೆ, ಆಕೆಯನ್ನು ತುಂಡುತುಂಡಾಗಿ ಕತ್ತರಿಸಿ ನಾಯಿನರಿಗಳಿಗೆ ಬೀಸಾಡಿಬಿಡುವೆವು,' ಎಂದರು.

ಕೊಂಚ ಹೊತ್ತಿನ ಮೇಲೆ ಕೋಲಾಹಲವು ಕೊಂಚ ಮಟ್ಟಿಗೆ ಶಾಂತವಾಗಲು, ಕಾತ್ಯಾಯನಿಯು ಮತ್ತೆ ಮಾತನಾಡಿದಳು : —

" ಪ್ರಜೆಗಳಿರಾ ! ಆಕೆಯನ್ನು ನಿಂದಿಸಿ ಪ್ರಯೋಜನವೇನು ? ದೈವೇಚ್ಛೆಗೆ ವಿರೋಧವಾಗಿ ಮನುಷ್ಯಮಾತ್ರಳಾದ ಆಕೆಯು ಏನ ಮಾಡಬಲ್ಲಳು ? ದೈವವು ಕುಣಿಸಿದ ಹಾಗೆಲ್ಲಾ ನಾವುಗಳೆಲ್ಲರೂ ಕುಣಿಯಲೇ ಬೇಕು. ಆಗುವುದಿಲ್ಲವೆಂದರೆ ಕೇಳುವವರಾರು ? ಅದು ಕಾರಣ ವಿಶ್ವವಿಧಾತನ ರಾಜ್ಯದಲ್ಲಿ ಒಳ್ಳೆಯದು ಕೆಟ್ಟುದು ಎಂಬುದನ್ನು ವಿಚಾರ ಮಾಡುವುದಕ್ಕೆ ನಾವಾರು ? ಒಳ್ಳೆಯದಕ್ಕೆ ಪುರಸ್ಕಾರವನ್ನೂ ಕೆಟ್ಟುದಕ್ಕೆ ತಿರಸ್ಕಾರವನ್ನೂ ಉಂಟುಮಾಡುವ ಭಗವಂತನೇ ಜಾಗರಿತನಾಗಿರುವಲ್ಲಿ, ನಾವೇಕೆ ಈ ಭಾರವನ್ನು ವಹಿಸಬೇಕು ? "

ಸಭಾಸದರೆಲ್ಲರೂ ಸುಮ್ಮನೆಯೇ ಕುಳಿತು ಬಿಟ್ಟರು. ಮತ್ತೆ ಕಾತ್ಯಾಯನಿಯು ಮಾತನಾಡಿದಳು :—

" ನನ್ನ ಮತ್ತೊಂದು ಪ್ರಾರ್ಥನೆಯೇನೆಂದರೆ—ಮಹಾರಾಣಿ ಕಮಲಿನಿ—"

ಈ ಮಾತು ಮುಗಿಯುವುದರೊಳಗಾಗಿ ಸಭಾಸದರೆಲ್ಲರೂ "ಆಕೆಯು ಮಹಾರಾಣಿಯಲ್ಲ; ಅವಳು ನರರಾಕ್ಷಸಿ ; ಅವಳನ್ನು ಸನ್ನಿಧಾನವು ಮಹಾರಾಣಿಯೆಂದು ಸಂಬೋಧಿಸಲಾಗದು," ಎಂದರು. ಈ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೇ ಕಾತ್ಯಾಯನಿಯು ಮತ್ತೆ ಮಾತನಾಡಿದಳು :—

" ನೀವೆಲ್ಲರೂ ಸೇರಿಕೊಂಡು ನನ್ನ ಚರಮಪ್ರಾರ್ಥನೆಯನ್ನು ನೆರವೇರಿಸಿಕೊಡೋಣವಾಗಲಿ. ಮಹಾರಾಣಿ ಕಮಲಿನಿಗೆ ನೀವುಗಳು ಆವ ದಂಡವಿಧಾನವನ್ನೂ ಮಾಡಲಾಗದು."

ಹೀಗೆ ಹೇಳಿ ಕಾತ್ಯಾಯನಿಯು ಎದ್ದು ನಿಂತು ಲಾವಣ್ಯಸಿಂಹನನ್ನು ಒಂದು ಸಲ ಚುಂಬನಮಾಡಿ ಶೈಲೇಂದ್ರನ ಕೈಗೆ ಕೊಟ್ಟು ಸಿಂಹಾಸನದಿಂದ ಕೆಳಗಿಳಿದಳು. ಆ ಕೂಡಲೆ ಅತಿ ವಿಜೃಂಭಣೆಯಿಂದ ಜಯಧ್ವನಿಯು ಬಲು ಹೊತ್ತು ಸಭಾಂಗಣದಲ್ಲಿ ಪ್ರತಿಧ್ವನಿತವಾಯಿತು. ಹೊರಗಡೆಯಿದ್ದ ಸೈನಿಕರೆಲ್ಲರೂ 'ಮಹಾರಾಣೀ ಕಾತ್ಯಾಯನೀ ಮಾಯಿಾಕೀ ಜಯ' ಎಂದು ತಮ್ಮ ಸಂತೋಷವನ್ನು ತೋರ್ಪಡಿಸಿದರು.

---

## ಎಪ್ಪತ್ತನೆಯ ವಿಲಾಸ

### ಉಪಸಂಹಾರ

ಕಾತ್ಯಾಯನಿಯು ಅರಮನೆಯಿಂದ ಹೊರಗೆ ಬರುತ್ತಿರುವಳು. ಆಕೆಯು ಕೆಂಪು ಬಟ್ಟೆಯನ್ನುಟ್ಟು ರುದ್ರಾಕ್ಷಮಾಲೆಯಿಂದಲಂಕೃತೆಯಾಗಿರುವಳು. ಆಕೆಯ ಕೇಶಪಾಶವು ಬಿಚ್ಚಿ ಹೋಗಿ ಸರ್ವಾಂಗದಲ್ಲಿಯೂ ಹಾರಾಡುತ್ತಿರುವುದು. ಆಕೆಯ ಹಣೆಯಲ್ಲಿ ಮುಟ್ಟಿಗೆ ಆವ ಚಿಹ್ನೆಯೂ ಕಂಡು ಬರುತ್ತಿರಲಿಲ್ಲ.

ಆಕೆಯ ಹಿಂದೆ ಇಬ್ಬರು ಭಿಲ್ಲರು ಆಕೆಯ ಕತ್ತಿಯನ್ನೂ ವೇಣು ವೀಣೆಗಳನ್ನೂ ಹೊತ್ತುಕೊಂಡು ಬರುತ್ತಿರುವರು. ಅವರ ಹಿಂಗಡೆಯಲ್ಲಿ ಇಬ್ಬರು ರಾಜಪೂತ ಸೇನಾನಾಯಕರು ಆಕೆಯ ಪ್ರಿಯವಾದ ಕುದುರೆಯನ್ನು ನಡೆಯಿಸಿಕೊಂಡು ಬರುತ್ತಿರುವರು. ಅವರ ಹಿಂಗಡೆಯಲ್ಲಿ ದಾಸದಾಸಿಯರೂ, ಸಖಿಯರೂ, ಮಾರವಾಡದ ಪುರ ಮಹಿಳೆಯರೂ, ರಾಜ್ಯಾಧಿಕಾರಿಗಳೂ, ರಾಜಸೇವಕರೂ, ಸೈನಿಕರೂ, ಪುರನಿವಾಸಿಗಳೂ ತಲೆಯನ್ನು ಬಗ್ಗಿಸಿಕೊಂಡು ಅನುಸರಿಸಿ ಬರುತ್ತಿರುವರು. ಎಲ್ಲರೂ ಪ್ರಮದ ವನದ ಕಡೆಗೆ ತೆರಳುತ್ತಿರುವರು.

ಪ್ರಮುದ ವನದ ಮಧ್ಯದಲ್ಲಿ ಲಲಿತಸಿಂಹನ ಶವವು ಚಂದನ ಕಾಷ್ಠದ ಚಿತೆಯ ಮೇಲೆ ಇರಿಸಲ್ಪಟ್ಟಿರುವುದು. ಈ ಸ್ಥಲಕ್ಕೆ ಎಲ್ಲರೂ ಕಾಲಕ್ರಮದಲ್ಲಿ ಹೊರಟುಬಂದು ಸೇರಿದರು. ಆರ ಬಾಯಲ್ಲಿಯೂ ಆವ ಮಾತೂ ಇಲ್ಲ. ಎಲ್ಲರೂ ದುಃಖದಿಂದಲೂ ಶೋಕದಿಂದಲೂ ಕಣ್ಣೀರ ಸುರಿಸಿದರು.

ನಾವು ಹೇಳಬೇಕಾದುದೇನಿರುವುದು? ಕಾತ್ಯಾಯನಿಯು ಲಲಿತನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಚಿತೆಯ ಮೇಲೆ ಕುಳಿತಿರುವಳು. ಪುರೋಹಿತರು ಬಂದು ಚಿತೆಗೆ ಮಂತ್ರಾಗ್ನಿಯನ್ನು ಕಚ್ಚಿಸಿದರು. ಬೆಂಕಿಯು ಧಕ್ ಧಕ್ ಧಕ್ ಎಂದು ಉರಿಯಲಾರಂಭಿಸಿತು. ಪತಿಪ್ರಾಣೆಯಾದ ಕಾತ್ಯಾಯನಿಯು ತನ್ನ ಪತಿಯೊಡನೆ ಪರಲೋಕ ಯಾತ್ರೆಯನ್ನು ಮಾಡಿಬಿಟ್ಟಳು. ಈ ಘೋರ ದೃಶ್ಯವನ್ನು ನೋಡಿ ರೋದನ ಮಾಡದ ಪ್ರಾಣಿಯೇ ಇರಲಿಲ್ಲ.

ಎಲ್ಲರೂ ಈ ಕೃತ್ಯವನ್ನು ನೋಡಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಹೊರಟು ಬರುತ್ತಿದ್ದರು. ಆಗ ಅವರೆಲ್ಲರೂ ದಾರಿಯಲ್ಲಿ ಬರುತ್ತಿದ್ದ ಉನ್ಮಾದಿನಿಯೊಬ್ಬಳನ್ನು ನೋಡಿ ಭಯಪಟ್ಟುಕೊಂಡು ಓಡಿದರು. ಆ ಉನ್ಮಾದಿನಿಯು ರಾಜವೇಷವನ್ನು ಧಾರಣಮಾಡಿರುವಳು, ತಲೆಯಲ್ಲಿ ಕಿರೀಟವನ್ನಿಟ್ಟುಕೊಂಡಿರುವಳು, ತನ್ನ ಶರೀರವನ್ನು ಸರ್ವಾಲಂಕಾರಗಳಿಂದಲೂ ಅಲಂಕರಿಸಿಕೊಂಡಿರುವಳು. ಆದರೆ ಅವಳ ಸೀರೆಯು ಮಟ್ಟಗೆ ತೆರತೆರನಾಗಿ ಹರಿದು ಚಿಂದಿಯಾಗಿರುವುದು. ಆಕೆಯ ತಲೆಯ

ಕೂದಲು ಕೆದರಿಹೋಗಿ ನೋಡುವವರಿಗೆ ಭಯವನ್ನುಂಟು ಮಾಡುವಂತಿರುವುದು. ಆಕೆಯ ಬಿರುನೋಟದ ಕಣ್ಣುಗಳಿಂದ ಬೆಂಕಿಯ ಕಿಡಿಗಳೇನಾದರೂ ಉದುರುತ್ತವೆಯೋ ಎಂಬಂತೆ ಕಂಡವರು ಭಾವಿಸಿಕೊಳ್ಳುತ್ತಿದ್ದರು.

ಇಂತಹ ಉನ್ಮಾದಿನಿಯನ್ನು ನೋಡುವುದಕ್ಕೆ ಆರಿಗೂ ಸಾಹಸವುಂಟಾಗದಿರಲು, ಎಲ್ಲರೂ ಆಕೆಗೆ ದಾರಿಯನ್ನು ಬಿಟ್ಟುಕೊಟ್ಟು ದೂರವಾಗಿ ಹೊರಟು ಹೋಗುತ್ತಿದ್ದರು. ಹೋಗುತ್ತಿದ್ದವರೆಲ್ಲರೂ ದಾರಿಯುದ್ದಕ್ಕೂ

"ಅತ್ಯುತ್ಕಟೈಃ ಪುಣ್ಯಪಾಪೈ-ರಿಹೈವ ಫಲಮಶ್ನುತೇ ||
ತ್ರಿಭಿರ್ವರ್ಷೈರ್ ಸ್ತ್ರಿಭಿರ್ಮಾಸೈ-ಸ್ತ್ರಿಭಿಃ ಪಕ್ಷೈಸ್ತ್ರಿಭಿರ್ದಿನೈಃ ||

ತಾತ್ಪರ್ಯ :—ಹೆಚ್ಚಿನ ಪಾಪಪುಣ್ಯಗಳನ್ನು ಮಾಡಿದವರು ಮೂರು ವರ್ಷಗಳೊಳಗಾಗಲಿ, ಮೂರು ತಿಂಗಳೊಳಗಾಗಲಿ, ಮೂರು ಪಕ್ಷಗಳೊಳಗಾಗಲಿ, ಮೂರು ದಿನಗಳೊಳಗಾಗಿಯೇ ಆಗಲಿ, ತಾವು ಮಾಡಿದ ಕೆಲಸಕ್ಕೆ ಫಲವನ್ನು ಇಲ್ಲಿಯೇ ಅನುಭವಿಸುವರು."

ಹೀಗೆಂದುಕೊಂಡು ಹೊರಟು ಹೋಗುತ್ತಿದ್ದರು.

ಆ ಉನ್ಮಾದಿನಿಯು ಬೇರೆಯಾರೂ ಅಲ್ಲ; ಆಕೆಯೇ ಮಹಾರಾಜಸಿಂಹನ ಹೆಂಡತಿಯಾದ ಕಮಲಿನಿಯು. ಇಂತಹ ಕಮಲಿನಿಯು ಹುಚ್ಚಿಯಾಗಿ ರಾಜಮಾರ್ಗದಲ್ಲಿ ಹೊರಟಿರುವಳು. ಆಕೆಯು ಒಂದೊಂದು ವೇಳೆ, 'ಮಹಾರಾಜಸಿಂಹ! ನೀನು ಮಗುವಗಿಂತಲೂ ಅಧಮ, ಅಧಮಾಧಮ,' ಎನ್ನುವಳು. ಒಂದೊಂದು ವೇಳೆ, 'ನಾನು ಬದುಕಿರುವವರೆಗೂ ಮಹಾರಾಣಿಯಾಗಲಿಕ್ಕೆ ಇತರರಿಗೆ ಆಸ್ಪದ ಕೊಡೆನು,' ಎನ್ನುವಳು.

ಆಕೆಯು ಒಂದು ಸಲ ಕೇಕೇ ಹಾಕಿಕೊಂಡು ನಗುವಳು; ಒಂದು ಸಲ ಗಳಗಳನೆ ಅಳುವಳು; ಒಂದು ಸಲ ಎದೆಯನ್ನು ಬಡಿದುಕೊಂಡು ಚೀತ್ಕಾರಮಾಡುವಳು; ಒಂದು ಸಲ, 'ಹಾ! ಜ್ವಾಲೆ ಜ್ವಾಲೆ! ಬೆಂಕಿ

ಬೆಂಕಿ, ಸುತ್ತಲೂ ಬೆಂಕಿ! ನಾನು ಈ ಯಾತನೆಯನ್ನು ತಡೆಯಲಾರೆನು; ನಾನು ಸಾಯುವೆನು, ಸಾಯುವೆನು, ಸತ್ತೇ ಸಾಯುವೆನು,' ಎನ್ನುವಳು.

ಆ ಹುಚ್ಚಿಯು ಒಂದು ವೇಳೆ, 'ಸಖಿ, ಮಾಧವಿ! ಬೇಗನೆ ನೀರನ್ನು ತಂದುಕೊಡು. ನನ್ನ ಕೈಯಲ್ಲಿ ರಕ್ತವು ಇನ್ನೂ ಹೋಗಿಲ್ಲ,' ಎನ್ನುವಳು; ಒಂದು ವೇಳೆ, 'ಪಿತೃಘಾತಿಯಾದ ಮಹಾರಾಜಸಿಂಹ! ನೀನು ಬದುಕಿದ್ದಿದ್ದರೆ ಬಲು ಕಷ್ಟವಾಗುತ್ತಿದ್ದಿತು. ನೀನು ಸತ್ತು ಬದುಕಿಕೊಂಡೆ,' ಎನ್ನುವಳು.

ಈ ರೀತಿಯಾಗಿ ಅರಚಿಕೊಳ್ಳುತ್ತಾ ಹುಚ್ಚಿ ಕಮಲಿನಿಯು ರಾಜಮಾರ್ಗದ ದೂಳನ್ನು ಮೈಗೆ ಬಳಿದುಕೊಂಡು ಸುತ್ತಲೂ ನೋಡುವಳು. ಬಳಿಕ ನೀರನ್ನು ಕಂಡು ಅದರ ಬಳಿಗೆ ಓಡಿಹೋಗಿ ತನ್ನ ಕೈಗಳನ್ನು ತೊಳೆದೇ ತೊಳೆಯುವಳು. ತರುವಾಯ ಕೈಗಳನ್ನು ನೋಡಿಕೊಂಡು, 'ಇಲ್ಲ ಇಲ್ಲ, ಇನ್ನೂ ಆ ರಕ್ತವು ತೊಡೆದು ಹೋಗಿಲ್ಲ; ಎಲ್ಲಿ ನೋಡಿದರೂ ರಕ್ತ, ರಕ್ತ, ರಕ್ತ,' ಎಂದು ಕೂಗಿಕೊಳ್ಳುವಳು. ರಾತ್ರಿಯಲ್ಲಿ ಆಕೆಯ ಗಿಕಟಾಟ್ಟಹಾಸವನ್ನು ಕೇಳಿ ಹುಡುಗರು ಮಕ್ಕಳು ಆದಿಯಾಗಿ ಎಲ್ಲರೂ ಹೆದರಿ ಹೆದರಿ ಸಾಯುತ್ತಿದ್ದರು.

ಆಕೆಯನ್ನು ನೋಡಿದ ಕೆಲವರು ದೂರ ಹೋಗುವರು; ಕೆಲವರು ಹೀಯಾಳಿಸುವರು; ಕೆಲವರು ಪಾಪಕ್ಕೆ ಸರಿಯಾದ ಫಲವೇ ಆಯಿತೆನ್ನುವರು; ಕೆಲವರು ಈ ದುರವಸ್ಥೆಯಲ್ಲಿಯೇ ಈಕೆಯು ಇನ್ನೂ ಹತ್ತೆಂಟು ವರ್ಷಗಳ ಕಾಲ ಬದುಕಿರಬೇಕೆನ್ನುವರು; ಕೆಲವರು ಆಕೆಯ ಮುಖವನ್ನೇ ನೋಡರು; ಕೆಲವರು ಆಕೆಯ ಸ್ಮರಣೆಯನ್ನೇ ಮಾಡರು; ಕೆಲವರು ಆಕೆ ನಡೆದ ದಾರಿಯಲ್ಲಿ ನಡೆಯರು, ಕೆಲವರು, 'ಹೇ ಭಗವಂತ! ಕಮಲಿನಿಗೆ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಾಗಿರುವುದು. ಇನ್ನಾದರೂ ಸಾಕುಮಾಡು. ನಾವು ಈಕೆಯ ದುಃಖವನ್ನು ನೋಡಲಾರೆವು,' ಎಂದು ಭಗವಂತನಲ್ಲಿ ಮೊರೆಯಿಡುತ್ತಿರುವರು.

ಹೀಗೆಯೇ ಇಪ್ಪತ್ತು ವರ್ಷಗಳ ಕಾಲವು ಕಳೆಯಿತು. ಒಂದು ದಿನ ಲಾವಣ್ಯಸಿಂಹನಿಗೆ ರಾಜ್ಯಾಭಿಷೇಕ ಮಹೋತ್ಸವವನ್ನು ನೆರವೇರಿ

ಸುವುದಕ್ಕಾಗಿ ತಕ್ಕ ಏರ್ಪಾಡುಗಳು ಅತಿವಿಜೃಂಭಣೆಯಿಂದ ನ
ಯುತ್ತಿರುವುವು. ರಾಜ್ಯಾಭಿಷೇಕ ಮಹೋತ್ಸವದ ಪ್ರಾತಃಕಾಲದಲ್ಲಿ ಅ
ಮನೆಯ ಮುಂಗಡೆಯಲ್ಲಿದ್ದ ಆದೊಂದು ಮರದ ಕೊಂಬೆಯಲ್ಲಿ ಕವ
ಲಿನಿಯ ದೇಹವು ನೇತಾಡುತ್ತಿದ್ದಿತು. ಪಾಪೀಯಸಿಯಾದ ಕಮಲಿನಿಯ
ಅಂದಿನ ದಿನವೇ ನರಕಯಾತನೆಯನ್ನು ತಡೆಯಲಾರದವಳಾಗಿ ನೇಣ ಹಾ
ಕೊಂಡು ಪ್ರಾಣಬಿಟ್ಟಿದ್ದಳು. ಮಹಾರಾಜ ಲಾವಣ್ಯಸಿಂಹನು ಆ ಮೃ
ದೇಹವನ್ನು ಕೆಳಗಿಳಿಸಿ ಅದಕ್ಕೆ ಯಥಾವಿಧಿಯಾಗಿ ಸತ್ಕಾರಮಾಡಿದನು.

ಕಮಲಿನಿಯು ಆತ್ಮಹತ್ಯೆಯಿಂದ ಲೋಕಾಂತರವನ್ನಯ್ದಿದ ಬಳಿ ಮಾರವಾಡದ ಸಂಸ್ಥಾನದಲ್ಲಿ ಸುಖಶಾಂತಿಗಳು ಏರ್ಪಟ್ಟು, ಪ್ರಜಾವಗ ದವರೆಲ್ಲರೂ ಪರಮಾನಂದಭರಿತರಾಗಿ ಕಾಲವನ್ನು ಕಳೆಯುತ್ತಿದ್ದರು.

ಶ್ರೀ ಕೃಷ್ಣಾರ್ಪಣಮಸ್ತು

**ಸಂಪೂರ್ಣಂ**

